# ಸೊಬಗಿನ ಸೋನೆ : ಒಂದು ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.) ಪದವಿಗಾಗಿ
ಸಲ್ಲಿಸಿದ ಮಹಾಪ್ರಬಂಧ)



ಸಂಶೋಧಕರು
ಪ್ರಭಾಕರ ಎಂ.

ಮಾರ್ಗದರ್ಶಕರು
ಡಾ. ಎಸ್.ಆರ್. ಚನ್ನವೀರಪ್ಪ
ಸಹ ಪ್ರಾಧ್ಯಾಪಕರು






ಭಾಷಾ ನಿಕಾಯ
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ- ೫೮೩ ೨೭೬
೨೦೧೬

# ಸೊಬಗಿನ ಸೋನೆ : ಒಂದು ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.)
ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)



ಸಂಶೋಧಕರು
ಪ್ರಭಾಕರ ಎಂ.

ಮಾರ್ಗದರ್ಶಕರು
ಡಾ. ಎಸ್.ಆರ್. ಚನ್ನವೀರಪ್ಪ
ಸಹ ಪ್ರಾಧ್ಯಾಪಕರು



ಭಾಷಾ ನಿಕಾಯ
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬
೨೦೧೬

## ಸಂಶೋಧಕರ ಪ್ರಮಾಣಪತ್ರ

**ಸೊಬಗಿನ ಸೋನೆ: ಒಂದು ಅಧ್ಯಯನ** ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗದ ಸಹ ಪ್ರಾಧ್ಯಾಪಕರಾದ **ಡಾ. ಎಸ್.ಆರ್. ಚನ್ನವೀರಪ್ಪ** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

**(ಪ್ರಭಾಕರ ಎಂ.)**
ಸಂಶೋಧನ ವಿದ್ಯಾರ್ಥಿ
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

ದಿನಾಂಕ:೦೮-೧೨-೨೦೧೬
ಸ್ಥಳ: ವಿದ್ಯಾರಣ್ಯ

# ಮಾರ್ಗದರ್ಶಕರ ದೃಢೀಕರಣ ಪತ್ರ

**ಪ್ರಭಾಕರ ಎಂ.** ಇವರು ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ಸೊಬಗಿನ ಸೋನೆ: ಒಂದು ಅಧ್ಯಯನ** ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

**(ಡಾ.ಎಸ್.ಆರ್. ಚನ್ನವೀರಪ್ಪ)**
ಸಹ ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

ದಿನಾಂಕ: ೧೮-೧೨-೨೦೧೬
ಸ್ಥಳ: ವಿದ್ಯಾರಣ್ಯ

# ಪರಿವಿಡಿ

ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಸ್ವರೂಪ

೧.೧. ಪೀಠಿಕೆ

೧.೨. ಅಧ್ಯಯನದ ಉದ್ದೇಶ

೧.೩. ಅಧ್ಯಯನದ ವ್ಯಾಪ್ತಿ

೧.೪. ಅಧ್ಯಯನದ ವೈಧಾನಿಕತೆ

೧.೫. ಅಧ್ಯಯನದ ಸ್ವರೂಪ

## ಅಧ್ಯಾಯ: ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಸ್ವರೂಪ

**ಪೀಠಿಕೆ**

ಮಧ್ಯಕಾಲೀನ ಕನ್ನಡ ಸಾಹಿತ್ಯ ಹನ್ನೆರಡನೆಯ ಶತಮಾನದಿಂದ ಹದಿನೆಂಟನೆ ಶತಮಾನದವರೆಗೆ ಬೆಳೆದುಬಂದಿದ್ದು, ಅದರಲ್ಲಿ ಸಾಂಗತ್ಯ ರೂಪವು ಒಂದು. ಈ ಅವಧಿಯ ಸಾಹಿತ್ಯವನ್ನು ನಡುಗನ್ನಡ ಘಟ್ಟವೆಂದು ಕರೆದಿದೆ. ಈ ಸಂದರ್ಭದಲ್ಲಿ ಸಾಹಿತ್ಯದ ವಿವಿಧ ಪ್ರಕಾರಗಳಾದ ಚಂಪು, ವಚನ, ರಗಳೆ, ಷಟ್ಪದಿ, ಕೀರ್ತನೆ, ಸಾಂಗತ್ಯ, ತ್ರಿಪದಿಗಳು ಕ್ರಮವಾಗಿ ಅಭಿವ್ಯಕ್ತಿ ಮಾಧ್ಯಮಗಳಾದವು. ಹತ್ತನೆಯ ಶತಮಾನದ ಸಾಹಿತ್ಯಕ್ಕಿಂತ ಭಿನ್ನವಾಗಿ ಹನ್ನೆರಡನೆಯ ಶತಮಾನದ ನಂತರದ ಸಾಹಿತ್ಯವು ವಸ್ತು, ಭಾಷೆ, ಶೈಲಿ, ಛಂದಸ್ಸುಗಳ ಪ್ರಭಾವದಿಂದ ಜನರ ಮನೋಧರ್ಮ ತಲುಪಿತು. ನಡುಗನ್ನಡ ಸಂದರ್ಭದಲ್ಲಿ ರಾಜರು ಕವಿಗಳಿಗೆ ಪ್ರೋತ್ಸಾಹ ಮತ್ತು ಆಶ್ರಯವನ್ನು ನೀಡಿ ಸಾಹಿತ್ಯ ಪೋಷಣೆ ಮಾಡಿದ್ದಾರೆ. ವಿಜಯನಗರ ಸಾಮ್ರಾಜ್ಯ ೧೩೩೬ರಲ್ಲಿ ಸ್ಥಾಪನೆಯಾಗಿ ೧೭ನೇ ಶತಮಾನದವರೆಗೂ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿತ್ತು. ಈ ಸಂದರ್ಭದಲ್ಲಿ ಸರ್ವಧರ್ಮ ಸಂಸ್ಕೃತಿಯನ್ನು ಅದರಲ್ಲೂ ಹಿಂದೂ ಸಂಸ್ಕೃತಿಯನ್ನು ಎತ್ತಿ ಹಿಡಿದ ಅತ್ಯಂತ ಪ್ರಸಿದ್ಧ ಸಾಮ್ರಾಜ್ಯವಾಗಿದೆ. ಈ ಕಾರಣದಿಂದ ಈ ಸಾಮ್ರಾಜ್ಯವು ದಕ್ಷಿಣ ಭಾರತದ ಇತಿಹಾಸದಲ್ಲಿ ಮಹತ್ವದ್ದಾಗಿದೆ. ಏಕೆಂದರೆ ಕಲೆ, ವಾಸ್ತುಶಿಲ್ಪ, ಸಾಹಿತ್ಯ, ಸಂಸ್ಕೃತಿ, ಧರ್ಮ, ಭಾಷೆಯನ್ನು ಪೋಷಿಸಿ ಸಾಹಿತ್ಯದ ದೇದೀಪ್ಯಮಾನ್ಯ ರಚನೆಗೆ ಪ್ರೇರಕರಾಗಿದ್ದಾರೆ. ಸಾಹಿತ್ಯವು ಅರಮನೆಯಿಂದ ನೆರಮನೆಯ ಕಡೆಗೆ ಹರಿದುಬಂದು ಜನಸಾಮಾನ್ಯರ ಸಾಹಿತ್ಯವಾಯಿತು.

ವಚನಕಾರರು ವಚನಗಳನ್ನು, ಹರಿಹರ ರಗಳೆಯನ್ನು ರಾಘವಾಂಕ, ಚಾಮರಸ, ಕುಮಾರವ್ಯಾಸ ಷಟ್ಪದಿಯನ್ನು, ಪುರಂದರದಾಸ, ಕನಕದಾಸ ಕೀರ್ತನೆಯನ್ನು, ರತ್ನಾಕರವರ್ಣಿ, ಸಂಚಿಹೊನ್ನಮ್ಮ ಸಾಂಗತ್ಯವನ್ನು, ಸರ್ವಜ್ಞ ತ್ರಿಪದಿಯನ್ನು ರಚಿಸಿ ಕನ್ನಡ ಸಾಹಿತ್ಯದ ಆಯಾಯ ಪ್ರಕಾರದಲ್ಲಿ ಪ್ರಸಿದ್ಧರಾಗಿದ್ದಾರೆ. ಸಾಮಾಜಿಕ, ಧಾರ್ಮಿಕ, ರಾಜಕೀಯ, ಆರ್ಥಿಕ ಹಾಗೂ ಇತರೆ ಕ್ಷೇತ್ರಗಳಲ್ಲಿ ಇದ್ದ ತಾರತಮ್ಯವನ್ನು ಪ್ರತಿರೋಧಿಸುವ ನಿಟ್ಟಿನಲ್ಲಿ ನಡುಗನ್ನಡ ಸಾಹಿತ್ಯ ಪ್ರಮುಖ ಸ್ಥಾನ ಪಡೆದಿದೆ. ಜನಸಾಮಾನ್ಯರ ಆಶೋತ್ತರಗಳನ್ನು ಕಾವ್ಯದಲ್ಲಿ ಕೃಷಿ ಮಾಡುವ ಮೂಲಕ ಜನಮನದ ಕವಿಗಳಾಗಿದ್ದಾರೆ. ಪ್ರತಿಯೊಬ್ಬ ಕವಿಯೂ ವಸ್ತು, ಭಾಷೆ, ಶೈಲಿ, ಛಂದಸ್ಸಿನ ಪ್ರಯೋಗದಲ್ಲಿ ನಾವೀನ್ಯತೆಯನ್ನು ಕಂಡುಕೊಂಡಿದ್ದಾರೆ. ಇಂತಹ ಹೊಸತನದ ಪರಿಸರದಲ್ಲಿ ಬದುಕಿ ಬರೆದ

ಕವಿ ದೇಪರಾಜ, ಆತನ ಕಾವ್ಯ ಸೊಬಗಿನ ಸೋನೆ ಒಂದು ಸಾಂಗತ್ಯ ಕೃತಿ. ಈತನನ್ನು ಸಾಂಗತ್ಯದ ಆದಿಕವಿಯೆಂದೂ, ಸೊಬಗಿನ ಸೋನೆಯನ್ನು ಸಾಂಗತ್ಯದ ಆದಿಕಾವ್ಯವೆಂದೂ ಕನ್ನಡ ಸಾಹಿತ್ಯದಲ್ಲಿ ಗುರುತಿಸಲಾಗಿದೆ.

ಸಾಂಗತ್ಯವು ಹದಿನೈದನೆಯ ಶತಮಾನದ ಆರಂಭದಲ್ಲಿ ರಚನೆಯಾಗಿದೆ ಎಂದು ವಿದ್ವಾಂಸರ ಅಭಿಪ್ರಾಯವಿದೆ. ಈ ಸಾಂಗತ್ಯ ಪ್ರಕಾರವು ನಾಡಿನ ಹಾಡುಗಬ್ಬವಾಗಿ ಪ್ರಸಿದ್ಧಿಯನ್ನು ಪಡೆದಿದೆ. ಇದು ವಿಶೇಷವಾಗಿ ಹೆಣ್ಣುಮಕ್ಕಳ ಸಾಹಿತ್ಯವೆಂದು ಕರೆಯಲ್ಪಟ್ಟು ಈ ಹಾಡಿನಲ್ಲಿ ಮಹಿಳೆಯರ ಹಾಡಿನ ಲಯದ ಗೇಯಗುಣವಿದೆ. ಮಹಿಳೆಯರು ತಮ್ಮ ಬದುಕಿನ ಮಧ್ಯದಲ್ಲಿ ಮನರಂಜನೆಗಾಗಿ ಸೃಜಿಸಿದ ಹಾಡುಗಳನ್ನು ಗಮನಿಸಿದರೆ ದೇಪರಾಜ ಶಿಷ್ಟಸಾಹಿತ್ಯದಲ್ಲಿ ಮೊದಲಬಾರಿಗೆ ಕಾವ್ಯರೂಪದ ಸಾಂಗತ್ಯವನ್ನು ಸೊಬಗಿನ ಸೋನೆಯ ಕೃತಿಯಲ್ಲಿ ಬಳಸಿರುವುದು ವಿಶೇಷವಾಗಿದೆ.

ಇದುವರೆವಿಗೂ ಸಾಂಗತ್ಯ ಕೃತಿಗಳಾದ ಭರತೇಶವೈಭವ, ಕುಮಾರರಾಮನ ಸಾಂಗತ್ಯಗಳು, ರಾಮನಾಥ ಚರಿತೆ, ಹದಿಬದೆಯಧರ್ಮ ಮೊದಲಾದ ಕಾವ್ಯಗಳನ್ನು ಕುರಿತು ಅಧ್ಯಯನಗಳು ನಡೆದಿವೆ. ಕನ್ನಡದ ಮೊದಲ ಸಾಂಗತ್ಯವೆಂಬ ಹೆಸರುಳ್ಳ 'ಸೊಬಗಿನ ಸೋನೆ' ಕುರಿತು ಸಮಗ್ರವಾಗಿ ಅಧ್ಯಯನ ನಡೆದಿಲ್ಲ. ಈ ಕೊರತೆಯನ್ನು ತುಂಬುವುದೇ ಈ ಅಧ್ಯಯನದ ಮುಖ್ಯ ಆಶಯವಾಗಿದೆ.

### ೧.೧. ಅಧ್ಯಯನದ ಉದ್ದೇಶ

ಸಾಹಿತ್ಯ ಕೃತಿಯು ಯಾವುದೇ ವಿಷಯಕ್ಕೆ ಸಂಬಂಧಿಸಿದಿದರೂ ಅದು ಕಾಲದೇಶಾತೀತ ವಾಗಿರುತ್ತದೆ. ಹಾಗೂ ಎಲ್ಲ ಕಾಲದಲ್ಲೂ ತನ್ನ ಪ್ರಸ್ತುತತೆಯನ್ನು ಉಳಿಸಿಕೊಂಡು ಬರುತ್ತದೆ. ಕವಿಯೊಬ್ಬ ಬದುಕಿದ ಕಾಲದ ಜೀವನ ಧರ್ಮದ ಜೊತೆಗೆ ತಾನು ಆಯ್ದುಕೊಂಡ ಕಲಾವಸ್ತು ಸಮಕಾಲೀನ ಪರಿಸರದೊಂದಿಗೆ ಹೇಗೆ ಮತ್ತು ಎಷ್ಟರಮಟ್ಟಿಗೆ ಸ್ಪಂದಿಸಿದ್ದಾನೆ ಎಂಬುದು ಆ ಕವಿ ಮತ್ತು ಕೃತಿಗೆ ಸಾರ್ವಕಾಲಿಕ ಮಹತ್ವ ಒದಗುತ್ತದೆ. ಈ ದೃಷ್ಟಿಯಿಂದ ದೇಪರಾಜ ಮತ್ತು ಆತನ ಕಾವ್ಯ 'ಸೊಬಗಿನ ಸೋನೆ'ಯನ್ನು ಅಧ್ಯಯನಕ್ಕೆ ಒಳಪಡಿಸುವ ಉದ್ದೇಶವಿಟ್ಟುಕೊಂಡ ಈ ಅಧ್ಯಯನ ಪ್ರಸ್ತುತವೆನಿಸಿದೆ. ಸೊಬಗಿನ ಸೋನೆ ಕಾವ್ಯದ ಕರ್ತೃ ಒಂದನೆಯ ದೇವರಾಯ, ದೇವರಾಜ ಅಥವಾ ದೇಪರಾಜ ಎಂಬ ಅಭಿಪ್ರಾಯಗಳು ಇದ್ದು, ವಿದ್ವಾಂಸರಲ್ಲಿ ಜಿಜ್ಞಾಸೆಗೆ ಕಾರಣವಾಗಿದೆ. ಸೊಬಗಿನ ಸೋನೆಯ ಕರ್ತೃವಿನ ತಂದೆ 'ಕಂಪ' ಎಂದಿದ್ದು ವಿಜಯನಗರದ ಸಂಗಮ ವಂಶದಲ್ಲಿ ಮೂರ್‍ನಾಲ್ಕು ಜನ ಕಂಪಣರ ಪ್ರಸ್ತಾಪವಿದೆ. ಕಂಪಣ ಎನ್ನುವ ಹೆಸರಿನ ಬಗ್ಗೆ ಭಿನ್ನಾಭಿಪ್ರಾಯಗಳಿದ್ದು, ಇದನ್ನು ಕವಿಯ ಇತಿವೃತ್ತದಲ್ಲಿ ಸ್ಪಷ್ಟಪಡಿಸಲಾಗಿದೆ. ಕವಿಯ ಮತ ಧರ್ಮ, ಸ್ಥಳ, ಕಾಲ, ಕೃತಿ ಕುರಿತು ತಿಳಿಸಲಾಗಿದೆ. ದೇಪರಾಜ 'ಸೊಬಗಿನ ಸೋನೆ' ಕಾವ್ಯದ ಮೂಲಕ ಹೊಸ ಭಾವ, ಭಾಷೆ, ವಸ್ತು, ಛಂದಸ್ಸನ್ನು ಪ್ರಯೋಗಪೂರ್ವಕವಾಗಿ ಶಿಷ್ಟ ಮಾದರಿ ಸಾಂಗತ್ಯ ಕಾವ್ಯ ಪರಂಪರೆಗೆ ಭದ್ರ ಬುನಾದಿಯನ್ನು ಹಾಕಿದ್ದಾನೆ. ಈ ಕಾವ್ಯ ವಿಶ್ಲೇಷಣೆಯಲ್ಲಿ ಸತಿ–ಪತಿ ಸಂಭಾಷಣೆಯುಳ್ಳ ಮೊದಲ ಕಾವ್ಯವಾಗಿದೆ. ವಸ್ತುವಿನ ದೃಷ್ಟಿಯಲ್ಲಿ ಮಹಿಳೆಯೇ ಈ ಕಾವ್ಯದ ಪ್ರಧಾನ ವಸ್ತು. ಈ ಕಾವ್ಯದಲ್ಲಿ ಯುದ್ಧದ ವರ್ಣನೆಗಳಿಗೆ ಹೆಚ್ಚು ಆದ್ಯತೆ ಕೊಡದಿದ್ದರೂ,

ಅಂದಿನ ಪ್ರಭುತ್ವವನ್ನು ಪ್ರಶ್ನಿಸುವ ಮೂಲಕ ಜೀವನ ಧರ್ಮವನ್ನು, ಸಂಸ್ಕೃತಿಯನ್ನು, ನೀತಿಯನ್ನು ಸಾರುವ ವಿಶಿಷ್ಟ ಕಾವ್ಯವೆನಿಸಿದೆ. ಈ ಎಲ್ಲ ವೈಶಿಷ್ಟ್ಯಗಳನ್ನು ವಿವೇಚಿಸಿ ವಿಶ್ಲೇಷಿಸುವುದರ ಜೊತೆಗೆ ಈ ಕಾವ್ಯದಲ್ಲಿ ಪ್ರತಿಪಾದಿತವಾಗಿರುವ ಸಾಂಸ್ಕೃತಿಕ ಅಂಶಗಳನ್ನು ಗುರುತಿಸಿ, ವ್ಯವಸ್ಥಿತ ಕ್ರಮದಲ್ಲಿ ಇರಿಸಿ ಈ ಕುರಿತು ವಿಜಯನಗರ ಕಾಲದ ವಿವಿಧ ಆಯಾಮಗಳಲ್ಲಿ ಹುದುಗಿರುವ ಸಾಂಸ್ಕೃತಿಕ ಒತ್ತಾಸೆಗಳನ್ನು ಅಧ್ಯಯನಕ್ಕೊಳಪಡಿಸಲಾಗಿದೆ.

### ೧.೨. ಅಧ್ಯಯನದ ವ್ಯಾಪ್ತಿ

ಈ ಅಧ್ಯಯನದ ವ್ಯಾಪ್ತಿಯಲ್ಲಿ ಸೊಬಗಿನ ಸೋನೆ: ಒಂದು ಅಧ್ಯಯನ ಕುರಿತ ಚರ್ಚೆಯಲ್ಲಿ ಕಾಲಬದ್ಧತೆಗೆ ಒಳಪಟ್ಟಿರುವುದರಿಂದ ಕವಿಯ ಇತಿವೃತ್ತ ವಿಚಾರ, ವಿಶೇಷವಾಗಿ ಈ ಕಾವ್ಯಕ್ಕೆ ಪ್ರೇರಣೆ–ಪ್ರಭಾವ ಹೊಂದಿರುವ ಕಥಾಸರಿತ್ಸಾಗರ, ದಂಡಿಯ ದಶಕುಮಾರ ಚರಿತೆ, ಮಧುರಾವಿಜಯಂ, ಕಾವ್ಯಗಳು ಪ್ರೇರಣೆಯಾಗಿದ್ದು, ನಂತರ ವರ್ಧಮಾನ ಚರಿತೆ, ವಿಕ್ರಮವಿಲಾಸ, ಮದನಮೋಹಿನಿ ಕಥೆ ಭೈರವೇಶ್ವರ ಕಾವ್ಯದ ಕಥಾಸೂತ್ರ ರತ್ನಾಕರ ಈ ಕೃತಿಗಳ ಮೇಲೆ ಪ್ರಭಾವ ಆಗಿದ್ದು, ಈ ಕೃತಿಗಳನ್ನು ಕಥೆ ಆಶಯದ ದೃಷ್ಟಿಯಿಂದ ತೌಲನಿಕವಾಗಿ ವಿವೇಚಿಸುವ ಪ್ರಯತ್ನ ಮಾಡಲಾಗಿದೆ. ಇದು ಈ ಅಧ್ಯಯನದ ವ್ಯಾಪ್ತಿಯಾಗಿದೆ.

### ೧.೩. ಅಧ್ಯಯನದ ವೈಧಾನಿಕತೆ

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಆಕರಗಳನ್ನು ನಾಡಿನ ಗ್ರಂಥಾಲಯಗಳಿಗೆ ಹೋಗಿ ವಿಷಯಕ್ಕೆ ಪೂರಕವಾದ ಮಾಹಿತಿಯನ್ನು ಸಂಗ್ರಹಿಸಿ, ಸಂಗ್ರಹಿಸಿದ ಮಾಹಿತಿಯನ್ನು ವರ್ಗೀಕರಿಸಿಕೊಂಡು ಅಧ್ಯಯನಮಾಡಿ, ಮನನಮಾಡಿಕೊಂಡು, ಅನುಸಂಧಾನ ವಿಧಾನವನ್ನು ಅನುಸರಿಸಲಾಗಿದೆ. ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದಂತೆ ಬಿ.ಎಸ್. ಸಣ್ಣಯ್ಯ, ವೀರಣ್ಣರಾಜೂರ, ಎನ್.ಎಸ್. ತಾರಾನಾಥ, ಕೆ.ಎಸ್. ಮಧುಸೂಧನ ಇನ್ನು ಮುಂತಾದ ವಿದ್ವಾಂಸರನ್ನು ಸಂಪರ್ಕಿಸಿ ಪ್ರಶ್ನಾವಳಿಗಳ ಮೂಲಕ ಮಾಹಿತಿಯನ್ನು ಸಂಗ್ರಹಿಸಿ ಖಚಿತಪಡಿಸಿಕೊಳ್ಳಲಾಗಿದೆ. ಒಟ್ಟಿನಲ್ಲಿ ಕ್ಷೇತ್ರಾಧ್ಯಯನ ಹಾಗೂ ಗ್ರಂಥಾಧ್ಯಯನಗಳ ವೈಧಾನಿಕತೆಯನ್ನು ಅಳವಡಿಸಿಕೊಂಡು ಅಧ್ಯಯನ ಮಾಡಲಾಗಿದೆ.

### ೧.೪. ಅಧ್ಯಯನದ ಸ್ವರೂಪ

ಅಧ್ಯಯನದ ಸ್ವರೂಪವೆಂದರೆ ಅಧ್ಯಯನದ 'ಚೌಕಟ್ಟು'. ಪ್ರಸ್ತುತ ಅಧ್ಯಯನ ತನ್ನದೇ ಆದ ಚೌಕಟ್ಟನ್ನು ಹೊಂದಿದೆ. ಈ ಚೌಕಟ್ಟನ್ನು ಅಧ್ಯಯನ ಸ್ವರೂಪವೆಂದು ಹೇಳಬಹುದು. ಅಧ್ಯಯನದ ಅನುಕೂಲಕ್ಕಾಗಿ ಈ ವಿಷಯವನ್ನು ಎಂಟು ಅಧ್ಯಾಯಗಳಾಗಿ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ.

ಅಧ್ಯಾಯ ಒಂದರಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಸ್ವರೂಪ ಕುರಿತು ವಿವರಿಸಿದೆ. ಪ್ರಸ್ತುತ ಅಧ್ಯಯನದ ಪೀಠಿಕೆ ಮತ್ತು ಮಹತ್ವವನ್ನು ಪರಿಚಯಿಸಿದೆ. 'ಸೊಬಗಿನ ಸೋನೆ'ಯು ಹಲವು ವೈಶಿಷ್ಟ್ಯತೆಗಳನ್ನು ಹೊಂದಿದ್ದು ಇದು ಛಂದಸ್ಸು, ಭಾಷೆ, ಶೈಲಿ, ವಸ್ತು,

ಮತ-ಧರ್ಮ, ಸತಿ-ಪತಿ ಸಂಭಾಷಣಾ ತಂತ್ರ ಒಳಗೊಂಡ ಮಹಿಳಾ ಪ್ರಧಾನ ಕಾವ್ಯವೆನಿಸಿದೆ. ಈ ಹಿನ್ನೆಲೆಯಲ್ಲಿ ಕಾವ್ಯದ ಅಧ್ಯಯನದ ಉದ್ದೇಶ, ವ್ಯಾಪ್ತಿ, ಅಧ್ಯಯನದ ವೈಧಾನಿಕತೆ, ಸ್ವರೂಪ ಕುರಿತು ಸ್ಪಷ್ಟಪಡಿಸಿಕೊಳ್ಳಲಾಗಿದೆ.

ಅಧ್ಯಾಯ ಎರಡರಲ್ಲಿ ಸೊಬಗಿನ ಸೋನೆ ಕುರಿತು ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ ಮಾಡಲಾಗಿದೆ. ಕನ್ನಡ ಸಾಹಿತ್ಯ ಚರಿತ್ರೆ, ಇತಿಹಾಸ, ಶಾಸನ, ಕಾವ್ಯ, ಛಂದಸ್ಸಿನ ಚರಿತ್ರೆಯ ಗ್ರಂಥಗಳು ಹಾಗೂ ಲೇಖನಗಳನ್ನು ಅನುಲಕ್ಷಿಸಿ ಬೇರೆ ಬೇರೆ ವಿದ್ವಾಂಸರ ಅಭಿಪ್ರಾಯಗಳನ್ನು ಉಲ್ಲೇಖಿಸಿ ವಿವರಿಸಿದೆ.

ಅಧ್ಯಾಯ ಮೂರು ಕವಿಯ ಇತಿವೃತ್ತದಲ್ಲಿ ಕವಿಯ ವೈಯಕ್ತಿಕ ವಿಚಾರ ಕುರಿತು ಇದುವರೆಗೆ ವಿದ್ವಾಂಸರು ನಡೆಸಿದ ಚರ್ಚೆಯಲ್ಲಿ ಕವಿಯ ಹೆಸರು, ತಂದೆ, ಕಾಲ, ಮತ-ಧರ್ಮ ಕುರಿತು ಹಾಗೂ ಅಲಭ್ಯ 'ಅಮರುಕ' ಕೃತಿಯನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ. ಈ ವಿಶ್ಲೇಷಣೆಗೆ ಕಾವ್ಯ, ಶಾಸನ ಹಾಗೂ ಇತರ ಗ್ರಂಥಗಳ ನೆರವನ್ನು ಪಡೆಯಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಸೊಬಗಿನ ಸೋನೆ ಕಾವ್ಯಕ್ಕೆ ಒದಗಿದ ಪ್ರೇರಣೆ-ಪ್ರಭಾವ ಕುರಿತು ಚರ್ಚಿಸಲಾಗಿದೆ. ಅಂದರೆ ಯಾವುದೇ ಸೃಜನಶೀಲ ಕೃತಿಯು ತನಗಿಂತ ಹಿಂದಿನ ಸಾಹಿತ್ಯ, ಸಿದ್ಧಾಂತ, ಪರಿಸರ, ಧರ್ಮ, ಭಾಷೆ, ಛಂದಸ್ಸು ಮುಂತಾದವುಗಳ ಪ್ರೇರಣೆ ಪ್ರಭಾವವನ್ನು ಪಡೆದುಕೊಂಡಿರುತ್ತದೆ. ಈ ಹಿನ್ನೆಲೆಯಲ್ಲಿ ನಾಗವರ್ಮನ ಛಂದೋಂಬುಧಿ, ಕರ್ಣಾಟಕ ಕಾದಂಬರಿ, ಹರಿಹರನ ರಗಳೆಗಳು, ರಾಘವಾಂಕನ ಹರಿಶ್ಚಂದ್ರ ಕಾವ್ಯ, ವಡ್ಡಾರಾಧನೆ, ಪಂಚತಂತ್ರದ ಕಥೆಗಳನ್ನು ಅಧ್ಯಯನ ಮಾಡಲಾಗಿ ಈ ಕೃತಿಗಳ ಪ್ರೇರಣೆ ಸೊಬಗಿನ ಸೋನೆ ಕಾವ್ಯಕ್ಕೆ ವಸ್ತುವಿನಲ್ಲಿ ನೇರವಾಗಿ ಆಗಿರದೆ ಕಾವ್ಯ ಅನುಸಂಧಾನ ಮಾರ್ಗವನ್ನು ಅನುಸರಿಸಿದ್ದಾನೆ. ಸಂಸ್ಕೃತ ಕೃತಿಗಳಾದ ಕಥಾ ಸರಿತ್ಸಾಗರ, ದಂಡಿಯ ದಶಕುಮಾರ ಚರಿತೆ, ಬಾಣನ ಕಾದಂಬರಿ, ಕಾಳಿದಾಸನ ಶಾಕುಂತಲ ನಾಟಕದ ಪ್ರಭಾವ ಮತ್ತು ಗಂಗಾದೇವಿಯ ಮಧುರಾವಿಜಯದಲ್ಲಿ ಕವಿಸ್ಮರಣೆ ಮತ್ತು ದೈವಸ್ತುತಿ ಪದ್ಯಗಳ ಮಾದರಿಯನ್ನು 'ಸೊಬಗಿನ ಸೋನೆ' ಕಾವ್ಯವು ಅನುಸರಿಸಿರುವುದನ್ನು ಕಂಡುಕೊಳ್ಳಲಾಗಿದೆ. ನಂತರ ಕನ್ನಡ ಸಾಂಗತ್ಯ ಕಾವ್ಯಗಳಾದ ಪದ್ಮಕವಿಯ ವರ್ಧಮಾನ ಚರಿತೆ, ವೀರಜನಪತಿಯ ವಿಕ್ರಮವಿಲಾಸ, ಲಕ್ಷ್ಮಯ್ಯನ ಮದನಮೋಹಿನಿ ಕಥೆ ಈ ಕಾವ್ಯಗಳನ್ನು ವಸ್ತುವಿನ ಆಶಯದೊಂದಿಗೆ ತೌಲನಿಕವಾಗಿ ಚರ್ಚಿಸಲಾಗಿದೆ. ಈ ಕಾವ್ಯಗಳ ಕೆಲವೊಂದು ಪದ್ಯಗಳು ಸೊಬಗಿನ ಸೋನೆಯ ಪದ್ಯಗಳಿಗೆ ಸಾಮ್ಯತೆಯಿರುವುದನ್ನು ಸ್ಪಷ್ಟಪಡಿಸಲಾಗಿದೆ.

ಅಧ್ಯಾಯ ಐದರಲ್ಲಿ ಸೊಬಗಿನ ಸೋನೆ ಕಾವ್ಯದ ವಸ್ತು ವಿವೇಚಿಸಿದೆ. ಅಧ್ಯಯನಕ್ಕೆ ಹಿನ್ನೆಲೆಯಾಗಿ ಕಾವ್ಯದ ಸಾರವನ್ನು ಕಾವ್ಯದ ಪ್ರಮುಖ ಪಾತ್ರಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ವಿಶ್ಲೇಷಿಸಿದೆ. ಈ ಪಾತ್ರಗಳಲ್ಲಿ ಸ್ತ್ರೀ ಮತ್ತು ಪುರುಷ ಪಾತ್ರಗಳೆಂದು ಪ್ರತ್ಯೇಕವಾಗಿ ಪರಿಚಯಿಸುತ್ತ ಕಾವ್ಯದ ಸಾಂಸ್ಕೃತಿಕ ದೃಷ್ಟಿಕೋನಗಳನ್ನಿಟ್ಟುಕೊಂಡು ಕಾವ್ಯ ವಿಮರ್ಶೆ ಮಾಡಿದೆ.

ಅಧ್ಯಾಯ ಆರರಲ್ಲಿ ಸೊಬಗಿನ ಸೋನೆ ಕಾವ್ಯದ ಭಾಷೆ, ಶೈಲಿ, ಛಂದಸ್ಸು, ಅಲಂಕಾರ, ನಾಣ್ನುಡಿ, ವರ್ಣನೆಯನ್ನು ಕಾವ್ಯದ ಹಿನ್ನೆಲೆಯಲ್ಲಿ ವಿಶ್ಲೇಷಿಸಲಾಗಿದೆ. ಸೊಬಗಿನ ಸೋನೆ

ಛಂದಸ್ಸಿನ ಕುರಿತು ಬೇರೆ ಬೇರೆ ವಿದ್ವಾಂಸರ ಅಭಿಪ್ರಾಯಗಳನ್ನು ಸಂಗ್ರಹಿಸಿ ಪ್ರತ್ಯೇಕವಾಗಿ ಚರ್ಚಿಸಲಾಗಿದೆ. 'ಸೊಬಗಿನ ಸೋನೆ' ಶಬ್ದದ ವಿಶ್ಲೇಷಣೆಯನ್ನು ನಿಘಂಟಿನ ಅರ್ಥದ ಹಿನ್ನೆಲೆಯಲ್ಲಿ ಕಾವ್ಯದ ಹೆಸರು, ಛಂದಸ್ಸು ಇವೆರಡಕ್ಕೂ ಒಂದೇ ಹೆಸರು ಇರುವುದು ಖಚಿತವಾಗುತ್ತದೆ. ಪ್ರಾಸ, ಅಲಂಕಾರಗಳನ್ನು ಸ್ಪಷ್ಟೀಕರಿಸಲು ಲಕ್ಷ್ಯ ಪದ್ಯಗಳನ್ನು ನೀಡಿ ವಿಶ್ಲೇಷಿಸಲಾಗಿದೆ.

ಅಧ್ಯಾಯ ಏಳರಲ್ಲಿ ಸೊಬಗಿನ ಸೋನೆ ಕಾವ್ಯದ ಸಾಂಸ್ಕೃತಿಕ ವಿವೇಚನೆಯನ್ನು ಅಷ್ಟಾದಶ ವರ್ಣನೆಗಳಲ್ಲಿ ಕೆಲವು ಪ್ರಾಕೃತಿಕ ಅಂಶಗಳಾದ ಸರೋವರ, ಸಮುದ್ರ, ಪರ್ವತ, ವನ, ಪುಷ್ಪ, ಪ್ರಾಣಿ-ಪಕ್ಷಿ, ಸೂರ್ಯೋದಯ, ಸೂರ್ಯಾಸ್ತ, ಋತುಮಾನ ಇವುಗಳನ್ನು ಕವಿ ವರ್ಣಿಸಿರುವ ಕೆಲವು ಲಕ್ಷ್ಯ-ಲಕ್ಷಣ ಪದ್ಯಗಳೊಂದಿಗೆ ದೈವಗಳ ವಿಷಯವಾಗಿ ಈ ಕಾವ್ಯದಲ್ಲಿ ಶಿವ, ಪಾರ್ವತಿ, ಮಹಾಕಾಳಿ, ಮುನಿ, ಕಾಪಾಲಿಕರು, ಯೋಗಿಣಿಯರ ಕುರಿತು ವ್ಯಕ್ತವಾದ ಭಾವನೆ ಲಕ್ಷ್ಯ ಲಕ್ಷಣ ಪದ್ಯದೊಂದಿಗೆ ಅಂದಿನ ಜನರ ಮನೋಧರ್ಮಗಳನ್ನು ಕುರಿತ ಭಾವನೆ ಕಾವ್ಯದ ಮೂಲಕ ಕಂಡುಕೊಳ್ಳಲಾಗಿದೆ. ವಿಜಯನಗರ ಆಳ್ವಿಕೆ ಸಂದರ್ಭದ ಅರಸರ ಸ್ಥಾನ-ಮಾನ, ರಾಜಕುಮಾರರ ಶಿಕ್ಷಣ, ರಕ್ಷಣೆ ನೀಡಿದ ತಳವಾರರು, ಅವರು ಬಳಸುತ್ತಿದ್ದ ಆಯುಧಗಳು ಕಾವ್ಯದ ಆಧಾರದಿಂದ ಪರಿಚಯಿಸಲಾಗಿದೆ. ಅಂದಿನ ಕಾಲದ ಸಾಮಾಜಿಕ ಸಂದರ್ಭದಲ್ಲಿ ಊರು, ಕೇರಿ, ಪಟ್ಟಣಗಳ ಸ್ವರೂಪವನ್ನು ಪರಿಚಯಿಸಲಾಗಿದೆ. ರಾಣಿಯ ಬಸಿರು, ಬಾಣಂತಿ, ಮಕ್ಕಳ ಚಿತ್ರಣದೊಂದಿಗೆ ಸ್ತ್ರೀ ವರ್ಣನೆ, ವೇಶ್ಯಾವಾಟಿಕೆ, ಬೇಡರು-ಬೇಟೆ, ಜೂಜು-ನೀತಿ ಕುರಿತು ದೇಪರಾಜನ ಅಭಿಪ್ರಾಯಗಳನ್ನು ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಚರ್ಚಿಸಲಾಗಿದೆ. ವಿಜಯನಗರ ಅರಸರ ಕಾಲದಲ್ಲಿ ಆಚರಣೆಯಲ್ಲಿದ್ದ ಬಲಿಪದ್ಧತಿ, ಪವಾಡ, ಮದುವೆ, ಪೆಣ್ಬುಯ್ಯಲ್, ಸ್ಮಶಾನ, ಕಾಮಶಾಸ್ತ್ರ ಈ ಕುರಿತು ಜನರ ನಂಬಿಕೆಗಳು, ಆಚರಣೆ ಹಾಗೂ ಸಂಪ್ರದಾಯಗಳನ್ನು ಕಾವ್ಯದ ಪ್ರಮುಖ ಪದ್ಯಗಳನ್ನು ಆಧರಿಸಿ ಚರ್ಚಿಸಲಾಗಿದೆ.

ಅಧ್ಯಾಯ ಎಂಟು ಸಮಾರೋಪ. ಈ ಕೊನೆಯ ಅಧ್ಯಾಯದಲ್ಲಿ ಅಧ್ಯಯನವು ಕಂಡುಕೊಂಡ ಮುಖ್ಯಾಂಶಗಳನ್ನು ದಾಖಲಿಸಲಾಗಿದೆ. ಇಡೀ ಅಧ್ಯಯನದ ಫಲಿತಗಳನ್ನು ತಾತ್ವಿಕ ಚೌಕಟ್ಟಿನಲ್ಲಿಟ್ಟು ಅದರ ಇತಿ-ಮಿತಿಗಳನ್ನು ಕಂಡುಕೊಳ್ಳಲಾಗಿದೆ. ಇದು ಇಡೀ ಪ್ರಬಂಧವನ್ನು ಅಮೂಲಾಗ್ರವಾಗಿ ಪುನರಾವಲೋಕನ ಮಾಡಲು ಅನುವು ಮಾಡಿಕೊಟ್ಟಿದೆ. ಹಾಗೆಯೇ ಮುಂದಿನ ಅಧ್ಯಯನದ ಸಾಧ್ಯತೆಗಳನ್ನು ತಿಳಿಸಲಾಗಿದೆ. ಕೊನೆಯಲ್ಲಿ ಅಧ್ಯಯನಕ್ಕೆ ಬಳಸಿಕೊಂಡ ಪರಾಮರ್ಶನ ಗ್ರಂಥಗಳ ಪಟ್ಟಿಯನ್ನು ಅಕಾರಾದಿಯಾಗಿ ನೀಡಲಾಗಿದೆ.



# ಅಧ್ಯಾಯ: ಎರಡು

## ಇದುವರೆಗಿನ ಅಧ್ಯಯನದ ಸಮೀಕ್ಷೆ

ಯಾವುದೇ ಒಂದು ಅಧ್ಯಯನವನ್ನು ಕೈಗೊಳ್ಳುವ ಪೂರ್ವದಲ್ಲಿ ಆ ಅಧ್ಯಯನಕ್ಕೆ ಸಂಬಂಧಿಸಿದಂತೆ ಇದುವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ ಮಾಡುವುದು ಬಹು ಮುಖ್ಯವೆನಿಸುತ್ತದೆ. ಏಕೆಂದರೆ ವಿಷಯವನ್ನು ಆಯ್ಕೆ ಮಾಡಿಕೊಂಡಾಗ, ಅಧ್ಯಯನದ ಉದ್ದೇಶಕ್ಕೆ ಸಂಬಂಧಿಸಿದಂತೆ ಈಗಾಗಲೇ ಚರ್ಚೆಗೆ ಒಳಪಟ್ಟ ವಿಷಯಗಳಿಗಿಂತಲೂ ಭಿನ್ನವಾದ ವಿಚಾರ ಹೇಳಲು ಈ ಸಮೀಕ್ಷೆ ಸಹಕಾರವಾಗುತ್ತದೆ.

ಸೊಬಗಿನ ಸೋನೆ: ಒಂದು ಅಧ್ಯಯನದ ಪೂರ್ವದಲ್ಲಿ ಗ್ರಂಥಾಲಯಗಳ ನೆರವಿನಿಂದ ಪ್ರಕಟಿತ ಗ್ರಂಥ ಮತ್ತು ಲೇಖನಗಳನ್ನು ಸಂಗ್ರಹಿಸಿ ಈ ಅಧ್ಯಾಯದಲ್ಲಿ ಸಮೀಕ್ಷೆ ನಡೆಸಲಾಗಿದೆ. ಸೊಬಗಿನ ಸೋನೆ ಕಾವ್ಯದ ಕರ್ತೃ, ಕೃತಿ, ಕಾಲ, ಮತ, ಭಾಷೆ, ಶೈಲಿ, ಛಂದಸ್ಸು, ವಸ್ತು, ಪಾತ್ರ ಮೊದಲಾದ ಅಂಶಗಳ ಕುರಿತು ಆರ್. ನರಸಿಂಹಾಚಾರ್ಯರಿಂದ ಹಿಡಿದು ಇಲ್ಲಿಯವರೆಗೆ ಬೇರೆ ಬೇರೆ ವಿದ್ವಾಂಸರು ಮಾಡಿರುವ ಚರ್ಚೆ, ಅಭಿಪ್ರಾಯ, ವಿಚಾರಗಳು ಪ್ರಕಟಣೆಗೊಂಡ ಕೃತಿಗಳ ಹಿನ್ನೆಲೆಯಲ್ಲಿ ಕಾಲಾನುಕ್ರಮದಲ್ಲಿ ವಿಶ್ಲೇಷಿಸಿ ಸಮೀಕ್ಷೆ ಮಾಡಲಾಗಿದೆ.

೧. ಆರ್. ನರಸಿಂಹಾಚಾರ್ಯ ಅವರು ೧೯೧೯ರಲ್ಲಿ ಕರ್ಣಾಟಕ ಕವಿಚರಿತೆ ದ್ವಿತೀಯ ಸಂಪುಟವನ್ನು ಪ್ರಕಟಿಸಿದ್ದಾರೆ. ಇದರಲ್ಲಿ "ದೇಪರಾಜ ಸೊಬಗಿನ ಸೋನೆ ಅಮರುಕ ಗ್ರಂಥಗಳನ್ನು ಬರೆದಿದ್ದು ಈತ ವಿಜಯನಗರದ ರಾಜವಂಶಕ್ಕೆ ಸೇರಿದ ಎರಡನೆಯ ಕಂಪಣ ಮಗನಾಗಿರಬಹುದು. ಸೊಬಗಿನ ಸೋನೆ ಸಾಂಗತ್ಯದಲ್ಲಿ ಬರೆದಿದೆ. ಅಮರುಕ ಸಂಸ್ಕೃತದಲ್ಲಿರುವ ಅಮರುಕ ಶತಕದ ಭಾಷಾಂತರ. ಇದು ಪರಿವರ್ಧಿನಿ ಷಟ್ಪದಿಯಲ್ಲಿ ಬರೆದಿದೆ. ಈತನ ಕಾಲ ಸುಮಾರು ೧೪೧೦ ಆಗಬಹುದು"[೧] ಎಂದಿದ್ದಾರೆ. ಇವರ ನಂತರ

೨. ತ.ಸು. ಶ್ಯಾಮರಾಯ ಮತ್ತು ಮೇ. ರಾಜೇಶ್ವರಯ್ಯ ಅವರು ಜನಪ್ರಿಯ ಕನ್ನಡ ಸಾಹಿತ್ಯ ಚರಿತ್ರೆಯನ್ನು ೧೯೫೦ರಲ್ಲಿ ಪ್ರಕಟಿಸಿದ್ದಾರೆ. ಇದರಲ್ಲಿ "ಬುಕ್ಕರಾಯನ ಮಗ ಎರಡನೆಯ ಕಂಪನೇ ದೇಪರಾಜ, ಶೈಲಿ-ಛಂದಸ್ಸುಗಳ ದೃಷ್ಟಿಯಿಂದ ಬಹುಶಃ ಇವನೇ ಮೊದಲನೆಯ ಸಾಂಗತ್ಯಕಾರನೆಂದು ತಿಳಿಯಬಹುದು"[೨] ಎಂಬ ಅಭಿಪ್ರಾಯಪಟ್ಟಿದ್ದಾರೆ.

೩. ರಂ.ಶ್ರೀ. ಮುಗಳಿ ಅವರು ೧೯೫೩ರಲ್ಲಿ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ದೇಪರಾಜನ

ಕುರಿತು "ಬುಕ್ಕರಾಯನ ಮೊಮ್ಮಗನಾಗಿ ೧೫ನೆಯ ಶತಮಾನದಲ್ಲಿದ್ದಿರಬೇಕೆಂದು"[೩] ಅಭಿಪ್ರಾಯ ಪಡುತ್ತಾರೆ. ಇವರ ಮತ್ತೊಂದು ಕೃತಿ 'ಪ್ರಾಚೀನ ಕನ್ನಡ ಸಾಹಿತ್ಯ ರೂಪಗಳು' ೧೯೭೩ರಲ್ಲಿ ಪ್ರಕಟಗೊಂಡಿದೆ. ಇದರಲ್ಲಿ ಸೊಬಗಿನ ಸೋನೆ ಛಂದಸ್ಸು ಕುರಿತು "ಸಾಂಗತ್ಯದ ಇದೊಂದು ಪ್ರಕಾರವೆಂಬುದು ಸ್ಪಷ್ಟ; ಉದ್ದಂಡ ಷಟ್ಪದಿ ಹೇಗೆ ವಾರ್ಧಕದ ಒಂದು ಪ್ರಕಾರವಾಗಿ ಪ್ರಯೋಗರೂಪದಲ್ಲಿ ಬಂದಿತೋ ಹಾಗೇ, ಇದು ಸಾಂಗತ್ಯವೇ ಅಲ್ಲ ಎನ್ನುವ ಮಾತು ಸರಿಯೆಂದು ಕಾಣುವುದಿಲ್ಲ. ದೇಪರಾಜನು ಮಾಡಿದ ಈ ಪ್ರಯೋಗದಿಂದ ಸ್ಫೂರ್ತಿಹೊಂದಿ ಮುಂದೆ ಕೆಲವರು ಈ ಪ್ರಕಾರದಲ್ಲಿ ಬರೆದಿದ್ದಾರೆ. ಸ್ವಲ್ಪ ಪ್ರಮಾಣದಲ್ಲಿ ಈ ಬಗೆಯ ಸಾಂಗತ್ಯ ರಚನೆ ಇದ್ದಿರಬಹುದೆಂಬುದಕ್ಕೆ ಚಿತ್ರದುರ್ಗದ ಶಾಸನ ದಿಕ್ಸೂಚಿಯಾಗಿದೆ"[೪] ಎನ್ನುತ್ತ ಸಾಂಗತ್ಯ ಛಂದಸ್ಸಿನಲ್ಲಿ ಸೊಬಗಿನ ಸೋನೆ ಎಂಬ ಒಂದು ಪ್ರಕಾರವಿದೆ ಎಂಬ ಅಭಿಪ್ರಾಯ ಪಟ್ಟಿದ್ದಾರೆ.

೪. ಡಿ.ಎಸ್. ಕರ್ಕಿ ಅವರು 'ಕನ್ನಡ ಛಂದೋವಿಕಾಸ' ಎಂಬ ಪಿಎಚ್.ಡಿ. ಪ್ರಬಂಧವನ್ನು ೧೯೫೬ರಲ್ಲಿ ಪ್ರಕಟಿಸಿದ್ದಾರೆ. ಇದರಲ್ಲಿ ಸಾಂಗತ್ಯದ ಉಗಮ ಕುರಿತು "ಸಾಂಗತ್ಯವು ತ್ರಿಪದಿಯಿಂದ ಹೊರಟ ಮಟ್ಟೆಂದು ತ್ರಿಪದಿಯ ಎರಡನೆಯ ಚರಣವನ್ನು ಆವೃತ್ತಿ ಮಾಡಿ ಹಾಡುವ ರೂಢಿಯು ಸಾಂಗತ್ಯದ ರೂಪನಿರ್ಮಾಣಕ್ಕೆ ದಾರಿಯನ್ನು ಮಾಡಿತು"[೫] ಎನ್ನುತ್ತ "ಸಾಂಗತ್ಯಗಳು ಹೆಚ್ಚಾಗಿ ವರ್ಣನೆಗೆ ಮೀಸಲಾದ ಕಾವ್ಯಗಳೆಂಬುದಕ್ಕೆ ಸಾಂಗತ್ಯದಲ್ಲಿ ರಚಿತವಾದ ದೇಪರಾಜನ ಸೊಬಗಿನ ಸೋನೆ ಎಂಬ ಹೆಸರೇ ಸೂಚಿಸುತ್ತದೆ"[೬] ಎಂದಿದ್ದಾರೆ. ಅಂದರೆ ವರ್ಣನಾ ಪ್ರಧಾನವಾದ ವಸ್ತುವನ್ನು ಹಾಡುವ ಶೈಲಿಯಿಂದ ಸೊಬಗಿನ ಸೋನೆ ಎಂಬ ಹೆಸರು ಬಂದಿರಬೇಕೆಂಬ ಅಭಿಪ್ರಾಯ ಡಿ.ಎಸ್. ಕರ್ಕಿಯವರದ್ದಾಗಿದೆ.

೫. ಹಂಪನಾಗರಾಜಯ್ಯ ಅವರು 'ಸಾಂಗತ್ಯದ ಕೆಲವು ಸಂಗತಿಗಳು' ಎಂಬ ಲೇಖನವನ್ನು ಪ್ರಬುದ್ಧ ಕರ್ನಾಟಕದಲ್ಲಿ ೧೯೬೦ರಲ್ಲಿ ಪ್ರಕಟಿಸಿದ್ದಾರೆ. ಇದರಲ್ಲಿ "ಸಾಂಗತ್ಯದ ಎರಡನೆಯ ಹಾಗೂ ನಾಲ್ಕನೆಯ ಪಾದಗಳಲ್ಲಿ ಎರಡು ವಿಷ್ಣುಗಣಗಳ ನಂತರ ಒಂದು ಬ್ರಹ್ಮಗಣ ಬರಬೇಕೆಂಬುದು ನಿಯಮ ಆದರೆ ಆ ಪದ್ಮಪೀಠನ ಗಣಕ್ಕೆ ಬದಲು ಪದ್ಮನಾಭನ ಗಣವೂ ಬರಬಹುದು ಇದನ್ನು ಸೊಬಗಿನ ಸೋನೆ ಸಾಂಗತ್ಯವೆಂದು ಕರೆಯುವುದುಂಟು"[೭] ಎಂದಿದ್ದಾರೆ. ಮತ್ತೊಂದೆಡೆ ಇವರು ೧೯೭೫ರಲ್ಲಿ ಸಾಂಗತ್ಯ ಕವಿಗಳು ಎಂಬ ಕೃತಿಯಲ್ಲಿ "ದೇಪರಾಜ ಸಾಂಗತ್ಯ ರೂಪದ ಉದ್ಘಾಟಕನೆಂದು, ಇಮ್ಮಡಿ ಕಂಪಣ ಮಧುರಾವಿಜಯದ ನಾಯಕನಾಗಿದ್ದು ಇವನ ಮಕ್ಕಳಲ್ಲಿ ಒಬ್ಬನು ದೇಪರಾಜ"[೮] ಎಂಬ ಅಭಿಪ್ರಾಯ ಪಟ್ಟಿದ್ದಾರೆ.

೬. ಬಿ.ಎಸ್. ಸಣ್ಣಯ್ಯ ಅವರು ೧೯೬೪ರಲ್ಲಿ ಸೊಬಗಿನ ಸೋನೆಯ ಆರು ಹಸ್ತಪ್ರತಿಗಳನ್ನು ಬಳಸಿಕೊಂಡು ಸೊಬಗಿನ ಸೋನೆ ಕಾವ್ಯ ಸಂಪಾದಿಸಿದ್ದಾರೆ. ಇದು ೧೯೭೦ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಿಂದ ಪ್ರಕಟಗೊಂಡಿದೆ. ಈ ಕಾವ್ಯದ ಪ್ರಸ್ತಾವನೆಯಲ್ಲಿ ಕವಿ ಹೆಸರು, ಕಾಲ, ಸ್ಥಳ, ಮತ, ತಂದೆ, ಕಥಾಸಾರ, ಕಥಾನಿರೂಪಣೆ, ಕಾವ್ಯದ ಆಕರ, ಭಾಷೆ, ಛಂದಸ್ಸು, ಗ್ರಂಥ ಸಂಸ್ಕರಣ ಕುರಿತು ಒಟ್ಟು ೪೬ ಪುಟಗಳಲ್ಲಿ ವಿವರಿಸಿದ್ದಾರೆ. ಇವರು "ಮೊದಲನೆಯ ದೇವರಾಯನೇ ದೇಪರಾಜ"[೯]ನೆಂದು ಕವಿಯ ಹೆಸರನ್ನು ಬಲವಾಗಿ ಪ್ರಸ್ತಾಪಿಸಿದ್ದಾರೆ.

ಹೇಳಿದ್ದಾರೆ. ತ.ಸು. ಶ್ಯಾಮರಾಯ ಮತ್ತು ಮೇ. ರಾಜೇಶ್ವರಯ್ಯ ಅವರು ದೇಪರಾಜನ ತಂದೆ ಕಂಪ ಎಂದು ಹೇಳಿದ್ದನ್ನು "ಎರಡನೆಯ ಕಂಪನೇ ದೇಪರಾಜ ಎಂಬ ತಪ್ಪು ನಿರ್ಣಯಕ್ಕೆ ಬಂದಿದ್ದಾರೆ. ಈ ಎರಡನೆಯ ಕಂಪನ ಮಗನೇ ಪ್ರಸ್ತುತ ಕವಿ ದೇಪರಾಜ"[೧೦] ಎಂಬುದಾಗಿ ಸ್ಪಷ್ಟಪಡಿಸಿದರು. ಇವರು ೧೯೭೦ರಲ್ಲಿ 'ಸಾಂಗತ್ಯದ ಆದಿ ಕವಿ ದೇಪರಾಜ' ಎಂಬ ಲೇಖನವನ್ನು ಇಕ್ಷುಗಂಗಾ ಕೃತಿಯಲ್ಲಿ ಪ್ರಕಟಿಸಿದ್ದಾರೆ. ಈ ಲೇಖನದಲ್ಲಿ ಕಥಾಸರಿತ್ಸಾಗರ, ದಶಕುಮಾರಚರಿತೆಯ ಕಥೆಗಳು ಸೊಬಗಿನ ಸೋನೆಯ ಕೆಲವು ಕಥೆಗಳಿಗೆ ಮೂಲವಾಗಿರುವುದನ್ನು ವಿವರಿಸಿದ್ದಾರೆ. ನಂತರ ೧೯೮೧ರಲ್ಲಿ ಕನ್ನಡ ಸಾಹಿತ್ಯ ಚರಿತ್ರೆ ಮೈಸೂರು ವಿಶ್ವವಿದ್ಯಾನಿಲಯ ಸಂಪುಟ-೫ನ್ನು ಪ್ರಕಟಿಸಿದೆ. ಇದರಲ್ಲಿ ಸಣ್ಣಯ್ಯ ಅವರು ದೇಪರಾಜನ ಇತಿವೃತ್ತ ಬರೆದಿದ್ದಾರೆ. ಇಲ್ಲಿ ಕವಿಯ ಕಾಲ, ಕಾವ್ಯದ ಕಥಾಸಾರ, ಆಕರ, ವಸ್ತುವಿನ್ಯಾಸ, ಪಾತ್ರರಚನೆ, ವರ್ಣನೆ, ಕೌಶಲ, ಭಾಷೆ, ಶೈಲಿ, ಅಮರುಕ, ಅಲಭ್ಯ ಕೃತಿಯ ಕುರಿತು ಒಟ್ಟು ೧೨ ಪುಟಗಳಲ್ಲಿ ಚರ್ಚಿಸಿದ್ದಾರೆ. ಹೀಗೆ ಬಿ.ಎಸ್. ಸಣ್ಣಯ್ಯ ಅವರು ದೇಪರಾಜ ಮತ್ತು ಸೊಬಗಿನ ಸೋನೆ ಕಾವ್ಯವನ್ನು ವಿವಿಧ ಕಾಲಘಟ್ಟಗಳಲ್ಲಿ ಬೇರೆ ಬೇರೆ ನೆಲೆಗಳಲ್ಲಿ ಚರ್ಚಿಸಿ ಅರ್ಥೈಸಲು ಪ್ರಯತ್ನಿಸಿದ್ದಾರೆ.

೭. ಜಿ. ವರದರಾಜ್‌ರಾವ್ ಅವರು ೧೯೬೬ರಲ್ಲಿ 'ಕುಮಾರರಾಮನ ಸಾಂಗತ್ಯಗಳು' ಎಂಬ ಪಿಎಚ್.ಡಿ. ಪ್ರಬಂಧವನ್ನು ಪ್ರಕಟಿಸಿದ್ದಾರೆ. ಇದರಲ್ಲಿ ಸೊಬಗಿನ ಸೋನೆಯು ಸಾಂಗತ್ಯ ಪ್ರಯೋಗದಲ್ಲಿ ವಿಶಿಷ್ಟವಾದ ಪ್ರಯೋಗವೆಂದು ಹೇಳಿದ್ದಾರೆ.

೮. ಟಿ.ವಿ. ವೆಂಕಟಾಚಲಶಾಸ್ತ್ರಿ ಅವರು ೧೯೭೦ರಲ್ಲಿ 'ಕನ್ನಡ ಛಂದಸ್ಸು' ಕೃತಿಯನ್ನು ಪ್ರಕಟಿಸಿದ್ದಾರೆ. ಇದರಲ್ಲಿ "ಸಾಂಗತ್ಯದಿಂದ ಬೇರೆಯಾಗಿ ತಿಳಿಯಲು 'ಸೊಬಗಿನ ಸೋನೆ' ಮತ್ತು ಆ ತೆರನಾದ ಕೃತಿಗಳ ಛಂದಸ್ಸನ್ನು ಹಿಂದಿನವರನ್ನು ಅನುಸರಿಸಿ 'ಸೊಬಗಿನ ಸೋನೆ', 'ಸೊಬಗಿನ ಸೋನೆ ವರ್ಣ', 'ಸೊಬಗಿನ ಸೋನೆ ಮಟ್ಟು' ಎಂದು ಮುಂತಾಗಿ ಕರೆಯುವುದು ಒಪ್ಪತಕ್ಕದ್ದೇ ಆಗಿದೆ. ಆದರೆ ನಾವು ಸೊಬಗಿನ ಸೋನೆಯನ್ನು ಸಾಂಗತ್ಯವೆಂದೇ ವ್ಯವಹರಿಸಬಹುದೆಂದು ತೋರುತ್ತದೆ"[೧೧] ಎಂದಿದ್ದಾರೆ.

೯. ಆರ್. ರಾಚಪ್ಪ ಅವರು ೧೯೭೧ರಲ್ಲಿ ಕರ್ನಾಟಕ ಭಾರತಿ ಸಂಪುಟ-೩, ಸಂಚಿಕೆ -೪ರಲ್ಲಿ 'ಸೊಬಗಿನ ಸೋನೆಯ ಛಂದಸ್ಸು' ಎಂಬ ಲೇಖನವನ್ನು ಪ್ರಕಟಿಸಿದ್ದಾರೆ. ಇವರು ಸೊಬಗಿನ ಸೋನೆ ಛಂದಸ್ಸನ್ನು ಅನುಸರಿಸಿ ರಚನೆಗೊಂಡ ಕೃತಿಗಳನ್ನು ಆಧರಿಸಿ ೧೧ ಪುಟಗಳಲ್ಲಿ ಛಂದಸ್ಸನ್ನು ವಿವರಿಸಿದ್ದಾರೆ. "ದೇಪರಾಜನ ಕೃತಿಯ ಛಂದಸ್ಸು ಸಾಂಗತ್ಯದಿಂದ ಭಿನ್ನವಾದುದು, ಅದೇ ವಿಶಿಷ್ಟವಾದ ಛಂದೋಲಯವುಳ್ಳ ಹಾಡುಗಬ್ಬವೆಂದು, ಹಾಡುಗಾರಿಕೆಯ ವ್ಯತ್ಯಾಸದಿಂದ ಇದು ಒಂದು ಸ್ವತಂತ್ರ ಛಂದೋಬಂಧವೆಂದು"[೧೨] ಭಾವಿಸಿದ್ದಾರೆ.

೧೦. ರು.ನಾ. ವಿಜಯಲಕ್ಷ್ಮಿ ಅವರು ೧೯೭೫ರಲ್ಲಿ ಅಪ್ರಕಟಿತ ಪಿಎಚ್.ಡಿ. ಪ್ರಬಂಧದ ಕನ್ನಡ ಸಾಂಗತ್ಯ ಸಾಹಿತ್ಯ ಪ್ರಕಾರ ಒಂದು ಸಮೀಕ್ಷೆಯಲ್ಲಿ "ಮೂಲ ಸಾಂಗತ್ಯದ ಬ್ರಹ್ಮಗಣಗಳನ್ನು ವಿಷ್ಣುಗಣಗಳಾಗಿ ಬದಲಿಸಿ ದೇಪರಾಜ ತನ್ನ ಸೊಬಗಿನ ಸೋನೆಯನ್ನು ಆದ್ಯಂತವಾಗಿ ವಿಷ್ಣುಗಣಗಳಿಂದಲೇ ರಚಿಸಿದ್ದಾನೆ. ಇದನ್ನು ಸಾಂಗತ್ಯದ ಒಂದು ಪ್ರಭೇದವೆಂದು"[೧೩] ಹೇಳಿದ್ದಾರೆ.



P.T.O

೧೧. ಸಿ.ಯು. ಮಂಜುನಾಥ ಅವರು ೧೯೭೭ರಲ್ಲಿ ಪ್ರಕಟಗೊಂಡ ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆಯ ಸಂಪುಟ ೪ ಭಾಗ ೧ರಲ್ಲಿ ದೇಪರಾಜನ ಕುರಿತು ೯ ಪುಟಗಳಲ್ಲಿ ವಿವರಿಸಿದ್ದಾರೆ. ಇದರಲ್ಲಿ "ಚರಿತ್ರೆಯ ಗ್ರಂಥಗಳಲ್ಲಿ ಬರುವ ಒಂದನೆಯ ದೇವರಾಯನೇ ಪ್ರಸ್ತುತ ಕಾವ್ಯಗಳ ಕರ್ತೃವೆಂದೂ ಅವನೇ ಆ ಕೃತಿಗಳಲ್ಲಿ ಉಕ್ತನಾಗಿರುವ ದೇಪರಾಜನೆಂದೂ ಅವನ ಕಾಲ ಕ್ರಿ.ಶ. ೧೪೧೦ ಎಂದು"[೧೪] ಗುರುತಿಸಿದ್ದಾರೆ. ಅಂದರೆ ಬಿ.ಎಸ್. ಸಣ್ಣಯ್ಯ ಅವರ ಅಭಿಪ್ರಾಯ ಪುಷ್ಟೀಕರಿಸಿದ್ದಾರೆ.

೧೨. ತೆಕ್ಕುಂಜೆ ಗೋಪಾಲಕೃಷ್ಣ ಭಟ್ಟರು 'ಸಾಂಗತ್ಯದ ಉಗಮ ಮತ್ತು ಪ್ರಾರಂಭ' ಎಂಬ ಲೇಖನವನ್ನು ೧೯೭೭ರಲ್ಲಿ ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಪ್ರಕಟಿಸಿದ್ದಾರೆ. ಇದರಲ್ಲಿ ಇವರು "ದೇಪರಾಜನು ಬರೆದುದು ಸಾಂಗತ್ಯವಲ್ಲ, ಸೊಬಗಿನ ಸೋನೆ ಸಾಂಗತ್ಯದ ನಡೆ ರೂಪಕ ತಾಳದಲ್ಲಿದೆ, ಸೊಬಗಿನ ಸೋನೆಯ ನಡೆ ಅಷ್ಟತಾಳದಲ್ಲಿದೆ"[೧೫] ಎಂದು ಸಂಗೀತದ ಹಿನ್ನೆಲೆಯಲ್ಲಿ ಭಿನ್ನ ಪ್ರಕಾರವೆಂದು ಗುರುತಿಸಿದ್ದಾರೆ.

೧೩. ಸಿ.ಪಿ. ಕೃಷ್ಣಕುಮಾರ್ ಅವರು ಸಾಂಗತ್ಯ, ಉಗಮ, ಹೆಸರು, ಲಕ್ಷಣ, ಇತಿಹಾಸ ಕುರಿತ ಲೇಖನವನ್ನು ಕನ್ನಡ ಛಂದಸ್ಸಿನ ಚರಿತ್ರೆ ದ್ವಿತೀಯ ಸಂಪುಟ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಿಂದ ೧೯೮೦ರಲ್ಲಿ ಪ್ರಕಟಗೊಂಡಿದೆ. ಇದರಲ್ಲಿ "ತ್ರಿಪದಿಯ ರಸದಶ ಸ್ಥಾನಗಳಲ್ಲಿನ ಬ್ರಹ್ಮಗಣ ವಿಷ್ಣುಗಣವಾಗಿ ಪ್ರಯೋಗವಾಗಿದ್ದೇ ಆದರೆ, ಸೊಬಗಿನ ಸೋನೆಯ ಧಾಟಿ ತನಗೆ ತಾನೇ ಸಿದ್ಧವಾಗುತ್ತದೆ. ಆದರೆ ಈ ರೀತಿ ಆಗಿದೆಯೆಂಬುದಕ್ಕೆ ಯಾವುದಾದರೂ ಆಧಾರವಿದೆಯೆ ಎಂಬ ಪ್ರಶ್ನೆ ಉದ್ಭವಿಸುತ್ತದೆ"[೧೬] ಎಂದು ಸೊಬಗಿನ ಸೋನೆ ಛಂದಸ್ಸಿನ ಉಗಮದ ಬಗ್ಗೆ ಆಲೋಚಿಸಿದ್ದಾರೆ.

೧೪. ಎನ್.ಎಸ್. ತಾರಾನಾಥ ಅವರು ದೇಪರಾಜ 'ಅಮರುಕ' ಎಂಬ ಲೇಖನವನ್ನು ೧೯೮೧ರಲ್ಲಿ ಪರಿಶೋಧನ ಕೃತಿಯಲ್ಲಿ ಪ್ರಕಟಿಸಿದ್ದಾರೆ. ಇದರಲ್ಲಿ "ಅಮರುಕ ಅನುವಾದ ಕೃತಿಯಾದರೂ ಅನುವಾದದ ಹಾಗೆ ಕಾಣಿಸಿಕೊಳ್ಳದಿರುವುದು ಮೆಚ್ಚತಕ್ಕದ್ದಾಗಿದೆ"[೧೭] ಎಂದಿದ್ದಾರೆ.

೧೫. ವೀರಣ್ಣ ರಾಜೂರ ಅವರು 'ಕನ್ನಡ ಸಾಂಗತ್ಯ ಸಾಹಿತ್ಯ' ಎಂಬ ಪಿಎಚ್.ಡಿ. ಪ್ರಬಂಧವನ್ನು ೧೯೮೫ರಲ್ಲಿ ಕನ್ನಡ ಸಾಹಿತ್ಯ ಪರಿಷತ್ ಮೂಲಕ ಪ್ರಕಟಿಸಿದ್ದಾರೆ. ಇದರಲ್ಲಿ ದೇಪರಾಜನ ಮೇರುಕೃತಿ ಸೊಬಗಿನ ಸೋನೆ ಕುರಿತು ಕಥೆ, ವರ್ಣನೆ, ಪಾತ್ರ, ಛಂದಸ್ಸು ಮೊದಲಾದ ವಿಷಯಗಳನ್ನು ೨೨ ಪುಟಗಳಲ್ಲಿ ವಿಶ್ಲೇಷಿಸಿದ್ದಾರೆ. ಇವರು "ಎಲ್ಲ ವಿದ್ವಾಂಸರು ಸ್ವೀಕರಿಸುತ್ತ ಬಂದ ಸುಮಾರು ೧೪೧೦ ಎಂಬುದನ್ನೇ ದೇಪರಾಜನ ಕಾಲವೆಂದೂ ವಿಜಯನಗರದ ಅರಸು ಮೊದಲನೆಯ ದೇವರಾಯನೇ ಈ ಕವಿಯೆಂದೂ ನಂಬಬಹುದು"[೧೮] ಎಂಬ ಅಭಿಪ್ರಾಯ ತಳೆದಿದ್ದಾರೆ. ಸೊಬಗಿನ ಸೋನೆಯ ಛಂದಸ್ಸನ್ನು ಕುರಿತು ಇವರು "ಸೋನೆ ಸಾಂಗತ್ಯ"[೧೯] ಎಂದು ಸಾಂಗತ್ಯ ಛಂದಸ್ಸಿನ ಒಂದು ಪ್ರಕಾರವೆಂದು ಗುರುತಿಸಿದ್ದಾರೆ.

೧೬. ಕೆ. ಕುಶಾಲಪ್ಪಗೌಡ ಅವರು ೧೯೯೯ರಲ್ಲಿ ಮಧುರಾವಿಜಯಂ ಕಾವ್ಯವನ್ನು ಕನ್ನಡಕ್ಕೆ ಅನುವಾದ ಮಾಡಿದ್ದಾರೆ. ಈ ಕಾವ್ಯದ ಪ್ರಸ್ತಾವನೆಯಲ್ಲಿ ಕಂಪ ಅಥವಾ ಕಂಪಣ ಹೆಸರಿನ

ತೊಡಕಿನ ಕುರಿತು ಚರ್ಚಿಸುತ್ತ "ಮೊದಲನೆಯ ದೇವರಾಯ ಕಂಪನ ಮಗನೂ ಅಲ್ಲ ಸೊಬಗಿನ ಸೋನೆಯ ದೇಪರಾಜ ಮೊದಲನೆಯ ದೇವರಾಜನೂ ಅಲ್ಲ. ದೇಪರಾಜ ಪ್ರಸಿದ್ಧನಾದ ಎರಡನೆಯ ಕಂಪಣನ ಮಗನಾಗಿರಬಹುದು"[೨೦] ಎಂಬ ಅಭಿಪ್ರಾಯಪಟ್ಟಿದ್ದಾರೆ.

೧೭. ಕೆ. ನಾಗೇಂದ್ರಪ್ಪ ಅವರು ೧೯೯೬ರಲ್ಲಿ 'ಹದಿನೈದನೆಯ ಶತಮಾನದ ಕನ್ನಡ ಸಾಹಿತ್ಯ ಚರಿತ್ರೆ'ಯನ್ನು ಪ್ರಕಟಿಸಿದ್ದಾರೆ. ಇದರಲ್ಲಿ ದೇಪರಾಜನ ಮತ, ಕಾಲ, ತಂದೆ, ಕಾವ್ಯದ ಹೆಸರು ಕುರಿತು ಒಟ್ಟು ೮ ಪುಟಗಳಷ್ಟು ವಿವರಣೆ ಮಾಡಿದ್ದಾರೆ. ಕವಿಯ ತಂದೆ ಬಗ್ಗೆ "ವಿಜಯನಗರ ಸಂಗಮ ಕುಲದಲ್ಲಿ ಮೂವರು ಕಂಪರು ಆಗಿಹೋಗಿದ್ದಾರೆ. ಇವರಲ್ಲಿ ಕವಿಯ ತಂದೆ ಯಾರೆಂಬುದು ಸಮಸ್ಯೆಯಾಗಿದೆ"[೨೧] ಎನ್ನುತ್ತಾರೆ. ಮುಂದುವರೆದು ಕಾವ್ಯದ ಹೆಸರನ್ನು ಕುರಿತು "ಸೊಬಗಿನ ಸೋನೆ ಎಂಬುದು ಒಂದು ಗ್ರಂಥದ ಹೆಸರಲ್ಲ; ಒಂದು ಛಂದಸ್ಸಿನ ಹೆಸರು; ಸಾಂಗತ್ಯದ ಒಂದು ಪ್ರಭೇದದ ಹೆಸರು, ಒಂದು ಮಟ್ಟಿನ ಹೆಸರು ಎನ್ನುತ್ತ ಸೊಬಗಿನ ಸೋನೆಯೂ ಸಾಂಗತ್ಯವೇ ಎಂದು ಹೇಳಬಹುದು"[೨೨] ಎಂಬ ಅಭಿಪ್ರಾಯ ನೀಡಿದ್ದಾರೆ.

೧೮. ನಾಗರತ್ನಮ್ಮ ಅವರು ೨೦೧೧ರಲ್ಲಿ ಸಾಂಗತ್ಯ ಸಾಹಿತ್ಯ ಕೃತಿಯನ್ನು ಪ್ರಕಟಿಸಿದ್ದಾರೆ. ಈ ಕೃತಿಯಲ್ಲಿ ದೇಪರಾಜ; ಸೊಬಗಿನ ಸೋನೆ, ಛಂದಸ್ಸು ಕುರಿತು ಒಟ್ಟು ೭ ಪುಟಗಳಲ್ಲಿ ಪರಿಚಯಿಸಿದ್ದಾರೆ. ಇವರು "ಸೊಬಗಿನ ಸೋನೆ ಎಂಬ ಹೆಸರನ್ನು ಕವಿ ದೇಪರಾಜ ಕಾವ್ಯಕ್ಕೂ ಹಾಗೂ ಅದರ ಛಂದಸ್ಸಿಗೂ ಏಕಾರ್ಥವಾಗಿ ಬಳಸಿದಂತೆ ತೋರುತ್ತದೆ"[೨೩] ಎಂದಿದ್ದಾರೆ.

೧೯. ವೈ.ಎಸ್. ಪುಟ್ಟಸ್ವಾಮಿ ಅವರು ೨೦೧೨ರಲ್ಲಿ "ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಶೃಂಗಾರ ನಿರೂಪಣೆ" ಎಂಬ ಅಪ್ರಕಟಿತ ಪಿಎಚ್.ಡಿ. ಪ್ರಬಂಧದಲ್ಲಿ ಸೊಬಗಿನ ಸೋನೆಯ ವಿಕ್ರಮ-ಪತ್ರಿಣಿಯರ ಸಂಭೋಗ ಶೃಂಗಾರದ ವರ್ಣನೆಯನ್ನು ಮಾಡಿದ್ದಾರೆ.

೨೦. ಎಸ್. ವಿದ್ಯಾಶಂಕರ ಅವರು ವೀರಶೈವ ಸಾಹಿತ್ಯ ಚರಿತ್ರೆ ಸಂಪುಟ-೩, ಭಾಗ ೧ನ್ನು ೨೦೧೪ರಲ್ಲಿ ಪ್ರಕಟಿಸಿದ್ದಾರೆ. ಇದರಲ್ಲಿ ಎಸ್. ವಿದ್ಯಾಶಂಕರ ಅವರು "ಕವಿ ದೇಪರಾಜ ವಿಜಯನಗರದ ಅರಸುಗಳಲ್ಲಿ ಒಬ್ಬ ಆದರೆ ಇತಿಹಾಸ ಗುರುತಿಸುವಂತಹ ಮೇಧಾವಿ ಕವಿಯೂ ಅಲ್ಲ ಅವನ 'ಸೊಬಗಿನ ಸೋನೆ' ಕಥೆಗಳ ಆಗರ. ಒಳ್ಳೆಯ ಕಥನಕಾರನಾಗಿ ಅನ್ಯಮೂಲಗಳಿಂದ ಕಥೆಗಳನ್ನು ಕಲೆಹಾಕಿ ಸಾಂಗತ್ಯದಲ್ಲಿ ಹೇಳಿರುವನು"[೨೪] ಎನ್ನುತ್ತಾರೆ.

ಈ ಮೇಲಿನ ಅಧ್ಯಯನಗಳ ಸಮೀಕ್ಷೆಯ ಹಿನ್ನೆಲೆಯಲ್ಲಿ ಪ್ರಮುಖವಾಗಿ ಕವಿ ಹೆಸರು. ಕವಿಯ ತಂದೆ, ಕೃತಿಯ ಛಂದಸ್ಸು, ಕಾವ್ಯ ಪ್ರೇರಣೆ, ಪ್ರಭಾವ, ವಸ್ತು ಸಂಬಂಧಿಸಿದಂತೆ ಮತ್ತೆ ಮತ್ತೆ ಚರ್ಚೆಗೆ ಒಳಪಟ್ಟಿರುವುದು ಕಂಡುಬರುತ್ತದೆ. ಆದರೆ ಸಮಗ್ರವಾಗಿ ಅಧ್ಯಯನ ನಡೆಯದಿರುವುದನ್ನು ಮನಗಂಡು ಇದುವರೆಗೆ ನಡೆದ ಹಾಗೂ ನಡೆಯಬೇಕಾದ ಅಧ್ಯಯನಗಳಲ್ಲಿ ಹಲವು ವಿದ್ವಾಂಸರೊಂದಿಗೆ ಚರ್ಚಿಸಿ ಪ್ರಸ್ತುತ ಸೊಬಗಿನ ಸೋನೆ: ಒಂದು ಅಧ್ಯಯನ ಯೋಗ್ಯವೆಂದು ತಿಳಿದು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ.

## ಅಡಿ ಟಿಪ್ಪಣಿ

೧. ಆರ್. ನರಸಿಂಹಾಚಾರ್ಯ, ಕರ್ನಾಟಕ ಕವಿಚರಿತೆ, ದ್ವಿತೀಯ ಸಂಪುಟ ಪುಟ-೨.

೨. ತ.ಸು. ಶ್ಯಾಮರಾಯ, ಮೇ ರಾಜೇಶ್ವರಯ್ಯ, ಜನಪ್ರಿಯ ಕನ್ನಡ ಸಾಹಿತ್ಯ ಚರಿತ್ರೆ ಪುಟ ೫೪೪.

೩. ರಂ.ಶ್ರೀ ಮುಗಳಿ, ಕನ್ನಡ ಸಾಹಿತ್ಯ ಚರಿತ್ರೆ ಪುಟ ೨೬೩.

೪. ರಂ.ಶ್ರೀ. ಮುಗಳಿ, ಪ್ರಾಚೀನ ಕನ್ನಡ ಸಾಹಿತ್ಯ ರೂಪಗಳು, ಪುಟ ೨೪೫.

೫. ಡಿ.ಎಸ್. ಕರ್ಕಿ, ಕನ್ನಡ ಛಂದೋವಿಕಾಸ, ಪುಟ ೨೧೩.

೬. ಅದೇ ಪುಟ ೨೧೭.

೭. ಹಂಪನಾಗರಾಜಯ್ಯ ಸಾಂಗತ್ಯದ ಕೆಲವು ಸಂಗತಿಗಳು ಪ್ರಬುದ್ಧ ಕರ್ನಾಟಕ ಸಂಪುಟ ೪೨, ಸಂಚಿಕೆ ೧, ಪುಟ ೧೩೩.

೮. ಹಂಪನಾಗರಾಜಯ್ಯ, ಸಾಂಗತ್ಯ ಕವಿಗಳು, ಪುಟ ೧೦.

೯. ಬಿ.ಎಸ್. ಸಣ್ಣಯ್ಯ ಸಂ. ಸೊಬಗಿನ ಸೋನೆ ಪ್ರಸ್ತಾವನೆ ಪುಟ IX.

೧೦. ಅದೇ ಪುಟ XI.

೧೧. ಟಿ.ವಿ. ವೆಂಕಟಾಚಲಶಾಸ್ತ್ರಿ, ಕನ್ನಡ ಛಂದಸ್ಸು, ಪುಟ ೮೪-೮೫.

೧೨. ಆರ್. ರಾಚಪ್ಪ, ಸೊಬಗಿನ ಸೋನೆ ಛಂದಸ್ಸು, ಕರ್ನಾಟಕ ಭಾರತಿ, ಸಂಪುಟ-೩, ಸಂಚಿಕೆ ೪, ಏಪ್ರಿಲ್ ೧೯೭೧, ಪುಟ ೧೧೩.

೧೩. ರು.ನಾ. ವಿಜಯಲಕ್ಷ್ಮಿ, ಕನ್ನಡ ಸಾಂಗತ್ಯ ಪ್ರಕಾರ ಒಂದು ಸಮೀಕ್ಷೆ, ಪುಟ ೪.

೧೪. ಸಿ.ಯು. ಮಂಜುನಾಥ, ದೇಪರಾಜ ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂಪುಟ-೪, ಭಾಗ-೧, ಪುಟ ೧೪೩.

೧೫. ತೆಕ್ಕುಂಜೆ ಗೋಪಾಲಕೃಷ್ಣಭಟ್ಟ, ಸಾಂಗತ್ಯದ ಉಗಮ ಮತ್ತು ಪ್ರಾರಂಭ, ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂಪುಟ-೪, ಭಾಗ-೧ ಪುಟ ೧೪೦.

೧೬. ಹಾ.ಮಾ.ನಾಯಕ (ಪ್ರ.ಸಂ.) ಕನ್ನಡ ಛಂದಸ್ಸಿನ ಚರಿತ್ರೆ ದ್ವಿತೀಯ ಸಂಪುಟ.ಪುಟ ೨೮೫.

೧೭. ಎನ್.ಎಸ್. ತಾರಾನಾಥ, ಪರಿಶೋಧನ ಭಾರತೀ ಪ್ರಕಾಶನ, ಮೈಸೂರು ಪುಟ ೫೦.

೧೮. ವೀರಣ್ಣ ರಾಜೂರ, ಕನ್ನಡ ಸಾಂಗತ್ಯ ಸಾಹಿತ್ಯ ಪುಟ ೧೮೬.

೧೯. ಅದೇ ಪುಟ ೧೦೫.

೨೦. ಕುಶಾಲಪ್ಪಗೌಡ ಕೆ., (ಅನು) ಮಧುರಾ ವಿಜಯಂ ಪ್ರಸ್ತಾವನೆ ಪುಟ ೨೬.

೨೧. ನಾಗೇಂದ್ರಪ್ಪ ಕೆ., ಹದಿನೈದನೆಯ ಶತಮಾನದ ಕನ್ನಡ ಸಾಹಿತ್ಯ ಚರಿತ್ರೆ ಪುಟ ೯.

೨೨. ಅದೇ ಪುಟ ೧೪

೨೩. ನಾಗರತ್ನಮ್ಮ, ಸಾಂಗತ್ಯ ಸಾಹಿತ್ಯ ಪುಟ ೧೭.

೨೪. ವಿದ್ಯಾಶಂಕರ ಎಸ್., ವೀರಶೈವ ಸಾಹಿತ್ಯ ಚರಿತ್ರೆ, ಸಂಪುಟ-೩, ಭಾಗ-೧, ಪುಟ ೪೩೭.



ಅಧ್ಯಾಯ : ಮೂರು

# ಕವಿಯ ಇತಿವೃತ್ತ ವಿಚಾರ

೩.೧. ದೇಪರಾಜನ ತಂದೆ

೩.೨. ಕವಿ ಹೆಸರು

೩.೩. ದೇಪರಾಜನ ಕಾಲ

೩.೪. ದೇಪರಾಜನ ಮತ

೩.೫. ಅಮರುಕ (ದೇಪರಾಜನ ಅಲಭ್ಯ ಕೃತಿ ಕುರಿತು)

# ಅಧ್ಯಾಯ : ಮೂರು

# ಕವಿಯ ಇತಿವೃತ್ತ ವಿಚಾರ

ಕವಿಯ ಕಾವ್ಯವನ್ನು ಅರ್ಥಮಾಡಿಕೊಳ್ಳಬೇಕಾದರೆ, ಅದಕ್ಕೆ ಮೊದಲು ಆ ಕವಿಯ ಚರಿತ್ರೆ ಮತ್ತು ಚಾರಿತ್ರ್ಯಗಳನ್ನು ತಿಳಿದುಕೊಳ್ಳಬೇಕಾಗುತ್ತದೆ. ಏಕೆಂದರೆ ಕವಿಯ ವ್ಯಕ್ತಿತ್ವದ ಪ್ರಭಾವ ಆತನ ಕಾವ್ಯದ ಮೇಲೆ ಇದ್ದೇ ಇರುತ್ತದೆ. ಸಾಹಿತ್ಯ ಚರಿತ್ರೆಯ ಅಧ್ಯಯನದ ದೃಷ್ಟಿಯಿಂದ ಕವಿಯ ವ್ಯಕ್ತಿತ್ವ ಬಹುಮುಖ್ಯವಾಗುತ್ತದೆ. ಸಾಹಿತ್ಯವು ಜೀವನದ ಪ್ರತಿಬಿಂಬವೇ ಆಗಿದೆ. ಸಾಹಿತ್ಯ ಕಾಲಾತೀತ, ದೇಶಾತೀತವಾಗಿರುತ್ತದೆ. ಮಾನವ ಸ್ವಭಾವಗಳನ್ನು, ಸಮಾಜದ ಚಿತ್ರಣವನ್ನು ನಾಡಿನ ಸಮಸ್ಯೆಗಳನ್ನು ಕವಿ ತನ್ನ ಅನುಭವಕ್ಕೆ ತಂದುಕೊಂಡು ಸಾಹಿತ್ಯದ ಮೂಲಕ ವ್ಯಕ್ತಪಡಿಸುತ್ತಾನೆ. ಕವಿಗೂ ಮತ್ತು ನಾಡಿಗೂ ಅನ್ಯೋನ್ಯವಾದ ಸಂಬಂಧವಿರುತ್ತದೆ. ಕವಿ ಸಮಕಾಲೀನ ಸಮಸ್ಯೆಗಳನ್ನು ನೋಡಿ, ಭಾವಿಸಿ, ಸ್ಪಂದಿಸಿ ಸಾರ್ವಕಾಲಿಕವಾದ ಸತ್ಯವನ್ನು ಪ್ರಸ್ತುತಪಡಿಸುತ್ತಾನೆ. ಸಾಹಿತ್ಯ ಮತ್ತು ಜೀವನಗಳ ಸಂಬಂಧದಿಂದ ಆ ಕಾಲದ ಸಾಮಾಜಿಕ ಮೌಲ್ಯಗಳನ್ನು ತಿಳಿಯಲು ಸಾಧ್ಯವಾಗುತ್ತದೆ. ಈ ಹಿನ್ನೆಲೆಯಲ್ಲಿ ಕರ್ನಾಟಕ ಸಂಸ್ಕೃತಿಯ ವಿವಿಧ ಮಜಲುಗಳನ್ನು ತಿಳಿದುಕೊಂಡು ಪರಿಚಯಿಸುವುದಕ್ಕೆ ಸಹಕಾರಿಯಾಗುತ್ತದೆ.

ಪ್ರಾಚೀನ ಕನ್ನಡ ಕವಿಗಳು ತಮ್ಮ ಕೃತಿಗಳಲ್ಲಿ ವೈಯಕ್ತಿಕ ವಿಚಾರಗಳಿಗೆ ಪ್ರಾಮುಖ್ಯತೆ ನೀಡಿಲ್ಲ. ಹಾಗಾಗಿ ಕವಿಯ ಕಾಲ, ದೇಶ, ಮತ, ಧರ್ಮ, ತಂದೆ, ತಾಯಿ, ಗುರು ಮತ್ತು ಕೃತಿಗಳು ಮುಂತಾದವುಗಳನ್ನು ತಿಳಿದುಕೊಳ್ಳಲು ಅನಿವಾರ್ಯವಾಗಿ ಬಾಹ್ಯ ಆಧಾರಗಳನ್ನು ಅವಲಂಬಿಸಬೇಕಾಗಿದೆ. ಪ್ರಾಚೀನ ಕನ್ನಡ ಕವಿಗಳ ಹಾಗೆಯೇ 'ಸೊಬಗಿನ ಸೋನೆ'ಯ ಕರ್ತೃ ದೇಪರಾಜನ ವೈಯಕ್ತಿಕ ವಿಚಾರಗಳ ಕುರಿತು ಸ್ಪಷ್ಟೀಕರಣವಿಲ್ಲ. ಮೂಲ ಆಕರಗಳ ಅಲಭ್ಯತೆಯಿಂದಾಗಿ ಬಾಹ್ಯ ಆಕರಗಳನ್ನು ಆಧರಿಸಿ ದೇಪರಾಜ ಕವಿಯ ವ್ಯಕ್ತಿತ್ವವನ್ನು ಕಟ್ಟಿಕೊಳ್ಳಬೇಕಾಗುತ್ತದೆ.

### ೩.೧. ದೇಪರಾಜನ ತಂದೆ

ದೇಪರಾಜ 'ಸೊಬಗಿನ ಸೋನೆ' ಮತ್ತು 'ಅಮರುಕ' ಎಂಬ ಎರಡು ಕಾವ್ಯಗಳನ್ನು ಕನ್ನಡದಲ್ಲಿ ಬರೆದ ಕವಿ. ಸೊಬಗಿನ ಸೋನೆ ಕಾವ್ಯದ ಪದ್ಯವೊಂದರಲ್ಲಿ ಕವಿಯ ತಂದೆಯನ್ನು ಮತ್ತು ಕವಿಯನ್ನು ಕುರಿತಂತೆ ಹೀಗಿದೆ.

ಸಂಗಮೇಂದ್ರನ ಕುಲದಿಂಗಡಲಿಗೆ ನೆಜಿ
ದಿಂಗಳನಿಪ ಕಂಪಸುತ ಕೇಳ
ಕಂಗೊಳಿಸುವ ದೇಪನೃಪ ಮುನ್ನೆಜೆಯದ
ಮಂಗಳವಪ್ಪೊಂದು ಕಥೆವೇಳ (೧/೧೭)

ವಿಜಯನಗರ ಸಾಮ್ರಾಜ್ಯವನ್ನು ಆಳಿದ ಮೊದಲ ವಂಶ ಈ ಸಂಗಮ. ಸಂಗಮ ವಂಶಕ್ಕೆ ಸೇರಿದ ಕಂಪನ ಮಗನೇ ಕವಿ ದೇಪರಾಜ ಎಂಬುದು ಖಚಿತವಾಗುತ್ತದೆ. ಸಂಗಮ ವಂಶದಲ್ಲಿ ಮೂರು ಜನ ಕಂಪಣರ ಪ್ರಸ್ತಾಪ ಬರುತ್ತದೆ. ದೇಪರಾಜ ಕವಿಯ ತಂದೆ ಎಷ್ಟನೇ ಕಂಪನೆಂಬುದರ ಬಗ್ಗೆ ಸ್ಪಷ್ಟತೆಯಿಲ್ಲದಿರುವುದರಿಂದ ಎಷ್ಟನೇ ಕಂಪನ ಮಗನೆಂಬುದು ಸಮಸ್ಯೆಯಾಗಿದೆ. ಈ ಕುರಿತು ಅನೇಕ ವಿದ್ವಾಂಸರು ಚರ್ಚೆಯನ್ನು ಮಾಡಿದ್ದಾರೆ. ಅವರ ಅಭಿಪ್ರಾಯಗಳನ್ನು ಸಂಗ್ರಹಿಸಿ ದೇಪರಾಜನ ಜೀವನ ವಿಚಾರ ಕಟ್ಟಿಕೊಡುವುದಾಗಿದೆ.

ಕವಿಚರಿತೆಕಾರರು "ವಿಜಯನಗರದ ರಾಜರ ಮೂಲ ಪುರುಷನಾದ ಸಂಗಮನಿಗೆ ಕಂಪ ಎಂಬ ಒಬ್ಬ ಮಗನಿದ್ದನು. ಈ ಕಂಪನ ತಮ್ಮನಾದ ಬುಕ್ಕರಾಯನಿಗೂ (೧೩೫೩-೧೩೭೭) ಕಂಪ ಎಂಬ ಒಬ್ಬ ಮಗನಿದ್ದನು. ಕವಿ ಈ ಎರಡನೆಯ ಕಂಪನ ಮಗನಾಗಿರಬಹುದು ಎಂದು ತೋರುತ್ತದೆ"[೧] ಎಂಬ ಅಭಿಪ್ರಾಯವಿದೆ.

ಹಂಪನಾಗರಾಜಯ್ಯ ಅವರು "ಸಾಂಗತ್ಯರೂಪದ ಉದ್ಘಾಟಕ"ನೆಂದು ತಾತ್ಕಾಲಿಕವಾಗಿ, ದೇಪರಾಜನಿಗೆ ಕೀರ್ತಿಸಲ್ಲಬಹುದು. ಮೊದಲನೆಯ ದೇವರಾಯನೇ (ಪ್ರತಾಪದೇವರಾಯ ೧೪೦೬-೧೪೨೩) ಈ ದೇಪರಾಜನೇ 'ಕಂಪಸುತ'ನೆಂದು ಕವಿ ಹೇಳುತ್ತಾನೆ. ಈ 'ಕಂಪ' ಯಾರು? ಗಂಗಾದೇವಿ (ಬುಕ್ಕನ ಸೊಸೆ)ಯ 'ವೀರ ಕಂಪರಾಯ ಚರಿತ'ದಲ್ಲಿನ ಹೇಳಿಕೆಯಂತೆ ಒಂದನೇ ಬುಕ್ಕನಿಗೆ (೧೩೫೬-೧೩೭೬) ದೇವಾಯಿ ರಾಣಿಯಲ್ಲಿ (ಎರಡನೆಯ) ಕಂಪಣ (ಮೂರನೆಯ) ಕಂಪಣ (ಮೂರನೆಯ) ಸಂಗಮ ಎಂಬ ಮಕ್ಕಳಾದರೆಂದು ಸ್ಪಷ್ಟವಾಗುತ್ತದೆ. ಇಮ್ಮಡಿ ಕಂಪಣನು ಮುಳಬಾಗಿಲು ರಾಜ್ಯಪಾಲ. ಈತನೇ ಕಂಪರಾಯ ಚರಿತ(ಮಧುರಾವಿಜಯ)ದ ನಾಯಕ. ಇವನ ಮಕ್ಕಳಲ್ಲಿ ಒಬ್ಬನು ದೇಪರಾಜ: ೧೪೨೪ರಿಂದ ೧೪೪೬ರವರೆಗೆ ಆಳಿದ ಇಮ್ಮಡಿ ದೇವರಾಯನೂ ದೇಪರಾಜನೂ ಅಭಿನ್ನರೆ? ಸರಿಯಾಗಿ ತಿಳಿಯದು. ಇವನ ಬಗ್ಗೆ ಅನ್ಯ ಗ್ರಂಥೋಕ್ತ, ಶಾಸನೋಕ್ತ ವಿವರಗಳಿಲ್ಲ. ದೇಪರಾಜನ ಪೂರ್ವಚರಿತೆ ಕಾಲ ನಿರ್ದೇಶನ ಅಸ್ಪಷ್ಟ"[೨] ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಹಂಪಿಯ ಕಡಲೆಕಾಳು ಗಣೇಶನ ಗುಡಿಯ ಮುಂಭಾಗದ ಮಂಟಪದಲ್ಲಿನ ಶಾಸನದಲ್ಲಿ "ಶಕವರ್ಷವನ್ನು ದ್ರುಕ್ಪುರಶಿಖೀಂದು ಶಶಾಂಕವೆಂದಿದ್ದು, ಇದು ಕ್ರಿ.ಶ. ೧೩೩೧, ವಿರೋಧಿ, ಪಾಲ್ಗುಣ ಪ್ರಥಮವಾಸರ, ಗುರುವಾರವೆಂದಿದ್ದು ಇದು ಕ್ರಿ.ಶ. ೧೪೧೦, ಫೆಬ್ರವರಿ ತಿಂಗಳಿಗೆ ಸರಿಹೊಂದುತ್ತದೆ. ಈ ಶಾಸನದಲ್ಲಿ ವಿಜಯನಗರದ ವಂಶಾವಳಿಯನ್ನು ಸಂಗಮನಿಂದ ಆರಂಭಿಸಿ ದೇವರಾಯನವರೆಗೆ ನೀಡಿದೆ. ಸೋಮವಂಶದಲ್ಲಿ ಸಂಗಮನು ಹುಟ್ಟಿದ, ಇವನ ಮಕ್ಕಳು ಹರಿಹರ ಮತ್ತು ಬುಕ್ಕ, ಬುಕ್ಕರಾಯನ ಮಗ ಪ್ರತಾಪ ಹರಿಹರ. ಈ ಪ್ರತಾಪ ಹರಿಹರನ

ಮಗನೇ ದೇವರಾಜ ಅಥವಾ ದೇವರಾಯ."[೨] ಅಂದರೆ ಮೊದಲನೆಯ ದೇವರಾಯ ಅಥವಾ ದೇವರಾಜ ಎರಡನೇ ಹರಿಹರನ ಮಗನಾಗಿರುವುದರಿಂದ ಕಂಪಸುತನಾದ ದೇಪರಾಜನೆಂದು ಕರೆಯಲು ಕಾಲ ಕ್ರಿ.ಶ. ೧೩೭೬-೧೪೦೪ ಇರುವುದರಿಂದ ಒಪ್ಪಲಾಗುವುದಿಲ್ಲ. ಶ್ರೀ ಹಯವದನರಾವ್ ಅವರು ಮೈಸೂರು ಗೆಜೆಟಿಯರ್‌ನಲ್ಲಿ ಸಂಗಮ ವಂಶವೃಕ್ಷವನ್ನು ಸಂಗಮ ಅಥವಾ ಯಾದವ ವಂಶ ಎಂದು ಕರೆದು ವಂಶಾವಳಿಯ ಕಾಲಮಾನವನ್ನು ಈ ರೀತಿ ಕೊಟ್ಟಿದ್ದಾರೆ.

"೧ನೆಯ ಹರಿಹರ ಕ್ರಿ.ಶ. ೧೩೩೬-೧೩೫೬

೧ನೆಯ ಬುಕ್ಕ ಕ್ರಿ.ಶ. ೧೩೫೬-೧೩೭೬

೨ನೆಯ ಹರಿಹರ ಕ್ರಿ.ಶ. ೧೩೭೬-೧೪೦೪

೨ನೆಯ ಬುಕ್ಕರಾಯ ಕ್ರಿ.ಶ. ೧೪೦೪

೨ನೆಯ ವಿರುಪಾಕ್ಷ ಕ್ರಿ.ಶ. ೧೪೦೪

೨ನೆಯ ಬುಕ್ಕರಾಯ ಕ್ರಿ.ಶ. ೧೪೦೪-೧೪೦೬

೧ನೆಯ ದೇವರಾಯ (ಪ್ರತಾಪ ದೇವರಾಯ) ೧೪೦೬-೧೪೨೨

೧ನೆಯ ವೀರವಿಜಯ (ವಿಜಯಬುಕ್ಕ ಅಥವಾ ೩ನೆಯ ಬುಕ್ಕ) ಕ್ರಿ.ಶ. ೧೪೨೨-೧೪೨೪

೨ನೆಯ ದೇವರಾಯ (ಪ್ರೌಢದೇವರಾಯ) (೨ನೆಯ ಪ್ರತಾಪದೇವರಾಯ) ಕ್ರಿ.ಶ. ೧೪೨೪-೧೪೪೬

ಮಲ್ಲಿಕಾರ್ಜುನ (೨ನೆಯ ವಿಜಯರಾಯ, ೨ನೆಯ ಪ್ರೌಢದೇವರಾಯ ಅಥವಾ ೩ನೆಯ ದೇವರಾಯ) ಕ್ರಿ.ಶ. ೧೪೪೬-೧೪೮೭

೩ನೆಯ ವಿರೂಪಾಕ್ಷ ಕ್ರಿ.ಶ. ೧೪೬೫-೧೪೮೫

ಸಾಳುವ ನರಸಿಂಹನ ಕ್ರಾಂತಿ ಮತ್ತು ಈ ವಂಶದ ಕೊನೆ ಕ್ರಿ.ಶ. ೧೪೮೬-೧೪೮೭."[೪]

ಕವಿಚರಿತೆಕಾರರು "ದೇಪರಾಜನ ಕಾಲವನ್ನು ೧೪೧೦"[೫] ಎಂದು ನಿರ್ಣಯಿಸಿದ್ದಾರೆ. ಸೊಬಗಿನ ಸೋನೆಯ ಸಂಪಾದಕರಾದ ಬಿ.ಎಸ್. ಸಣ್ಣಯ್ಯನವರು "ಕವಿಚರಿತೆಕಾರರು ೧೪೧೦ ಎಂದು ನಿರ್ಧರಿಸಿರುವ ದೇಪರಾಜನ ಕಾಲಕ್ಕೆ ೧೪೦೬-೧೪೨೨ರವರೆಗೆ ಆಳಿದನೆಂದು ಹೇಳುವ ಮೊದಲನೆಯ ದೇವರಾಯನಿಗೆ ಸರಿಹೊಂದುತ್ತದೆ. ಎಂದರೆ "ಮೊದಲನೆಯ ದೇವರಾಯನೇ ದೇಪರಾಜನಾದರೆ ದೇವರಾಯನು ಕಂಪನ ಮಗನೆಂದಂತಾಗುತ್ತದೆ. ಈಗ ಕೊಟ್ಟಿರುವ ವಂಶವೃಕ್ಷದಲ್ಲಿ ಎಲ್ಲಿಯೂ ಕಂಪನ ಹೆಸರು ಬಾರದಿದ್ದರೂ ಬುಕ್ಕನ ಸೊಸೆಯಾದ ಗಂಗಾದೇವಿಯು ರಚಿಸಿದ ಸರಸವಾದ ವೈದರ್ಭೀ ರೀತಿಯ 'ವೀರಕಂಪರಾಯಚರಿತ'ದಿಂದ ತಿಳಿದುಬರುವಂತೆ, ಒಂದನೆಯ ಹರಿಹರನ ಮಗ ಒಂದನೆಯ ಕಂಪಣನಾದರೆ ಒಂದನೆಯ ಬುಕ್ಕನ ಮಗನೇ ಎರಡನೆಯ ಕಂಪಣನಾಗುತ್ತಾನೆ. ಈ ಎರಡನೆಯ ಕಂಪಣನು ಮುಳುಬಾಗಿಲು ರಾಜ್ಯಪಾಲನಾಗಿದ್ದನು.

ಇವನೇ ವೀರಕಂಪರಾಯ ಚರಿತ ಅಥವಾ ಮಧುರವಿಜಯ ಎಂಬ ಸಂಸ್ಕೃತ ಗ್ರಂಥದಲ್ಲಿ ಚಿತ್ರಿತನಾಗಿರುವ ವೀರನಾಯಕ. ಇವನ ಒಬ್ಬ ಮಗ ಕಮ್ಮಯ್ಯನಾಯಕನು"[೬] ಕ್ರಿ.ಶ. ೧೩೬೩ರಲ್ಲಿ ಸ್ವಲ್ಪ ಭೂಮಿಯನ್ನು ದಾನ ಮಾಡಿದ್ದಾನೆ.[೭] ೧೩೫೯ ಮತ್ತು ೧೩೭೫ರ ಶಾಸನಗಳಲ್ಲಿ ನಮೂದಿತ ವಾಗಿರುವಂತೆ[೮] ಆತನ ಇನ್ನಿಬ್ಬರು ಮಕ್ಕಳೆಂದರೆ ಕಟ್ಟಯ್ಯನಾಯಕ ಮತ್ತು ಬೊಮ್ಮಣ್ಣಒಡೆಯರ್. ಮತ್ತೊಬ್ಬ ಮಗನೇ ಸೊಬಗಿನ ಸೋನೆ ಮತ್ತು ಅಮರುಕಗಳನ್ನು ರಚಿಸಿದ ದೇಪರಾಜ ಅಥವಾ ಒಂದನೆಯ ದೇವರಾಯನೆಂದು ಹೇಳಬಹುದಾಗಿದೆ.[೯] ಎಂದು ಬಿ.ಎಸ್. ಸಣ್ಣಯ್ಯ ಅಭಿಪ್ರಾಯಪಡುತ್ತಾರೆ. ಗೋಪಿನಾಥರಾವ್ ಅವರು ಕಂಪಣನ ಮಗನ ಹೆಸರನ್ನು ಜುಮ್ಮಣ್ಣ ಎಂದು ಕರೆದಿದ್ದಾರೆ.[೧೦] ಬೊಮ್ಮಣ್ಣ ಎಂಬುದೇ ಜುಮ್ಮಣ್ಣ ಎಂದು ತಪ್ಪಾಗಿ ತಿಳಿದಿರಬಹುದು ಅನಿಸುತ್ತದೆ.

"ಈ ದೇಪರಾಜನ ವಿಷಯವು ಯಾವ ಶಾಸನದಿಂದಲೂ ತಿಳಿದುಬಾರದಿದ್ದರೂ ಆತನ ಕೃತಿಯಿಂದ ಕಂಪನಮಗನೆಂದು ತಿಳಿದುಬರುತ್ತದೆ. ಇಲ್ಲಿ ಆತನು ಹೇಳುವ ಕಂಪನು ಯಾವ ಕಂಪನೆಂಬುದು ಸ್ಪಷ್ಟವಾಗಿಲ್ಲ[೧೧] ಎಂದು ಹೇಳುವ ಹಯವದನರಾಯರು ಹಲವಾರು ರೀತಿಯಲ್ಲಿ ಅದನ್ನು ವಿವರಿಸಿದರೂ, ಅಸ್ಪಷ್ಟತೆ ಮಾತ್ರ ಹಾಗೆಯೇ ಉಳಿದಿದೆ. ಸರಿಯಾದ ಹಾಗೂ ಸ್ಪಷ್ಟವಾದ ಮೂಲಗಳು ದೊರೆಯುವವರೆಗೂ ಈ ಅಸ್ಪಷ್ಟತೆಯ ಕ್ಲಿಷ್ಟತೆಯನ್ನು ಪರಿಹರಿಸುವುದು ದುಸ್ಸಾಧ್ಯವಾದ ಮಾತಾಗಿದೆ"[೧೨] ಎಂದಿದ್ದಾರೆ.

ಚರಿತ್ರೆಯ ಗ್ರಂಥಗಳಲ್ಲಿ "ಎರಡನೆಯ ಹರಿಹರನಿಗೆ ಇಬ್ಬರು ಹೆಂಡತಿಯರು ಇದ್ದರೆಂದೂ ಅವರ ಹೆಸರು ಪಂಪಾದೇವಿ ಮತ್ತು ಮಲ್ಲಾದೇವಿಯರೆಂದೂ ಅವರಲ್ಲಿ ಎರಡನೆಯ ಬುಕ್ಕ ಎರಡನೆಯ ವಿರೂಪಾಕ್ಷ, ಒಂದನೆಯ ದೇವರಾಯ ಮತ್ತು ಚಿಕ್ಕರಾಯ ಎಂಬ ಮಕ್ಕಳಿದ್ದರೆಂದು ತಿಳಿದುಬರುತ್ತದೆ".[೧೩] ಇನ್ನೊಂದೆಡೆ "ಎರಡನೆಯ ಹರಿಹರ ತನ್ನ ದಾಯಾದಿಗಳನ್ನು ಬಿಡಿಸಿ ತನ್ನ ಸ್ವಂತ ಮಕ್ಕಳನ್ನೇ ಪ್ರಾದೇಶಿಕ ರಾಜ್ಯಪಾಲರನ್ನಾಗಿ ನಿಯಮಿಸಿದನೆಂದೂ ಮತ್ತು ಈ ಕಾರಣ ಒಂದನೆಯ ದೇವರಾಯ ಉದಯಗಿರಿಯ ರಾಜ್ಯಪಾಲನಾದನೆಂದು ತಿಳಿದುಬರುತ್ತದೆ".[೧೪]

ಬಿ.ಎಲ್. ರೈಸ್ ಅವರು[೧೫] ಸಂಗಮ ವಂಶಾವಳಿಯ ಚಿತ್ರದ ಪ್ರಕಾರ ಸಂಗಮ ಮತ್ತು ಕಾಮಾಂಬಿಕೆಯರಿಗೆ ಹರಿಹರ (೧ನೆಯ) ಕಂಪಣ, ಬುಕ್ಕರಾಯ, ಮಾರಪ್ಪ ಮತ್ತು ಮುದ್ದಪ್ಪ ಎಂಬ ಐವರು ಪುತ್ರರು, ಒಂದನೆಯ ಹರಿಹರ ಅಥವಾ ಹರಿಯಪ್ಪ ಒಡೆಯರ್ ೧೩೩೬ರಿಂದ ೧೩೫೩ರವರೆಗೆ ರಾಜ್ಯಭಾರ ಮಾಡಿದ. ಅವನ ನಂತರ ಬುಕ್ಕರಾಯ ೧೩೫೩ರಿಂದ ೧೩೭೭ರವರೆಗೆ ರಾಜ್ಯಭಾರ ಮಾಡಿದ. ಒಂದನೆಯ ಹರಿಹರನಿಗೆ ಮಕ್ಕಳಿರುವ ಸಂಗತಿ ಮೇಲೆ ಹೇಳಿದ ವಂಶಾವಳಿಯಿಂದ ತಿಳಿಯುವುದಿಲ್ಲ. ಕಂಪಣನಿಗೆ ಸಂಗಮ ಎಂಬ ಮಗನಿದ್ದಂತೆ ವಂಶಾವಳಿಯ ಚಿತ್ರ ತೋರಿಸುತ್ತದೆ. ಬುಕ್ಕರಾಯನಿಗೆ ನಾಲ್ಕು ಜನ ಗಂಡುಮಕ್ಕಳು ಮತ್ತು ಒಬ್ಬಳು ಮಗಳು ಎಂದು ಕೊಟ್ಟಿದೆ. ಬುಕ್ಕನ ಅನಂತರ ಚಕ್ರವರ್ತಿಯಾಗಿ ರಾಜ್ಯಭಾರ ಮಾಡಿದ ಎರಡನೆಯ ಹರಿಹರ (೧೩೭೭-೧೪೦೪) ಗೌರಾಂಬೆಯ ಮಗ ವಿರುಪಣ್ಣ ಅಥವಾ ವಿರೂಪಾಕ್ಷ (೧೩೫೪-೧೩೭೭) ಜೊಮ್ಮಾದೇವಿಯ ಮಗ[೧೬] "ಇನ್ನುಳಿದ ಮಕ್ಕಳ ತಾಯಿ ಅಥವಾ ತಾಯಂದಿರು

ಯಾರು ಎಂಬುದನ್ನು ರೈಸ್ ಅವರು ಕೊಟ್ಟಿಲ್ಲ. ಆದರೆ ಗಂಗಾದೇವಿಯ 'ಮಧುರಾ ವಿಜಯಂ' ಅಥವಾ 'ವೀರಕಂಪರಾಯಚರಿತಂ' ಕಾವ್ಯದಿಂದ "ಬುಕ್ಕನಮಗ ಕಂಪಣನ ತಾಯಿಯ ಹೆಸರು ದೇವಾಯಿ ಎಂದು ತಿಳಿಯುತ್ತದೆ"[೧೭] "ಮಲ್ಲಿನಾಥ ಅಥವಾ ಮಲ್ಲಪ್ಪ ಒಡೆಯರ್ ಹಾಗೂ ಜನ್ನಾಂಬಿಕ ಇವರು ಯಾವ ರಾಣಿಯ ಮಕ್ಕಳು ಎಂದು ತಿಳಿಯುವುದಿಲ್ಲ. ದೇವಾಯಿಗೆ ಮಧುರಾವಿಜಯಂ ಕಾವ್ಯದ ನಾಯಕನಲ್ಲದೆ ಮತ್ತಿಬ್ಬರು ಮಕ್ಕಳು ಕಂಪಣ ಮತ್ತು ಸಂಗಮ ಎಂಬುವರಿದ್ದರು ಎಂದು ಗಂಗಾದೇವಿ ಹೇಳಿದ್ದಾಳೆ. "ಮಲ್ಲಿನಾಥ (ಮಲ್ಲಪ್ಪ) ಮತ್ತು ಜನ್ನಾಂಬಿಕ ಎಂಬುವರು ದೇವಾಯಿಯ ಮಕ್ಕಳಾಗಿದಿದ್ದರೆ ಗಂಗಾದೇವಿ ಹೇಳದಿರುತ್ತಿರಲಿಲ್ಲ. ಇವರು ಬುಕ್ಕನ ಬೇರೆಯೇ ರಾಣಿಯ ಅಥವಾ ರಾಣಿಯರ ಮಕ್ಕಳಾಗಿರಬಹುದು"[೧೮] ಎಂದು ಕೆ. ಕುಶಾಲಪ್ಪಗೌಡ ಅವರು ವ್ಯಕ್ತಪಡಿಸಿದ್ದಾರೆ.

ಬುಕ್ಕರಾಯನ ಮಕ್ಕಳು ಎಲ್ಲೆಲ್ಲಿ ರಾಜ್ಯವಾಳಿಕೊಂಡಿದ್ದರೆಂದು ಬಿ.ಎಲ್.ರೈಸ್ ಅವರು ಹೀಗೆ ಹೇಳುತ್ತಾರೆ. ''Harihara II, Bukka Raya's son by Gaurambika succeeded him on the throne but he had also other sons Virupanna Odeyar by Jommadevi, whose succession was apparently desired in the west (KP6): Mallinatha or Mallappa Odeyar, who was ruling in the east of Mysore, and Kampanna Odeyar of Chikka Kampanna, ruling in the south of Mysore''[೧೯] "ಇಲ್ಲಿ ಹೇಳಿರುವ ಕಂಪಣ್ಣ ಒಡೆಯರ್ ಅಂದರೆ ಮಧುರಾ ವಿಜಯಂ ಕಾವ್ಯದ ನಾಯಕ ತನ್ನ ತಂದೆಯಾದ ಬುಕ್ಕನಿಗಿಂತ ಮೂರು ವರ್ಷ ಮೊದಲೇ ಗತಿಸಿದುದರಿಂದ ಸಾಮ್ರಾಜ್ಯಕ್ಕೆ ಅಧಿಪತಿಯಾಗುವ ಅವಕಾಶ ಅವನಿಗೆ ದೊರೆಯಲಿಲ್ಲ ಎಂದು ಗೋಪಿನಾಥರಾವ್ ಹೇಳಿದ್ದಾರೆ."[೨೦] "ಆದರೆ ಒಂದು ವೇಳೆ ಅವನು ಬದುಕಿರುತ್ತಿದ್ದರೂ ರಾಜ್ಯದ ಪಟ್ಟ ಅವನಿಗೆ ದೊರಕುವ ಸಂಭವವಿತ್ತೇ ಎಂಬ ಸಂದೇಹವುಳಿಯುತ್ತದೆ. ಕಾರಣ "ಸಾಮ್ರಾಜ್ಯ ಅಧಿರಾಜನಾಗುವವನಿಗೆ. ಹಿಂದಿನ ರಾಜನ ಹೆಸರಿಡುವುದು ಪದ್ಧತಿ. ಅದರಂತೆ ಗೌರಾಂಬಿಕೆಯ ಮಗನಿಗೆ ಹರಿಹರನೆಂಬ ನಾಮಕರಣವಾಗಿರುವುದರಿಂದ ಬುಕ್ಕನ ಅನಂತರ ಸಾಮ್ರಾಜ್ಯಾಧಿಪತಿಯಾಗಲು ಹಕ್ಕುಳ್ಳವನು ಅವನೇ ಎಂಬುದು ಪೂರ್ವ ಸೂಚನೆಯಾಗಿದೆ. ಕಂಪಣನೆಂಬ ಹಿರಿಯ ಸೋದರ ಬುಕ್ಕನಿಗಿದ್ದೂ ಹರಿಹರನ ಅನಂತರ ರಾಜನಾದವನು ಬುಕ್ಕ. ಆ ಕಂಪಣ ಕೇವಲ ರಾಜ ಸಹೋದರನಾಗಿ, ಪ್ರಾಂತ್ಯಾಧಿಕಾರಿಯಾಗಿ ಮಾತ್ರ ಉಳಿದಂತೆ, ಅದೇ ಹೆಸರಿನ ಈ ಕಂಪಣನೂ ಅವನಂತೆಯೇ ಆಗುತ್ತಿದ್ದನಷ್ಟೆ. ಇವನಿಗೆ ಹೆಸರಿಡುವಾಗಲೇ ಅದು ಬಹುಶಃ ನಿರ್ಧಾರವಾಗಿತ್ತು"[೨೧] ಎಂಬ ವಿಷಯವನ್ನು ಬಿ.ಎಲ್.ರೈಸ್ ಅವರು ಪ್ರಸ್ತಾಪಿಸುತ್ತಾರೆ.

"ಒಂದನೆಯ ಹರಿಹರನಿಗೆ ಕಂಪ, ಬುಕ್ಕ, ಮಾರಪ್ಪ, ಮುದ್ದಪ್ಪ ಎಂಬ ನಾಲ್ಕು ಜನ ತಮ್ಮಂದಿರು. ಆದರೆ ರಾಜಕೀಯದಲ್ಲಿ ಇವನೊಡನೆ ಪ್ರಧಾನಪಾತ್ರವಹಿಸಿದವನು ಬುಕ್ಕ. ಆತನೇ ರಾಜ್ಯಕ್ಕೆ ಯೋಗ್ಯ ಉತ್ತರಾಧಿಕಾರಿಯೆಂದು ತಿಳಿದು ಹರಿಹರ ತನ್ನ ಜೀವಿತದಲ್ಲಿಯೇ ಅದನ್ನು ನಿರ್ಧರಿಸಿದ"[೨೨] ಆದರೆ ಕೆಲವರ ಅಭಿಪ್ರಾಯದ ಪ್ರಕಾರ "ಹರಿಹರನಾದ ಮೇಲೆ ಬುಕ್ಕನಿಗಿಂತ ಹಿರಿಯವನಾದ ಅವನ ತಮ್ಮ ಕಂಪ ಸ್ವಲ್ಪಕಾಲ ರಾಜನಾಗಿದ್ದನು. ರಾಜ್ಯವನ್ನು ಪಡೆಯಲು ಅಣ್ಣತಮ್ಮಂದಿರಲ್ಲಿ ತಿಕ್ಕಾಟವಾಗಿ ಬುಕ್ಕನ ಕೈಯೇ ಮೇಲಾಯಿತು. ಇದನ್ನು ನಂಬಬಹುದಾದರೆ

೧೩೪೩ರಿಂದ ೧೩೫೫ರವರೆಗೆ ಕಂಪನು, ರಾಜನಾಗಿದ್ದಿರಬೇಕು. ಅನಂತರ ಬುಕ್ಕ ಅಧಿಕಾರಕ್ಕೆ ಬಂದಂತೆ ತೋರುತ್ತದೆ"[೨೩] ಎಂದು ಎಚ್. ತಿಪ್ಪೇರುದ್ರಸ್ವಾಮಿ ಅವರು ಅಭಿಪ್ರಾಯಪಟ್ಟಿದ್ದಾರೆ. ರಂ.ಶ್ರೀ. ಮುಗಳಿಯವರು "ಬುಕ್ಕರಾಯನ ಮೊಮ್ಮಗನಾಗಿ ೧೫ನೆಯ ಶತಮಾನದಲ್ಲಿರಬೇಕೆಂದು"[೨೪] ಬುಕ್ಕರಾಯನ ಯಾವ ಮಗನ ಮಗ ದೇಪರಾಜ ಎಂಬ ಬಗ್ಗೆ ಸ್ಪಷ್ಟತೆಯನ್ನು ರಂ.ಶ್ರೀ ಮುಗಳಿಯವರು ನೀಡಿಲ್ಲ. ತ.ಸು. ಶಾಮರಾಯ ಮತ್ತು ಮೆ. ರಾಜೇಶ್ವರಯ್ಯ ಅವರು "ದೇಪರಾಜನು ವಿಜಯನಗರದ ರಾಜಮನೆತನಕ್ಕೆ ಸೇರಿದವನು. ಆ ವಂಶದ ಮೂಲಪುರುಷ ಸಂಗಮ; ಆ ಸಂಗಮೇಂದು ಕುಲದ ಇಂಗಡಲಿಗೆ ನೆರೆದಿಂಗಳೆನಿಪ ಕಂಪ; ಈ ಕಂಪನ ತಮ್ಮ ಬುಕ್ಕರಾಯ; ಬುಕ್ಕರಾಯನ ಮಗ ಎರಡನೆಯ ಕಂಪ ಈತನೇ ಪ್ರಸ್ತುತ ಕವಿ"[೨೫] ಎಂಬ ಅಭಿಪ್ರಾಯಪಟ್ಟಿದ್ದಾರೆ. ಆದರೆ ಬಿ.ಎಸ್. ಸಣ್ಣಯ್ಯನವರು ಇವರ ಅಭಿಪ್ರಾಯವನ್ನು ನಿರಾಕರಿಸಿ "ಎರಡನೆಯ ಕಂಪನೇ ದೇಪರಾಜನಲ್ಲ ಎರಡನೆಯ ಕಂಪನ ಮಗನೇ ಪ್ರಸ್ತುತ ಕವಿ ದೇಪರಾಜ ಎಂದು ಹೇಳಿದ್ದಾರೆ."[೨೬]

ಕೆ. ನಾಗೇಂದ್ರಪ್ಪ ಅವರು "ದೇಪರಾಜ ವಿಜಯನಗರದ ರಾಜಮನೆತನಕ್ಕೆ ಸೇರಿದ ಕವಿ. ಕವಿಯೂ, ಕಲಿಯೂ ಆಗಿರುವ ಈತ ತನ್ನ ಬಗ್ಗೆ ಹೆಚ್ಚಿಗೆ ಏನೂ ಹೇಳಿಕೊಳ್ಳದಿದ್ದರೂ ತಾನೂ ಪದ್ಯ ಸಂಗಮೇಂದ್ರನ ಕುಲದಿಂಗಡಲಿಗೆ ನೆಱೆಕೇಳದಿಂಗಳೆನಿಪ ಕಂಪಸುತ ಎಂದಿದ್ದಾನೆ. ಆದರೆ ಎಷ್ಟನೇ ಕಂಪನ ಮಗ ಕವಿ ದೇಪರಾಜ ಎಂಬುದು ಗೊತ್ತಾಗುವಂತಿಲ್ಲ. ವಿಜಯನಗರ ಸಂಗಮ ಕುಲದಲ್ಲಿ ಮೂವರು ಕಂಪರು ಆಗಿ ಹೋಗಿದ್ದಾರೆ. ಒಬ್ಬ ಆ ಕುಲದ ಮೂಲಪುರುಷ ಸಂಗಮನ ಮಗ, ಇನ್ನಿಬ್ಬರು ಬುಕ್ಕರಾಯನ ಮಕ್ಕಳು ಇವರಲ್ಲಿ ಕವಿಯ ತಂದೆ ಎಷ್ಟನೇ ಕಂಪ ಎಂಬುದು ಸಮಸ್ಯೆಯಾಗಿದೆ"[೨೭] ಎಂದು ತಿಳಿಸಿದ್ದಾರೆ.

ಈಗಿನ ಕೊಪ್ಪಳ ಜಿಲ್ಲೆಯ ಆನೆಗೊಂದಿಯಲ್ಲಿ ದೊರೆತಿರುವ ಕ್ರಿ.ಶ. ೧೩೮೩-೮೪ನೆಯ ವರ್ಷದ ಶಾಸನವೊಂದು ಹರಿಹರನ ಮಗನಾದ ಕಂಪಭೂಪನು ತುಂಗಭದ್ರಗೆ ಒಂದು ಸುಗಮ ಮಾರ್ಗವನ್ನು ಮಾಡಿಸಿದನೆಂದು ತಿಳಿಸುತ್ತದೆ.

> "ಕುಮಾರ ಕಂಪಭೂಪಾಲಃ
> ಶ್ರೀಮಾನ್ ಹರಿಹರಾತ್ಮಜಃ।
> ವ್ಯಧತ್ತ ತುಂಗಭದ್ರಾಯಾಃ
> ಪಂಥಾನಂ ಆಪರಿಶ್ರಮಮ್॥"[೨೮]

"ಆನೆಗೊಂದಿಯ ಶಾಸನದಂತೆ ಎರಡನೆಯ ಹರಿಹರನಿಗೆ ಕಂಪಭೂಪನೆಂಬ ಮಗನಿದ್ದರೆ ಅವನೇ ಸೊಬಗಿನ ಸೋನೆ ಕಾವ್ಯ ಕರ್ತೃವಾದ ದೇಪರಾಜನ ತಂದೆಯಾಗಿರುವ ಸಾಧ್ಯತೆಯಿದೆ"[೨೯] ಎಂದಿದ್ದಾರೆ. ಈ ಶಾಸನವು ೨ನೆಯ ಹರಿಹರನ ಆಳ್ವಿಕೆಗೆ ಸೇರಿದ್ದು, ಹರಿಹರನಿಗೆ ಕಂಪಣ್ಣ ಅಥವಾ ಕುಮಾರ ಕಂಪಣನೆಂಬ ತಮ್ಮನಿದ್ದನೆಂದು ಈ ಮೊದಲೇ ತಿಳಿದ ವಿಷಯ. ಆದ ಕಾರಣ "ಆನೆಗೊಂದಿಯ ಶಾಸನವನ್ನು ಬರೆದವನು 'ಹರಿಹರಾನುಜಃ ಎಂದು ಬರೆಯುವ ಬದಲು 'ಹರಿಹರಾತ್ಮಜಃ ಎಂದು ತಪ್ಪಾಗಿ ಬರೆದಿರಬಹುದೇ? ಹಾಗಲ್ಲದಿದ್ದ ಪಕ್ಷದಲ್ಲಿ ೨ನೆಯ

ಹರಿಹರನಿಗೆ ಕಂಪಭೂಪನೆಂಬ ಮಗನೊಬ್ಬನಿದ್ದನೆಂಬ ಮಹತ್ವದ ಸಂಗತಿಯನ್ನು ಈ ಶಾಸನವು ಮೊದಲಬಾರಿಗೆ ಹೊರಗೆಡವಿದಂತಾಗುತ್ತದೆ"[೩೦] ಎನ್ನುತ್ತಾರೆ.

ಗಂಗಾದೇವಿಯ 'ಮಧುರಾವಿಜಯಂ' ಕಾವ್ಯದಲ್ಲಿ[೩೧] "ಮಧುಮಹೋತ್ಸವಕ್ಕೆ ರತಿಪತಿಯ ಚಿತ್ರ ಬರೆಯಲು ತನ್ವಿಯರು ಹೊರಡುತ್ತಾರೆ. ಆದರೆ ಅವರು ಬರೆದು ಮುಗಿಸಿದುದು ಹರಿಹರಾತ್ಮಜನ ಚಿತ್ರವನ್ನು ಎಂದು ಹೇಳುವ ರೀತಿ ಇದು.

ಸುತನ್ವಾಃ ಫಲಕೇಷು ಮಧೂತ್ಸವೇ ರತಿಪತಿಂ ಪರಿಲೇಖಿತುಮುದ್ಯತಾಃ

ಹೃದಯಗೋಚರತಾಮನಿಶಾಂ ಗತಂ ಹರಿಹರಾತ್ಮಜಮೇವ ಸಮಾಲಿಖನ್"೫-೭.

ಗಂಗಾದೇವಿ "ಇಲ್ಲಿ ಹೇಳಲು ಉದ್ದೇಶಿಸಿದುದು ಕಂಪಣನನ್ನು, ಕಂಪಣ ಬುಕ್ಕನ ಮಗನೆಂಬುದು ಸ್ಪಷ್ಟವಾಗಿರುವಾಗ, ಹರಿಹರ ಬುಕ್ಕನ ಅಣ್ಣನಾದುದರಿಂದ ಕಂಪಣನಿಗೆ ಆತ ದೊಡ್ಡಪ್ಪನಷ್ಟೇ ಆಗಿರುವಾಗ ಇಲ್ಲಿ ಕಂಪಣನನ್ನು ಹರಿಹರಾತ್ಮಜನೆಂದು ನಿರ್ದೇಶಿಸಿರುವುದು ಕುತೂಹಲಕಾರಿಯಾಗಿದೆ. ಇಲ್ಲಿ ಹರಿಹರಾತ್ಮಜನೆಂದು ಕಂಪಣನನ್ನು ಕರೆದುದರಿಂದ ಮೊದಲು ಪಟ್ಟಕ್ಕೆ ಬಂದ ಹರಿಹರ ಅನಂತರ ಅವನ ತಮ್ಮ ಬುಕ್ಕ, ಬುಕ್ಕನ ನಂತರ ಪಟ್ಟವೇರಬೇಕಾದವನು ಕಂಪಣ ಎಂಬ ಭಾವನೆಯೂ ಇದ್ದು, ಆ ಕಾರಣದಿಂದ ಹರಿಹರಾತ್ಮಜನೆಂದು ನಿರ್ದೇಶಿಸಿರಲೂಬಹುದು"[೩೨] ಎನ್ನುತ್ತಾರೆ. ನಾಗರತ್ನಮ್ಮ ಅವರು ಸೊಬಗಿನಸೋನೆ ಕಾವ್ಯದಲ್ಲಿರುವಂತೆ "ದೇಪರಾಜ ಸಂಗಮವಂಶದ ಕಂಪರಾಜನ ಮಗನೆಂದೂ ಅರಸನಾಗಿದ್ದನೆಂದೂ ತಿಳಿದುಬರುತ್ತದೆ"[೩೩] ಎನ್ನುತ್ತಾರೆ.

ಮಧುರಾವಿಜಯಂ ಅಥವಾ ವೀರಕಂಪರಾಯಚರಿತಂ ಕಾವ್ಯದ ಪ್ರಸ್ತಾವನೆಯಲ್ಲಿ[೩೪] "ಒಂದನೆಯ ದೇವರಾಯನೂ (ಅಂದರೆ ಕಂಪಸುತನೆಂದು ಅವನನ್ನು ತಿಳಿಯಲು ಸಾಧ್ಯವಿಲ್ಲದುದರಿಂದ) ಕವಿಯಾದ ದೇಪರಾಜನೂ ಒಬ್ಬನೇ ವ್ಯಕ್ತಿಯಲ್ಲ, ದೇವ-ದೇಪ ಎಂಬ ನಾಮಸಾಮ್ಯದಿಂದ ಏನನ್ನೂ ನಿರ್ಧರಿಸಲು ಬರುವಂತಿಲ್ಲ ಕಂಪ ಅಥವಾ ಕಂಪಣ ಎಂಬ ಹೆಸರು ಒಬ್ಬರಿಗಿಂತ ಹೆಚ್ಚು ಜನರಿಗಿರುವಂತೆ ದೇವ, ದೇಪ ಎಂಬ ಹೆಸರೂ ಅನೇಕರಿಗೆ ಇದ್ದಿರುವುದು ಸಾಧ್ಯ ಎರಡನೆಯ ಕಂಪಣ ವೀರನೂ, ಅವನ ರಾಣಿ ಸ್ವತಃ ಕವಯತ್ರಿಯಾಗಿದ್ದು, ಅವನ ಮನೆಯಲ್ಲಿ ಕಾವ್ಯಾಸ್ವಾದನೆಗೆ ವಾತಾವರಣವಿದ್ದುದರಿಂದ ದೇಪರಾಜನೂ ಅವನ ಮಗನಾಗಿರಬಹುದು ಎಂದಿದ್ದಾರೆ. ಹಾಗಾಗಿ ಸಾಮ್ರಾಜ್ಯಾಧಿಪತಿಯಾದ ಒಂದನೆಯ ದೇವರಾಯ ಕಂಪನ ಮಗನೂ ಅಲ್ಲ ಸೊಬಗಿನ ಸೋನೆಯ ದೇಪರಾಜ ಒಂದನೆಯ ದೇವರಾಜನೂ ಅಲ್ಲ. ಇದರಿಂದ ದೇಪರಾಜ ಪ್ರಸಿದ್ಧನಾದ ಎರಡನೆಯ ಕಂಪಣನ ಮಗನಾಗಿರಬಹುದೆಂಬ ಅಭಿಪ್ರಾಯವನ್ನು ಇನ್ನೂ ಹೆಚ್ಚಿನ ವಿಷಯಗಳನ್ನು ತಿಳಿಯುವವರೆಗೆ ಒಪ್ಪಬಹುದಾಗಿದೆ"[೩೫] ಎಂದು ಕೆ. ಕುಶಾಲಪ್ಪಗೌಡ ಅವರು ತಿಳಿಸುತ್ತಾರೆ. ಬಹುತೇಕ ವಿದ್ವಾಂಸರ ಅಭಿಪ್ರಾಯಗಳಿಂದ ಎರಡನೇ ಕಂಪಣನು ದೇಪರಾಜನ ತಂದೆ ಆಗಿರುವ ಸಾಧ್ಯತೆಯನ್ನು ಗುರುತಿಸಿದ್ದಾರೆ. ಹಾಗಾಗಿ ದೇಪರಾಜನ ತಂಡೆ ಎರಡನೇ ಕಂಪಣ ಎಂದು ನಿರ್ಧರಿಸಲಾಗಿದೆ.

ವಿಜಯನಗರದ ಸಂಗಮ ವಂಶದಲ್ಲಿ ಮೂರು ಜನ ಸಂಗಮ ಅರಸರು ಕಂಡುಬರುತ್ತಾರೆ. ಮೂಲಪುರುಷ ಸಂಗಮ, ೧ನೆಯ ಕಂಪಣನ ಮಗ ಸಂಗಮ (೨ನೆಯವ) ೧ನೆಯ ಬುಕ್ಕರಾಯನ ರಾಣಿ ದೇವಾಯಿಮಗ ಸಂಗಮ (೩ನೆಯವ) ಅದೇ ರೀತಿ ಮೂರು ಜನ ಕಂಪಣರು ಕಂಡುಬರುತ್ತಾರೆ. ಮೂಲಪುರುಷ ಸಂಗಮನ ಮಗ ಕಂಪಣ (೧ನೆಯವ) ೧ನೆಯ ಬುಕ್ಕರಾಯನ ದೇವಾಯಿ (ದೇಮಾಯಿ) ರಾಣಿಯರಿಗೆ ಇಬ್ಬರು ಕಂಪಣರು ಕಂಡುಬರುತ್ತಾರೆ. ೧ನೆಯ ಕಂಪಣ ಮತ್ತು ೩ನೆಯ ಕಂಪಣ ಕುರಿತು ವಂಶಾವಳಿಯಲ್ಲಿ ಮಾಹಿತಿ ಇರುವುದಿಲ್ಲ. ಇಲ್ಲಿ ಎರಡನೆಯ ಕಂಪಣನ ಕುರಿತಾಗಿ ಗಂಗಾಂಬಿಕೆ 'ಮಧುರಾವಿಜಯ' ಅಥವಾ 'ವೀರಕಂಪರಾಯ ಚರಿತ'ವನ್ನು ಸುಮಾರು ೧೬೬೫ರಲ್ಲಿ ರಚಿತಗೊಂಡಿರುವುದರಿಂದ ಕವಿ ದೇಪರಾಜನು ಸಾಹಿತ್ಯಿಕ ವಾತಾವರಣವಿರುವ ಹಾಗೂ ತಾಯಿಯ ಪ್ರೇರಣೆಯಿಂದ ಕನ್ನಡದಲ್ಲಿ 'ಸೊಬಗಿನ ಸೋನೆ' ಮತ್ತು ಅಮರುಕವೆಂಬ ಕಾವ್ಯಗಳನ್ನು ರಚಿಸಿರುವ ಸಾಧ್ಯತೆಯಿದೆ. ಎರಡನೆಯ ಕಂಪನೇ ದೇಪರಾಜನ ತಂದೆ ಎಂದು ಮಧುರಾವಿಜಯ ಕಾವ್ಯ ಮತ್ತು ಸೊಬಗಿನ ಸೋನೆ ಹಾಗೂ ಅಮರುಕ ಕಾವ್ಯದ ಆಧಾರದಿಂದ ಸಮರ್ಥಿಸಲಾಗಿದೆ.

### ೩.೨. ಕವಿ ಹೆಸರು

"ವಿಜಯನಗರ ಕಾಲದ ಸಾಹಿತ್ಯವನ್ನು ಸಮೀಕ್ಷಿಸಿರುವ ಡಿ.ಎಲ್. ನರಸಿಂಹಾಚಾರ್ಯ ಅವರು 'ವಿಜಯನಗರದ ರಾಜಮನೆತನಕ್ಕೆ ಸೇರಿದ ಇಬ್ಬರು ಕವಿಗಳಲ್ಲಿ ದೇಪರಾಜನು (ಸು. ೧೪೧೦) ಒಬ್ಬ"[೩೬] ಎಂದು ಹೇಳಿ ಹೆಚ್ಚಿನ ವಿವರಗಳನ್ನು ಪ್ರಸ್ತಾಪಿಸುವುದಿಲ್ಲ.

ಸಿ.ಯು. ಮಂಜುನಾಥ ಅವರು ದೇಪರಾಜನ ಹೆಸರಿನ ಕುರಿತು "ವಿಜಯನಗರದ ಸಂಗಮ ವಂಶದಲ್ಲಿ ಇಬ್ಬರು ದೇವರಾಯರ ವಿಷಯ ಬರುತ್ತದೆ. ೧ನೆಯ ದೇವರಾಯ ಕಲೆಸಾಹಿತ್ಯಗಳ ಬಗ್ಗೆ ಅಷ್ಟೊಂದು ಆಸಕ್ತಿ ತಾಳಿದವನೆಂಬುದಕ್ಕೆ ಚರಿತ್ರೆಯ ಗ್ರಂಥಗಳಲ್ಲಿ ಆಧಾರ ದೊರೆಯುವುದಿಲ್ಲ. ಎರಡನೆಯ ದೇವರಾಯ ಕಲೆ ಸಾಹಿತ್ಯಗಳ ಬಗ್ಗೆ ಆಸಕ್ತನಾಗಿದ್ದನೆಂದು ಚರಿತ್ರೆಯ ಗ್ರಂಥಗಳಲ್ಲಿ ಉಕ್ತವಾಗಿದೆ. ಆದರೂ ಕಂಪಸುತನೆಂಬ ಮಾತು ಕೇವಲ ಒಂದನೆಯ ದೇವರಾಯನಿಗೆ ಮಾತ್ರ ಅನ್ವಯವಾಗುತ್ತದೆ. ಅಲ್ಲದೆ ಕವಿಚರಿತೆ ಮುಂತಾದ ಗ್ರಂಥಗಳಲ್ಲಿ ವಿದ್ವಾಂಸರು ಹೇಳಿರುವ ಕವಿಯ ಕಾಲ ಕ್ರಿ.ಶ. ೧೪೧೦ ಇರುತ್ತದೆ. ಇದು ಒಂದನೆಯ ದೇವರಾಯನ ಆಳ್ವಿಕೆಯ ಕಾಲಕ್ಕೆ (೧೪೦೬-೧೪೨೨) ಹೊಂದಿಕೆಯಾಗುವುದರಿಂದ ಒಂದನೆಯ ದೇವರಾಯನನ್ನೇ 'ಸೊಬಗಿನ ಸೋನೆ' ಮತ್ತು 'ಅಮರುಕ'ಗಳ ಕರ್ತೃವೆಂದು ನಂಬಲಾಗಿದೆ. ಚರಿತ್ರೆಯ ಗ್ರಂಥಗಳಲ್ಲಿ ದೇವರಾಯ ಎಂದು ಕರೆದಿದ್ದರೆ ಸಾಹಿತ್ಯ ಕೃತಿಗಳಲ್ಲಿ 'ದೇಪ' ಎಂಬ ರೂಪವೇ ದೊರೆಯುತ್ತದೆ"[೩೭] ಅಂದರೆ ಒಂದನೆಯ ದೇವರಾಯನೇ ದೇಪರಾಜನೆಂದು ಹೇಳುತ್ತಾರೆ. ಇದೇ ಅಭಿಪ್ರಾಯವನ್ನು ವೀರಣ್ಣ ರಾಜೂರ ಅವರು "ವಿಜಯನಗರದ ಅರಸು ಒಂದನೆಯ ದೇವರಾಯನೇ ದೇಪರಾಜ ಕವಿಯೆಂದೂ ನಂಬಬಹುದು"[೩೮] ಎಂಬುದಾಗಿ ಬಿ.ಎಸ್. ಸಣ್ಣಯ್ಯ ಅವರು ವ್ಯಕ್ತಪಡಿಸಿದ್ದಾರೆ. ಇನ್ನು ಮುಂದುವರೆದು ಚರ್ಚಿಸುವುದಾದರೆ, "ಮತ್ತೊಂದು ಸಂಶಯವೆಂದರೆ ಕ್ರಿ.ಶ. ೧೪೨೪-೧೪೪೬ರವರೆಗೆ ಆಳಿದ ಎರಡನೆಯ ದೇವರಾಯನೇ ಈ

ದೇಪರಾಜ ಇರಬಹುದೆ ಎಂಬುದು ಏಕೆಂದರೆ ಇತಿಹಾಸಕಾರರು ಒಂದನೆಯ ದೇವರಾಯನ ಸಾಹಿತ್ಯದ ಒಲವಿನ ಬಗ್ಗೆ ಏನನ್ನೂ ಹೇಳದೆ, ಎರಡನೆಯ ದೇವರಾಯನು ಸ್ವತಃ ವಿದ್ವಾಂಸನೂ, ಗ್ರಂಥಕರ್ತನೂ ಆಗಿದ್ದುದಲ್ಲದೆ ಕವಿಗಳ ಆಶ್ರಯದಾತನಾಗಿದ್ದನು"[೩೯] ಎಂದು ಹೇಳುವ ಮಾತಾಗಿದೆ. ಆದರೆ ದೇಪರಾಜನು ಹೇಳುವ 'ಕಂಪಸುತ' ಎಂಬ ಅಭಿಪ್ರಾಯಕ್ಕೆ ಅನ್ವಯವಾಗುವುದಿಲ್ಲ, ಹಾಗಾಗಿ ಈ ಅಭಿಪ್ರಾಯವನ್ನು ಒಪ್ಪಲು ಆಧಾರಗಳ ಕೊರತೆ ಇದೆ.

ಆರ್. ಶೇಷಶಾಸ್ತ್ರಿ ಅವರು ವಿಜಯನಗರದ ಪ್ರಾರಂಭ ಕಾಲದ ಕನ್ನಡ ಹಾಗೂ ತೆಲುಗು ಗ್ರಂಥಗಳು ಕುರಿತು ಬರೆಯುತ್ತಾ "ಈ ಕಾಲಾವಧಿಯಲ್ಲಿ ಯಾವುದೇ ಧರ್ಮದ ಸಂಬಂಧವನ್ನು ಹೊಂದಿಲ್ಲದ ಒಂದೇ ಒಂದು ಚೊಕ್ಕ ಸಾಹಿತ್ಯ ಕೃತಿಯನ್ನು ತೆಲುಗಿನಲ್ಲಿಯೂ ಹಾಗೆಯೇ ಮತ್ತೊಂದನ್ನು ಕನ್ನಡದಲ್ಲಿಯೂ ಇರುವುದನ್ನು ಕಾಣುತ್ತೇವೆ. ಆ ಕೃತಿಗಳೆಂದರೆ ಕನ್ನಡದಲ್ಲಿ ದೇವರಾಜನ 'ಸೊಬಗಿನ ಸೋನೆ' ಮತ್ತು ತೆಲುಗಿನಲ್ಲಿ ಜಕ್ಕನ ಕವಿಯ 'ವಿಕ್ರಮಾರ್ಕಚರಿತ್ರಮು', ದೇವರಾಜನು ವಿಜಯನಗರ ಸಾಮ್ರಾಜ್ಯದ ಸಂಗಮ ವಂಶಕ್ಕೆ ಸೇರಿದ ರಾಜನಾಗಿದ್ದನು (ಕ್ರಿ.ಶ. ೧೪೦೬-೧೪೨೨)"[೪೦] ಎಂದಿದ್ದಾರೆ ಅಂದರೆ, ಆರ್.ಶೇಷಶಾಸ್ತ್ರಿಯವರು ದೇವರಾಜನೇ ದೇಪರಾಜ ಎಂದು ಕರೆದಿದ್ದಾರೆ.

"ಕವಿ ದೇಪರಾಜ ವಿಜಯನಗರದ ಅರಸುಗಳಲ್ಲಿ ಒಬ್ಬ. ಆದರೆ ಅವನು ಎರಡನೆ ಪ್ರೌಢದೇವರಾಯನಂತೆ ಖ್ಯಾತ ವಿದ್ವಾಂಸನೂ, ಗ್ರಂಥಕರ್ತನೂ, ಸಾಹಿತ್ಯಾಭಿಮಾನಿಯೂ ಅಲ್ಲ. ಕವಿಗಳಿಗೆ ರಾಜಾಶ್ರಯ ಕೊಟ್ಟು ಪ್ರೋತ್ಸಾಹಿಸಿದವನೂ ಅಲ್ಲ; ಇತಿಹಾಸ ಗುರುತಿಸುವಂತಹ ಮೇಧಾವಿ ಕವಿಯೂ ಅಲ್ಲ, ಅವನ 'ಸೊಬಗಿನಸೋನೆ' ಕಥೆಗಳ ಆಗರ. ಒಳ್ಳೆಯ ಕಥನಕಾರನಾಗಿ ಅನ್ಯಮೂಲಗಳಿಂದ ಕಥೆಗಳನ್ನು ಕಲೆಹಾಕಿ ಸಾಂಗತ್ಯದಲ್ಲಿ ಹೇಳಿರುವನು"[೪೧] ಎಂದು ಎಸ್. ವಿದ್ಯಾಶಂಕರ ಅವರು ಅಭಿಪ್ರಾಯ ಪಟ್ಟಿದ್ದಾರೆ. ಅಂದರೆ ಕವಿ ಅರಸನಾಗಿದ್ದು ಕಥೆಗಳನ್ನು ಸಾಂಗತ್ಯದಲ್ಲಿ ರಚಿಸಿದ್ದಾನೆ.

ಸೊಬಗಿನಸೋನೆಯ ಕರ್ತೃ ಪ್ರಸ್ತುತದಲ್ಲಿ ವಿದ್ವಾಂಸರು ಒಪ್ಪಿರುವಂತೆ ದೇಪರಾಜ ದೇವರಾಜ ಎಂಬುದಾಗಿದೆ ಇದನ್ನು ಕವಿ ತನ್ನ ಹೆಸರನ್ನು ಅಮರುಕ ಮತ್ತು ಸೊಬಗಿನಸೋನೆ ಕೃತಿಗಳಲ್ಲಿ ವಿವಿಧ ಕಡೆ ವಿವಿಧ ರೀತಿಯಲ್ಲಿ ಉಲ್ಲೇಖ ಮಾಡಿರುವುದನ್ನು ಕಾಣಬಹುದು.

'ಸೊಬಗಿನ ಸೋನೆ' ಕಾವ್ಯದಲ್ಲಿ ಕವಿಯ ಹೆಸರನ್ನು ಹೀಗೆ ಕರೆಯಲಾಗಿದೆ. 'ದೇಪುಗ'[೪೨], 'ದೇಪು'[೪೩], 'ದೇಪಭೂಪ'[೪೪], 'ದೇಪನೃಪ'[೪೫], 'ದೇಪನರನಾಥ'[೪೬]. 'ದೇಪಭೂಪಾಲ'[೪೭], 'ದೇಪಭೂವರ'[೪೮], ದೇಪಬೂಭುಜ'[೪೯], 'ದೇಪಮಹಿಪತಿ'[೫೦], 'ಕಂಪಸುತ'[೫೧], 'ಕಂಪಜ'[೫೨] ಎಂದು ಪರ್ಯಾಯ ಹೆಸರುಗಳಿರುವುದು ಸ್ಪಷ್ಟವಾಗುತ್ತದೆ. ದೇಪರಾಜವಿರಚಿತ "ಸೊಬಗಿನ ಸೋನೆ" ಮತ್ತು "ಅಮರುಕ" ಈ ಎರಡು ಕೃತಿಗಳಲ್ಲಿ ಕವಿ ಹೆಸರಿನ ಮೊದಲ ರೂಪ "ದೇಪ" ಎಂಬ ನಾಮರೂಪವಿದೆ. ಆದರೆ 'ದೇವ' ಎಂಬ ನಾಮರೂಪ ಈತನ ಕೃತಿಗಳಲ್ಲಿ ಎಲ್ಲಿಯೂ ಸಿಗುವುದಿಲ್ಲ. ಹಾಗಾಗಿ ಕಾವ್ಯವನ್ನು ಆಧರಿಸಿ ದೇವರಾಜ ಅಥವಾ ದೇವರಾಯನೇ ಬೇರೆ. ದೇಪರಾಜನೇ ಬೇರೆ ಎಂಬ ನಿಲುವನ್ನು ತಾಳಬೇಕಾಗುತ್ತದೆ.

ಬಿ.ಎಸ್. ಸಣ್ಣಯ್ಯನವರು ಮೊದಲನೆಯ ದೇವರಾಯನೇ ಅಥವಾ ದೇವರಾಜನೇ ದೇಪರಾಜನೆಂದು ತಿಳಿಸಿದ್ದಾರೆ. ಮತ್ತೊಂದೆಡೆ ದೇಪರಾಜನು ೨ನೆಯ ಕಂಪ ಅಂದರೆ ಮಧುರಾ ವಿಜಯದ ನಾಯಕ ವೀರಕಂಪರಾಯನ ಮಗನೆಂದು ಗುರುತಿಸಿದ್ದಾರೆ. ಮೊದಲನೆಯ ದೇವರಾಯನ ತಂದೆ ೨ನೆಯ ಹರಿಹರ ಎಂದು ವಂಶಾವಳಿಯಿಂದ ತಿಳಿದುಬರುತ್ತದೆ. ಹಾಗಾಗಿ ಅರಸನಾದ ದೇವರಾಯ ಅಥವಾ ದೇವರಾಜನೇ ಬೇರೆ ಕವಿಯಾದ ದೇಪರಾಜನೇ ಬೇರೆ ಎಂಬುದು ಸ್ಪಷ್ಟವಾಗುತ್ತದೆ. ವೀರಣ್ಣರಾಜೂರ ಅವರು ಬಿ.ಎಸ್. ಸಣ್ಣಯ್ಯನವರ ಅಭಿಪ್ರಾಯವನ್ನೇ ಪುರಸ್ಕರಿಸಿದ್ದಾರೆ. ಹಂಪನಾಗರಾಜಯ್ಯ ಅವರು ದೇವರಾಯನೇ ದೇಪರಾಜನೆಂದು ಒಪ್ಪಿಕೊಳ್ಳುತ್ತಾ ೨ನೆಯ ದೇವರಾಯ ಮತ್ತು ದೇಪರಾಜ ಇವರಿಬ್ಬರು ಒಬ್ಬರೇ ಇರಬಹುದೇ ಎಂಬ ಸಂದೇಹ ವ್ಯಕ್ತಪಡಿಸಿದ್ದಾರೆ. ಸಿ.ಯು. ಮಂಜುನಾಥ ಅವರು ದೇವರಾಯನೇ ದೇಪರಾಜನೆಂದು ಸಮರ್ಥಿಸುತ್ತಾ ಚರಿತ್ರೆ ಗ್ರಂಥಗಳಲ್ಲಿ 'ದೇವರಾಯ' ಎಂದು ಕರೆದಿದ್ದರೆ ಸಾಹಿತ್ಯ ಕೃತಿಗಳಲ್ಲಿ 'ದೇಪ' ಎಂಬ ರೂಪವೇ ದೊರೆಯುತ್ತದೆ ಎಂದಿದ್ದಾರೆ.

ಮೊದಲನೆಯ ದೇವರಾಯ ಸಾಹಿತ್ಯಾಸಕ್ತನೂ ಅಲ್ಲ. ಕಂಪನ ಮಗನೂ ಅಲ್ಲ. ಕ್ರಿ.ಶ. ೧೪೦೬ರಿಂದ ೧೪೨೨ರವರೆಗೆ ಆಳ್ವಿಕೆ ನಡೆಸಿದ ಅರಸನಾಗಿಯೂ ಮತ್ತು ಉದಯಗಿರಿಯ ಪ್ರಾದೇಶಿಕ ರಾಜ್ಯಪಾಲನಾಗಿ ನೇಮಕಗೊಂಡ ಬಗ್ಗೆ ಚರಿತ್ರೆಯಲ್ಲಿದೆ. ಮಧುರಾವಿಜಯದ ವೀರಕಂಪ ರಾಯನ ಮಗನಾಗಿ ದೇಪರಾಜನಾಗಿರುವ ಬಗ್ಗೆ ಗಂಗಾಂಬಿಕೆಯ ಮಧುರರಾಜ ವಿಜಯ (ಈ ಕಾವ್ಯದ) ಪ್ರಭಾವ ದೇಪರಾಜನ ಸೊಬಗಿನ ಸೋನೆಯ ಮೇಲಾಗಿದೆ ಎನ್ನಿಸುತ್ತದೆ. ಈ ಕಾರಣದಿಂದ ಎರಡನೇ ಕಂಪನ ಮಗ ದೇಪರಾಜನೆಂದು ಬಹುಜನ ವಿದ್ವಾಂಸರ ಹೇಳಿಕೆಗಳಿಂದ ಸಮರ್ಥನೆ ದೊರೆಯುತ್ತದೆ. ಹಾಗಾದರೆ ಈತನ ತಾಯಿ ಗಂಗಾಂಬಿಕೆ ಆಗುತ್ತಾಳೆ. ಸೊಬಗಿನಸೋನೆ ಕಾವ್ಯದಲ್ಲಿ ಕವಿಯ ಪತ್ನಿಯ ಮಾತುಗಳಿಂದ ಕವಿಯ ವ್ಯಕ್ತಿತ್ವ ವ್ಯಕ್ತಗೊಂಡಿದೆ...

"ಕೇಳ್ವ ಕೋವಿದರಿಗೆ
ಸೊಗಸೊಚಿವೊಲು ಸಕ್ಕಜ ಕನ್ನಡವೊಪ್ಪೆ
ನಗೆಮೊಗದನೆ ಬಂದು ಕಥೆವೇಳ" (೧/೧೮).

ಕವಿ ಕನ್ನಡ ಮತ್ತು ಸಂಸ್ಕೃತ ಈ ಎರಡು ಭಾಷೆಗಳಲ್ಲಿ ಪಂಡಿತ ಪಾಮರರಿಗೂ ಒಪ್ಪುವಂತೆ ಕಾವ್ಯ ರಚಿಸುವ ಪಾಂಡಿತ್ಯವುಳನೆಂಬುದು ಸ್ಪಷ್ಟವಾಗುತ್ತದೆ. ಅಲ್ಲದೆ,

"ನುಡಿಗೆ ಬುಧರು ವಿಕ್ರಮಕೆ ವೀರರು ನಿನ್ನ
ನಡವಳಿಗಿಳೆಯ ಸಜ್ಜನಜನ
ಕಡುಗಾಯ್ಪಿಗೆ ಪಗೆವರು ರೂಪಿಗೆಳೆವೆಂಗಳ್
ಬಿಡದೆ ಸೋಲುವರಿನಿಯನೆ ದೇಪು." (೧೪/೩)

ದೇಪರಾಜ ವಾಕ್‌ಚತುರನಾಗಿದ್ದರಿಂದ ವಿದ್ವಾಂಸರನ್ನು, ಪರಾಕ್ರಮನಾಗಿದ್ದರಿಂದ ವೀರರನ್ನು, ಸಚ್ಚಾರಿತ್ರ್ಯವುಳ್ಳನಾಗಿದ್ದರಿಂದ ಸಜ್ಜನರನ್ನು, ಕಡುಕೋಪಿಷ್ಠನಾಗಿ ದುರ್ಜನರೊಂದಿಗೆ ಇದ್ದುದರಿಂದ ಅವರಿಗೆ ವೈರಿಯಾಗಿಯೂ, ಸುಂದರನೂ, ರಸಿಕನೂ ಆಗಿರುವುದರಿಂದ ಚೆಲುವಾದ ನಾರಿಯರನ್ನೂ

ಆಕರ್ಷಿಸುವಂತಿದ್ದನು. ಕಾವ್ಯದಲ್ಲಿ ಪತ್ನಿಯು ಕವಿಯನ್ನು ನಲ್ಲನೆ, ಇನಿಯನೆ, ರಮಣನೆ, ಮನಸಿಜರೂಪನೆ ಎಂದು ಮತ್ತೆ ಮತ್ತೆ ಸಂಬೋಧಿಸುವುದು ವಿಶೇಷವಾಗಿದೆ.

ಕವಿಯು ಪತ್ನಿಯನ್ನು ಚತುರಕಳಾಧರೆ, ಸರಸಗುಣಾಧರೆ, ಶ್ರೀಧರೆ, ಪ್ರಾಣಾಧರೆ, ಬಿಂಬಫಳಾಧರೆ, ನಿಬಿಡಪಯೋಧರೆ, ಕೋವಿದೆ, ಮಾವನಮಗಳೆ, ಮನೋಹರೆ ಅಂಗನೆ, ಅಸಿಯಳೆ, ಅಮರ್ದುಟಿಯಳೆ, ಚೆಂದುಟಿಯಳೆ, ಒಪಳೆ, ಅಂಬುಜಮುಖಿ, ಕಂಗಳಕೌತುಕ, ರತಿರಾಜ್ಯದಮಂಗಳಸೂತ್ರ, ಸೊಬಗುಳ್ಳ ಹೆಂಗಳನಾಯಕರತ್ನ, ಪಿಡಿನಡುವಿನ ನಲ್ಲಳೆ, ಬಟ್ಟಮೊಲೆಯಳೆ, ಕುಡಿತೆಗಣ್ಣಳೆ, ಕೊಂಕುಗುರುಳಳೆ, ನಿಡುಮುಡಿಯಳೆ, ಅಂಚೆಯಡಿಯಳ್ಳೆ ಎಂದು ಹತ್ತಾರು ಬಾರಿ ಕಾವ್ಯದಲ್ಲಿ ಸಂಬೋಧಿಸುತ್ತಾನೆ. ಇದೆಲ್ಲವನ್ನು ಗಮನಿಸಿದರೆ ಪತಿ ಪತ್ನಿ ದಾಂಪತ್ಯ ಜೀವನಕ್ಕೆ ಮಾದರಿಯಾಗಿದ್ದಾರೆ ಎನಿಸುತ್ತದೆ.

### ೩.೩. ದೇಪರಾಜನ ಕಾಲ

ದೇಪರಾಜ ಕವಿಯ ಇತಿವೃತ್ತ ಕುರಿತು ಭಿನ್ನಾಭಿಪ್ರಾಯಗಳಿದ್ದು, ಈ ಕುರಿತಂತೆ ಮೂಲ ಆಕರಗಳ ಕೊರತೆಯಿರುವುದರಿಂದ ಕಾಲದ ವಿಷಯವೂ ಕೂಡ ಸಮಸ್ಯೆಯಾಗಿದೆ. ಈ ಕಾರಣದಿಂದ ವಿವಿಧ ವಿದ್ವಾಂಸರ ಅಭಿಪ್ರಾಯಗಳನ್ನು ಆಧರಿಸಿ ಚರ್ಚಿಸುವುದಾಗಿದೆ.

ಕವಿ ಚರಿತೆಕಾರರು ಒಂದನೆಯ ಬುಕ್ಕರಾಯ (೧೩೫೩–೧೩೭೭)ನ ಮಗ ಎರಡನೆಯ ಕಂಪನ ಮಗನೇ ಕವಿ ದೇಪರಾಜನಾಗಿರಬಹುದೆಂದು ಹೇಳಿದ್ದರಿಂದ ಇವನ ಕಾಲವು ಸುಮಾರು ೧೪೧೦[೫೩] ಆಗಬಹುದು ಎಂದಿದ್ದಾರೆ. ಬಿ.ಎಸ್. ಸಣ್ಣಯ್ಯನವರು[೫೪] ವಿಜಯನಗರ ಸಾಮ್ರಾಜ್ಯ ವನ್ನಾಳಿದ ೧೪೦೬ರಿಂದ ೧೪೨೨ರವರೆಗೆ ಆಳಿದನೆಂದು ಹೇಳುವ ಒಂದನೆಯ ದೇವರಾಯನಿಗೆ ಸರಿಹೊಂದುತ್ತದೆ. ಅಂದರೆ ಒಂದನೆಯ ದೇವರಾಯನೇ ದೇಪರಾಜನೆಂದು ಈತನ ಕಾಲವನ್ನು ಕವಿಚರಿತೆಕಾರರು ನಿರ್ಧರಿಸಿದ ಸುಮಾರು ಕ್ರಿ.ಶ. ೧೪೧೦ನ್ನೇ ಒಪ್ಪಿದ್ದಾರೆ. ಇದೇ ಕಾಲವನ್ನು ಸಿ.ಯು. ಮಂಜುನಾಥ[೫೫], ವೀರಣ್ಣ ರಾಜೂರ[೫೬], ವಿ. ಶಿವಾನಂದ, ಎಚ್. ದೇವೀರಪ್ಪ[೫೭] ಅವರು ದೇಪರಾಜನ ಕಾಲ ಸುಮಾರು ೧೪೧೦ಕ್ಕೆ ಸಹಮತದ ಅಭಿಪ್ರಾಯಕ್ಕೆ ಬಂದಿದ್ದಾರೆ.

ರಂ.ಶ್ರೀ. ಮುಗಳಿ[೫೮], ಸ.ಸ. ಮಾಳವಾಡ[೫೯] ಅವರು ೧೫ನೆಯ ಶತಮಾನದ ಮೊದಲಲ್ಲಿ ದೇಪರಾಜನಿರಬೇಕೆಂದು ಊಹೆಮಾಡಿದ್ದಾರೆ.

ಕೊಪ್ಪಳ ಜಿಲ್ಲೆಯ ಆನೆಗೊಂದಿಯಲ್ಲಿ ದೊರೆತಿರುವ ಕ್ರಿ.ಶ. ೧೩೮೩–೮೪ನೆಯ ವರ್ಷದ ಶಾಸನವೊಂದು ಹೇಳುವ ಕೆ.ವಿ. ರಮೇಶ್ ಅವರು "ಹರಿಹರನ ಮಗನಾದ ಕಂಪಭೂಪನು ತುಂಗಭದ್ರೆಗೆ ಒಂದು ಸುಗಮ ಮಾರ್ಗವನ್ನು ಮಾಡಿಸಿದನೆಂದು ತಿಳಿಸುತ್ತದೆ. ಇದು ಕವಿಯ ಕಾಲವೆಂದು ಹೇಳಲಾಗಿರುವ ಕ್ರಿ.ಶ. ೧೪೧೦ಕ್ಕೆ ಆಧಾರವಾಗಬಲ್ಲ ಇನ್ನೊಂದು ಆಧಾರವಾಗಿದೆ"[೬೦] ಎಂದಿದ್ದಾರೆ.

"ಕಂಚಿಯ ಹತ್ತಿರವಿರುವ ತಿರುಪ್ಪುಟ್ಕುಲಿಯಲ್ಲಿ ದೊರೆತಿರುವ ಶಕವರ್ಷ ೧೨೮೭ (ಕ್ರಿ.ಶ. ೧೩೬೫)ರ ಕಂಪಣನ ಶಾಸನದಂತೆ ಮೊದಲನೆಯ ಬುಕ್ಕನ ಮಗ ಕಂಪಣನು ರಾಜಗಂಭೀರ

ರಾಜ್ಯವನ್ನು ವಶಪಡಿಸಿಕೊಂಡ ಮೇಲೆ ಸ್ಥಿರವಾಗಿ ರಾಜ್ಯಭಾರ ಮಾಡಿದನು"[೬೧] ಎಂದು ತಿಳಿದುಬರುತ್ತದೆ. "ಕಂಪರಾಜನು ೧೩೬೫ರಲ್ಲಿ ರಾಜನಾಗಿದ್ದುದರಿಂದ, ಆತನ ಮಗನಾದ ದೇಪರಾಜನು ೧೪೧೦ರಲ್ಲಿದ್ದನೆಂಬ ಗ್ರಹಿಕೆಗೆ ಸಮರ್ಥನೆ ದೊರೆಯುತ್ತದೆ".[೬೨]

ಕನ್ನಡ ಅಧ್ಯಯನ ಸಂಸ್ಥೆಯ ಕೋಶಾಗಾರದಲ್ಲಿರುವ ಓಲೆಪ್ರತಿಯಲ್ಲಿ (ಕೆ.೭೪೩) ರಾಮಚಂದ್ರನೆಂಬ ಕವಿಯಿಂದ ವಿರಚಿತವಾದ ಮನ್ಮಥಚರಿತೆ ಎಂಬ ಸಾಂಗತ್ಯ ಗ್ರಂಥವೊಂದಿದೆ. ಇದರ ಸಮಗ್ರ ಪ್ರತಿ ದೊರೆಯದಿದ್ದರೂ, ದೊರೆತಿರುವ ಪ್ರತಿಯಲ್ಲಿ ಬರುವ ಪದ್ಯವೊಂದರಲ್ಲಿ[೬೩]

> "ರಸಕಾವ್ಯದೊಳೊಸರ್ವ ಸೊಬಗಿನ ಸೋನೆ
> ಎಸೆವ ಕರ್ಣಾಟಕ ಭಾಷೆ
> ಒಸೆದು ಕೇಳುವ ಸುಜನರಿಗೆ ಧರ್ಮಾಮೃತ
> ಕುಸುಮಬಾಣನ ಚರಿತೆಯೊಳು" ೧-೩೧.

ಈ ಪದ್ಯದಿಂದ "ಸೊಬಗಿನ ಸೋನೆ ಮತ್ತು ಧರ್ಮಾಮೃತ ಎರಡರ ಹೆಸರನ್ನೂ ಶ್ಲೇಷೆಯಿಂದ ಹೇಳುವಂತೆ ತೋರುತ್ತದೆ. ಈ ಗ್ರಂಥದ ಪೂರ್ಣ ಪ್ರತಿ ದೊರೆತಲ್ಲಿ ದೇಪರಾಜನ ಕಾಲದ ಮೇಲೆ ಮತ್ತೊಷ್ಟು ಬೆಳಕು ಬೀಳಬಹುದಾಗಿದೆ"[೬೪] ಎಂದು ಬಿ.ಎಸ್. ಸಣ್ಣಯ್ಯ ತಿಳಿಸುತ್ತಾರೆ.

ಎಂ. ಚಿದಾನಂದಮೂರ್ತಿಯವರು "ನಮಗೆ ತಿಳಿದಮಟ್ಟಿಗೆ ಮೊದಲ ಸಾಂಗತ್ಯ ಕೃತಿ ಸುಮಾರು ೧೪೧೦ರಲ್ಲಿದ್ದ ದೇವರಾಜನ 'ಸೊಬಗಿನ ಸೋನೆ' ಆದ್ದರಿಂದ ಸಾಂಗತ್ಯವು ಹದಿನಾಲ್ಕನೆಯ ಶತಮಾನದ ಉತ್ತರಾರ್ಧದಲ್ಲಿ ಉಗಮಗೊಂಡಿರಬೇಕು"[೬೫] ಎನ್ನುತ್ತಾರೆ. ಶ್ರೀ ಟಿ..ವಿ ವೆಂಕಟಾಚಲಶಾಸ್ತ್ರಿ ಅವರೂ ಇದೇ ಅಭಿಪ್ರಾಯವನ್ನು ಪ್ರತಿನಿಧಿಸಿರುವರು.[೬೬] ಮಧುರಾವಿಜಯಂ ಅಥವಾ ವೀರಕಂಪರಾಯ ಚರಿತಂ ಕಾವ್ಯವು[೬೭] ೧೩೬೦-೬೫ರ ಸುಮಾರಿನಲ್ಲಿ ಗಂಗಾದೇವಿ ರಚಿಸಿರುವುದರಿಂದ ಇವರ ಮಗನಾದ ದೇಪರಾಜನು ರಾಜನಾಗಿಯೂ ಕವಿಯಾಗಿಯೂ ಕ್ರಿ.ಶ. ೧೪೧೦ರಲ್ಲಿ ಇದ್ದನೆಂಬುದಕ್ಕೆ ಆಧಾರವಾಗುತ್ತದೆ. ಮಧುರೆಯ ವಿಜಯ ಕ್ರಿ.ಶ. ೧೩೭೧ರಲ್ಲಿ ನಡೆದುದರಿಂದ ಪತ್ನಿ ಗಂಗಾದೇವಿಯು ಪತಿಯ ವೀರತ್ವವನ್ನು ಕುರಿತು ಕಾವ್ಯ ರಚನೆಯನ್ನು ಸುಮಾರು ೧೩೭೧ರ ಸುಮಾರಿಗೆ ನಡೆದಿರಬಹುದು ಎಂಬ ಅಭಿಪ್ರಾಯ ವ್ಯಕ್ತವಾಗಿದೆ. ಈ ಹಿನ್ನೆಲೆಯಲ್ಲಿ ದೇಪರಾಜ ತನ್ನ ಕಾವ್ಯ ಸೊಬಗಿನ ಸೋನೆಯನ್ನು ೧೪೧೦ರಲ್ಲಿ ರಚಿಸಿರಬಹುದು.

ಒಟ್ಟನಲ್ಲಿ ೧೫ನೇ ಶತಮಾನದ ಆದಿಭಾಗದಲ್ಲಿ ಬದುಕಿರಬಹುದಾದ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲವೆಂಬುದನ್ನು ಕವಿಯ ಕಾಲ ನಿರ್ಣಯದಲ್ಲಿ ನಿರೂಪಿಸಬಹುದಾಗಿದೆ.

### ೩.೪. ದೇಪರಾಜನ ಮತ

ಈ ಕವಿಯ ಮತಧರ್ಮ ಕುರಿತು ಹೇಳಲು ಖಚಿತವಾದ ಆಧಾರಗಳ ಕೊರತೆಯಿದೆ. ಬಿ.ಎಸ್. ಸಣ್ಣಯ್ಯ ಅವರು "ಈತನು ವೀರಶೈವನಹುದೋ ಅಲ್ಲವೋ, ಶೈವನೆಂಬುದಕ್ಕೆ ಈತನ ಗ್ರಂಥಗಳೇ ಆಧಾರವಾಗಿವೆ. ತನ್ನ ಎರಡು ಗ್ರಂಥಗಳಲ್ಲಿಯೂ ಶಿವನನ್ನು ಬೇಡಿಕೊಳ್ಳುತ್ತಾನೆ. ಕಾವ್ಯದುದ್ದಕ್ಕೂ ಶಿವನನ್ನು ಮತ್ತೆ ಮತ್ತೆ ಸ್ತುತಿಸುತ್ತಾನೆ"[೬೮] ಎನ್ನುತ್ತಾರೆ. ಕೆ. ನಾಗೇಂದ್ರಪ್ಪ ಅವರು

"ದೇಪರಾಜನು ಶೈವ ಕವಿ, ವೀರಶೈವ ಎಂದು ಹೇಳಲು ಆಧಾರ ಸಾಲದು"[೧೯] ಎಂದಿದ್ದಾರೆ. ಸ.ಸ. ಮಾಳವಾಡ ಅವರು "ವಿಜಯನಗರದ ಸಂಗಮವಂಶದವರು ಶೈವರು, ಈ ವಂಶದ ಮೊದಲಿನ ಅರಸರು ಹೆಚ್ಚಾಗಿ ಶೈವ ಪಕ್ಷಪಾತಿಗಳು"[೨೦] "ಕವಿಯಾದ ದೇಪರಾಜನೆಂಬುವನು ವಿಜಯನಗರ ರಾಜವಂಶಕ್ಕೆ ಸೇರಿದ ಶೈವನಾಗಿದ್ದಾನೆ"[೨೧] ಎಂದು ಸಮರ್ಥಿಸಿದ್ದಾರೆ. ಆರ್.ಎನ್. ವಿಜಯಲಕ್ಷ್ಮಿ ಅವರು ದೇಪರಾಜನನ್ನು 'ಶೈವಕವಿ'[೨೨] ಎಂದು ಗುರುತಿಸಿದ್ದಾರೆ.

"ಸೊಬಗಿನ ಸೋನೆ ಮತ್ತು ಅಮರುಕ ಶತಕ ಇವೆರಡೂ ಕೃತಿಗಳ ಆದ್ಯಂತದಲ್ಲಿ ಶಿವಸ್ತುತಿ ಹಾಗೂ ಶಿವಕವಿ ಸ್ತವನವಿರುವುದರಿಂದ ಇವನು ಶೈವನಂತೂ ನಿಜ ಆದರೆ ಆ ಕಾಲದ ವೀರಶೈವ ಕವಿ ಗಣದಲ್ಲೇ ಇವನನ್ನು ಸೇರಿಸುವುದು ಸೂಕ್ತವೆಂದು ವಿ. ಶಿವಾನಂದ ಅವರು ಅಭಿಪ್ರಾಯಪಟ್ಟಿದ್ದಾರೆ".[೨೩]

ಸೊಬಗಿನ ಸೋನೆ ಮತ್ತು ಅಮರುಕ ಈ ಎರಡು ಕೃತಿಗಳ ಆರಂಭದಲ್ಲಿ ಶಿವಪಾರ್ವತಿ ಸ್ತುತಿ ಪದ್ಯಗಳಿವೆ. ವಿಕ್ರಮ ಮತ್ತು ಸುರಭಿಶೇಖರ ಈ ಪುರುಷ ಪಾತ್ರಗಳಲ್ಲಿ ದೇಪರಾಜ ಶಿವನ ಮಹಿಮೆಯನ್ನು ಕುರಿತು ವರ್ಣಿಸಿದ್ದಾನೆ. "ಎಲ್ಲರು ಶಿವಭಕ್ತರು ನನ್ನಿಯುಳ್ಳರು"[೨೪] ಎಂಬ ಉಕ್ತಿಯು ಕವಿ ಶೈವನೆಂಬುದನ್ನು ಸ್ಪಷ್ಟಪಡಿಸುತ್ತದೆ.

ಇತಿಹಾಸ ತಜ್ಞರಾದ ಸಿ. ಹಯವದನರಾಯರ ಪ್ರಕಾರ ಸಂಗಮ ದೊರೆಗಳು ವೀರಶೈವರಾಗಿದ್ದರೆಂಬುದಕ್ಕೆ ಸಾಹಿತ್ಯಿಕ ಆಧಾರಗಳು ಸಾಕಷ್ಟಿವೆ. ಇದರಿಂದ ಆ ದೊರೆಗಳ ಮೇಲಾದ ವೀರಶೈವದ ಪ್ರಭಾವವು ಸೂಚಿತವಾಗುತ್ತದೆ[೨೫] ಎಂದು ಹೇಳಿದ್ದಾರೆ.

''Though strict saivas-in fact, in literature they are called Virasaivas the kings of this period kept close touch with the matha at Sringeri founded by Sri Shankaracharya, the great advaita teacher, with which their own success, expecially in the earlier days, was not a little connected. They encouraged them by generous grants from time to time up to the days of Mallikarjuna in whose reign a grant is recroded''.[೨೬] "ಪ್ರೌಢದೇವರಾಯನ ಕಾಲದಲ್ಲಿ ಪಾಶುಪತ ಪಂಥ ಹಾಗೂ ಕಾಳಾಮುಖ ಪಂಥಗಳು ತಮ್ಮ ಅಂತರ ಕಳೆದುಕೊಂಡು ವೀರಶೈವದಲ್ಲಿ ಸಮಾನಿಷ್ಠವಾಗಿ ಹೋಗಿದ್ದವು ಎಂದು ವಿ. ಶಿವಾನಂದ"[೨೭] ಅವರು ಹೇಳಿದ್ದಾರೆ. ಈ ಬಗೆಗೆ ಇನ್ನಷ್ಟು ನಿಖರವಾಗಿ ಎಂ. ರಾಮರಾವ್ ಅವರು ಹೀಗೆ ದಾಖಲಿಸುತ್ತಾರೆ.

''After 1410 A.D. we have very little of the Kalamukh priests it is possible that the Democretic lingayat sect absorbed the Kalamukhas and they practically disappeared from history''.[೨೮]

ಎಂ. ಚಿದಾನಂದಮೂರ್ತಿ ಅವರು ಸಹ ಮೇಲಿನ ಹೇಳಿಕೆಗೆ ಒಡಂಬಡುತ್ತ "ಅಂದು ಕಾಳಾಮುಖ, ಪಾಶುಪತಗಳಲ್ಲಿ ಪ್ರಬಲ ವ್ಯತ್ಯಾಸಗಳೇನೂ ಇರಲಿಲ್ಲ. ಆ ಉಭಯ ಪಂಥಗಳೂ ವೀರಶೈವದಲ್ಲಿ ಪರಿವರ್ತನೆ ಹೊಂದಿದ ಕಾಲ ಸರಿ. ಸುಮಾರು ೧೪೧೦–೩೦ರಲ್ಲಿ ಅಥವಾ

ಅದಕ್ಕೂ ಹಿಂದೆ ಆರಂಭವಾಗಿ, ನಿಧಾನವಾಗಿ ಮುಂದುವರೆದಂತೆ ತೋರುತ್ತದೆ"[೭೯] ಎಂದು ತರ್ಕವನ್ನು ಮಂಡಿಸಿದ್ದಾರೆ.

"ಶೈವ ಧರ್ಮದ ಪಾಶುಪತ ಮೊದಲಾದ ಶಾಖೆಗಳು ವೀರಶೈವದಲ್ಲಿ ಒಂದಾಗಿದ್ದರಿಂದ ದೇಪರಾಜ ಕವಿ ವೀರಶೈವನೇ ಆಗಿದ್ದನೆಂದು ಬೇರೆ ಹೇಳಬೇಕಿಲ್ಲ. ಕಾವ್ಯಾರಂಭದಲ್ಲಿ ಬರುವ 'ವಿರೂಪಾಕ್ಷಸ್ತುತಿ' ಪುರವರ್ಣನೆಯಲ್ಲಿ ಬರುವ ಎಲ್ಲರು ಶಿವಭಕ್ತರು ನನ್ನಿಯುಳ್ಳವರು (ಸೊ.ಸೋ.೧-೫೫) ಎಂಬ ವರ್ಣನಾಭಾಗಗಳು ಅವನ ವೀರಶೈವತ್ವಕ್ಕೆ ಪುಷ್ಟಿಯನ್ನೀಯುತ್ತವೆ[೮೦] ಎಂದು ವಿ. ಶಿವಾನಂದ ಅವರು ಅಭಿಪ್ರಾಯಪಡುತ್ತಾರೆ.

ವೀರಣ್ಣರಾಜೂರ ಅವರು "ಕಂಪಜ ದೇಪಭೂಪ ಪೇಳಿದ ಕಬ್ಬದೊಳು ಶಿವನೊಲವಿಂದ ಗಿರಿಜೇಶನೊಲವಿಂದ ಎನಿತೊದವಿಸಿದನಿತನು ಪೇಳ್ವೆನೀ ಸೊಬಗಿನ ಸೋನೆಯೊಳು ಕವಿಗಳನೊಂತು" ಎಂದು ಹೇಳಿರುವುದರಿಂದ ಮತ್ತು ಕಾವ್ಯದ ಆರಂಭದಲ್ಲಿ ಹಾಗೂ ಪ್ರತಿ ಸಂಧಿಯ ಆದಿಯಲ್ಲಿ ಪಂಪಾವಿರುಪಾಕ್ಷನನ್ನು, ಶಿವನನ್ನು ನೆನೆಯುವುದರಿಂದ ಇವನು ವೀರಶೈವ ಕವಿಯೆಂಬುದು ಸ್ಪಷ್ಟವಾಗುತ್ತದೆ[೮೧] ಎಂದಿದ್ದಾರೆ. ಇವರ ಅಭಿಪ್ರಾಯವನ್ನೇ ನಾಗರತ್ನಮ್ಮ[೮೨] ಅವರು ಒಪ್ಪಿ ಉಲ್ಲೇಖಿಸಿದ್ದಾರೆ.

ದೇಪರಾಜ ಕವಿಯು ಸೊಬಗಿನ ಸೋನೆಯನ್ನು ಶಿವನ ಒಲವಿನಿಂದಲೇ ರಚಿಸಿದ್ದೇನೆ ಎಂದು ಹೇಳಿರುವುದರಿಂದ ಮತ್ತು ಇಡೀ ಕಾವ್ಯದಲ್ಲಿ ಶಿವನ ಮಹಿಮೆಯನ್ನು ಕುರಿತು ವರ್ಣಿಸಿರುವುದರಿಂದ ಇನ್ನೂ ಮುಂದುವರಿದು ಪಂಪಾಕ್ಷೇತ್ರ ಶೈವಧರ್ಮ ಸಂಸ್ಕೃತಿ ಹಾಗೂ ಸಾಹಿತ್ಯವನ್ನು ಪ್ರತಿನಿಧಿಸುವ 'ಧರ್ಮಸಾಮ್ರಾಜ್ಯ' ಕಲ್ಪನೆವುಳ್ಳದ್ದಾಗಿದೆ. ಆರಂಭದ ಅರಸುಮನೆತನಗಳು ಶೈವ ಸಂಪ್ರದಾಯಕ್ಕೆ ಸೇರಿದ ಹಿನ್ನೆಲೆಯಲ್ಲಿ ದೇಪರಾಜನೂ ಶೈವ ಮತಕ್ಕೆ ಸೇರಿದವನೆಂಬುದಕ್ಕೆ ಸಮರ್ಥನೆ ದೊರೆಯುತ್ತದೆ.

**೩.೫. ಅಮರುಕ (ಅಲಭ್ಯಕೃತಿ)**

ದೇಪರಾಜನ ಮತ್ತೊಂದು ಕೃತಿ 'ಅಮರುಕ' ಗ್ರಂಥವು ಶತಕ ಗ್ರಂಥವಾಗಿದೆ.[೮೩] "ಸಂಸ್ಕೃತ ಸಾಹಿತ್ಯದಲ್ಲಿ ಅಮರು ಕವಿಯ 'ಅಮರು ಶತಕ'ವು ತುಂಬ ಪ್ರಸಿದ್ಧಿಯನ್ನು ಪಡೆದಿದೆ. 'ಅಮರುಕ' ಎಂತಲೂ ಕರೆಯುತ್ತಾರೆ. 'ಅಮರುಕ ಕವೇರೇಕಃ ಶ್ಲೋಕಃ ಪ್ರಬಂಧ ಶತಾಯತೇ' ಅಂದರೆ ಅಮರು ಕವಿಯ ಒಂದು ಶ್ಲೋಕಕ್ಕೆ ನೂರು ಪ್ರಬಂಧಗಳು ಸಮ ಎಂಬ ಮಾತಿದೆ. ಈ ಕೃತಿಯ ಗುಣಮೌಲ್ಯಗಳು ಮೇಲ್ಮಟ್ಟದವು ಎಂಬುದನ್ನು ತಿಳಿಸಲಾಗಿದೆ. ಈ ಕೃತಿಯ ಚೆಲುವಾದ ಪದ್ಯ ಚಿತ್ರಗಳಿಗೆ ಮಾರು ಹೋಗಿ ಅನೇಕ ಕನ್ನಡ ಕವಿಗಳು ಇದನ್ನು ಕನ್ನಡಕ್ಕೆ ತರಲು ಪ್ರಯತ್ನಪಟ್ಟಿದ್ದಾರೆ. ಆಧುನಿಕ ಕನ್ನಡ ಸಾಹಿತ್ಯದಲ್ಲಿ ಈ ಕೃತಿಯ ಹಲವು ಪದ್ಯಗಳನ್ನು ತೀ.ನಂ. ಶ್ರೀಕಂಠಯ್ಯನವರು ತಮ್ಮ 'ಬಿಡಿಮುತ್ತು' ಕೃತಿಯಲ್ಲಿ ಕನ್ನಡಿಸಿದ್ದರೆ, ಸಮಗ್ರ ಕೃತಿಯನ್ನೇ ಎಸ್.ವಿ. ಪರಮೇಶ್ವರಭಟ್ಟರು 'ಪ್ರೇಮಾರಾಧನ' ಎಂಬ ಹೆಸರಿನಲ್ಲಿ ಭಾಷಾಂತರಿಸಿದ್ದಾರೆ. ಈಗಿನ ತಿಳುವಳಿಕೆಯ ಮಟ್ಟಿಗೆ ಪ್ರಾಚೀನ ಕನ್ನಡ ಕವಿಗಳಲ್ಲಿ ಇದನ್ನು ಕನ್ನಡಕ್ಕೆ ತರುವ ಮೊದಲ ಪ್ರಯತ್ನ ಮಾಡಿದವನು

ದೇಪಕವಿ. ಈತನ ತರುವಾಯ ಚಿಕ್ಕುಪಾಧ್ಯಾಯನು ಕೂಡ "ಅಮರುಕ ಶತಕ"ವನ್ನು ರಚಿಸಿದ್ದ ಎಂದು ಕವಿಚರಿತಕಾರರು ಚಿತ್ರಿಸುತ್ತಾರೆ.[೮೪]

ದೇಪರಾಜನ ಅಮರುಕ ವೈಶಿಷ್ಟ್ಯವೆಂದರೆ ಪರಿವರ್ಧಿನಿ ಷಟ್ಪದಿಯಲ್ಲಿ ಸಮಗ್ರವಾಗಿ ರಚಿಸಿದ ಕಥನ ಕೃತಿಯಾಗಿರುವುದು ಎಂದು ಸಿ.ಯು. ಮಂಜುನಾಥ ಅವರು ಅಭಿಪ್ರಾಯಪಟ್ಟಿದ್ದಾರೆ.[೮೫]

ಅಮರುಕವನ್ನು ಕನ್ನಡಕ್ಕೆ ಭಾಷಾಂತರಿಸಿ, ಪರಿವರ್ಧಿನಿ ಷಟ್ಪದಿಯಲ್ಲಿ ಅಖಂಡ ಕಾವ್ಯ ರಚಿಸಿದ ಮೊದಲಿಗನೆಂಬ ಕಾರಣಕ್ಕೆ ದೇಪರಾಜ ಮುಖ್ಯನಾಗುತ್ತಾನೆ. ಎನ್.ಎಸ್. ತಾರಾನಾಥ ಅವರು "ದೇಪಕವಿಯ 'ಅಮರುಕ' ಈವರೆಗೆ ಅಚ್ಚಾಗಿಲ್ಲ. ಈ ಕೃತಿಯ ಹಸ್ತಪ್ರತಿಗಳೂ ಹೆಚ್ಚು ಸಂಖ್ಯೆಯಲ್ಲಿ ದೊರೆತಿಲ್ಲ. ಈ ಕೃತಿಯ ಒಂದೇ ಒಂದು ಹಸ್ತಪ್ರತಿ ಈವರೆಗೆ ನನ್ನ ಗಮನಕ್ಕೆ ಬಂದಿದ್ದು ಅದು ಅಸಮಗ್ರವಾಗಿದೆ. ಇದರಲ್ಲಿ ಆರಂಭದ ಮತ್ತು ನಡುವಣ ಭಾಗದ ನಾಲ್ಕಾರು ಪದ್ಯಗಳನ್ನು ಬಿಟ್ಟರೆ ಉಳಿದೆಲ್ಲ ಪದ್ಯಗಳೂ ಒಂದಲ್ಲ ಒಂದು ರೀತಿಯಲ್ಲಿ ತ್ರುಟಿತವಾಗಿರುವುದು ತುಂಬ ದುರದೃಷ್ಟದ ವಿಷಯ"[೮೬] ಎಂದಿದ್ದಾರೆ. "ಈ ಕೃತಿಯ ಭಾಷೆ ಶೈಲಿಗಳು ಲಲಿತವಾದವು, ಸಂಸ್ಕೃತಾನುವಾದವಾಗಿದ್ದರೂ ಕವಿಯ ಮೂಲ ಸಂಸ್ಕೃತ ಶಬ್ದಗಳನ್ನು ಹಾಗೆಯೇ ಬಳಸದಿರುವುದು, ಮೂಲದ ಭಾವವನ್ನು ಕನ್ನಡ ಪದಗಳಲ್ಲೇ ನಿರ್ವಹಿಸುವ ಪ್ರಯತ್ನ ಮೆಚ್ಚುವಂತದ್ದು"[೮೭] ಎಂದು ಎನ್.ಎಸ್. ತಾರಾನಾಥ ಅವರು ಕವಿಯ ವ್ಯಕ್ತಿತ್ವವನ್ನು ಕುರಿತು ಹೇಳಿರುವಂತಿದೆ.

ಅಮರುಕ ಕಾವ್ಯವನ್ನು ದೇಪರಾಜ ಮೊದಲು ರಚಿಸಿರಬಹುದೆಂದು ಎನ್ನಿಸುತ್ತದೆ. ಏಕೆಂದರೆ ಸಂಸ್ಕೃತ ಕಾವ್ಯದ ವರ್ಣನೆ, ಭಾಷಾ ಪ್ರೌಢಿಮೆ ಶೈಲಿಗೆ ಆಕರ್ಷಿತನಾಗಿ ಮೊದಲು ಭಾಷಾಂತರ ಕೆಲಸದಲ್ಲಿ ಪರಿಣತಿಯನ್ನು ಪಡೆದ ನಂತರವೇ ಸೊಬಗಿನ ಸೋನೆಯಂತಹ ದೇಸಿ ಮಹಾಕಾವ್ಯವನ್ನು ರಚಿಸುವ ಸಾಹಸಕ್ಕೆ ತೊಡಗಿರುವುದು ಕಂಡುಬರುವ ಸಾಧ್ಯತೆ ಇದೆ.

ದೇಪರಾಜನ ಕೃತಿಗಳೆರಡು ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟ ಕೃತಿಗಳಾಗಿ ನಿಲ್ಲುತ್ತವೆ. ಎರಡೂ ಶೃಂಗಾರ ರಸಪ್ರಧಾನವಾದ ಕೃತಿಗಳಾದರೂ ಕಾವ್ಯದ ಮಹತ್ವವನ್ನು, ಛಂದಸ್ಸಿನ ಅಪೂರ್ವತೆಯನ್ನೂ ಪಡೆದಿದೆ.[೮೮]

**ಅಡಿ ಟಿಪ್ಪಣಿಗಳು**

೧. ಆರ್. ನರಸಿಂಹಾಚಾರ್ಯ, ಕರ್ಣಾಟಕ ಕವಿಚರಿತೆ, ೧೯೩೩ ಸಂಪುಟ ೨, ಪುಟ-೨.

೨. ಹಂಪನಾಗರಾಜಯ್ಯ, ಸಾಂಗತ್ಯ ಕವಿಗಳು, ೨೦೧೨, ಸ್ವಪ್ನ ಬುಕ್‌ಹೌಸ್, ಬೆಂಗಳೂರು, ಪುಟ-೧೦.

೩. ಹಂಪಿ ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ಪುಟ-೫೭.

೪. ಮೈಸೂರು ಗೆಜೆಟಿಯರ್ ಭಾಗ ೨, ಪುಟ ೧೪೮೮.

೫. ಆರ್. ನರಸಿಂಹಾಚಾರ್, ಕರ್ಣಾಟಕ ಕವಿಚರಿತೆ ಸಂ-೨, ಕನ್ನಡ ಸಾಹಿತ್ಯ ಪರಿಷತ್ ಬೆಂಗಳೂರು, ೧೯೭೩, ಪುಟ-೨.

೬. ಬಿ.ಎಸ್. ಸಣ್ಣಯ್ಯ (ಸಂ), ದೇಪರಾಜವಿರಚಿತ ಸೊಬಗಿನ ಸೋನೆ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ೧೯೭೦, ಪ್ರಸ್ತಾವನೆ ಪುಟ-IX.

೭. ಎಪಿಗ್ರಾಫಿಯ ಕರ್ಣಾಟಕ IX ಬೆಂಗಳೂರು-೮೧.

೮. ಎಪಿಗ್ರಾಫಿಯ ಕರ್ಣಾಟಕ ಬೌರಿಂಗ್ ಪೇಟೆ ೩೧ ಮತ್ತು ಚಿಂತಾಮಣಿ ೯೪.

೯. ಬಿ.ಎಸ್. ಸಣ್ಣಯ್ಯ (ಸಂ), ಸೊಬಗಿನ ಸೋನೆ ೧೯೭೦. ಪ್ರಸ್ತಾವನೆ ಪುಟ-X.

೧೦. ಕೆ. ಕುಶಾಲಪ್ಪಗೌಡ (ಅನು), ಮಧುರಾವಿಜಯಂ ಅಥವಾ ವೀರಕಂಪರಾಯಚರಿತಂ ಅನುವಾದ ಹಂಪಿ ವಿಶ್ವವಿದ್ಯಾಲಯ, ಪ್ರಸ್ತಾವ ಪುಟ-೨೩.

೧೧. ಸಿ.ಹಯವದನರಾವ್, ಮೈಸೂರು ಗೆಜೆಟಿಯರ್, ಭಾಗ-೨, ಪುಟ-೧೪,೮೯,೮೭.

೧೨. ಅದೇ ಪುಟ, ೧೪೮೬-೮೭.

೧೩. P.B. Desai, History of Karnataka 1970, ಪುಟ-೩೮೪ Harihara had two wives namely Pampadevi and Malladevi, Among his sons were BukkaII, VirupakshaII, Devaraya I and Chikkaraya.

೧೪. K.A. Nilakanta Sastri, A History of south India First Pub, 1955, ಪುಟ ೨೫೫ Harihara, replaced his cousions by his own sons as governors of provineas. Thus Devaraya was made the governor of Udayagiri.

೧೫. Mysore and coorg from Inscriptions, ಮೊದಲ ಮುದ್ರಣ ೧೯೦೮, ಎರಡನೆ ಮುದ್ರಣ Asian Educational service ೧೯೮೬ ಪುಟ-೧೧೨.

೧೬. Mysore and coorg form Inscriptions, ಮೊದಲ ಮುದ್ರಣ ೧೯೦೮, ಎರಡನೆ ಮುದ್ರಣ Asian Educational service ೧೯೮೬, ಪುಟ-೧೧೪.

೧೭. ಕೆ. ಕುಶಾಲಪ್ಪಗೌಡ (ಅನು), ಮಧುರಾವಿಜಯಂ ಅಥವಾ ವೀರಕಂಪರಾಯ ಚರಿತಂ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೧೧, ಪ್ರಸ್ತಾವನೆ ಪುಟ-೨೨.

೧೮. ಅದೇ ಪುಟ-೨೨.

೧೯. Mysore and coorg form Inscriptions, ಮೊದಲ ಮುದ್ರಣ ೧೯೦೮, ಎರಡನೆ ಮುದ್ರಣ Asian Educational service ೧೯೮೬, ಪುಟ-೧೧೪.

೨೦. ಹರಿಹರಶಾಸ್ತ್ರಿ, ಶ್ರೀನಿವಾಸಶಾಸ್ತ್ರಿ, ೧೯೨೪, ಮುನ್ನುಡಿ.

೨೧. ಕೆ. ಕುಶಾಲಪ್ಪಗೌಡ (ಅನು), ಮಧುರಾವಿಜಯಂ ಅಥವಾ ವೀರಕಂಪರಾಯ ಚರಿತಂ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪ್ರಸ್ತಾವನೆ ಪುಟ-೨೩.

೨೨. K.S. Nilakanta Sastry, A History of South India.

೨೩. ಎಚ್. ತಿಪ್ಪೇರುದ್ರಸ್ವಾಮಿ, ಕರ್ಣಾಟಕ ಸಂಸ್ಕೃತಿ ಸಮೀಕ್ಷೆ, ೨೦೦೩, ಪುಟ-೧೩೮.

೨೪. ರಂ.ಶ್ರೀ ಮುಗಳಿ, ಕನ್ನಡ ಸಾಹಿತ್ಯ ಚರಿತ್ರೆ, ೧೯೭೧, ಪುಟ-೨೯೩.

೨೫. ತ.ಸು. ಶಾಮರಾಯ, ಮೇರಾಜೇಶ್ವರಯ್ಯ, ಜನಪ್ರಿಯ ಕನ್ನಡ ಸಾಹಿತ್ಯ ಚರಿತ್ರೆ, ೧೯೬೪, ಪುಟ-೫೪೪.

೨೬. ಬಿ.ಎಸ್. ಸಣ್ಣಯ್ಯ (ಸಂ), ಸೊಬಗಿನ ಸೋನೆ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೭೦, ಪುಟ-XI

೨೭. ಕೆ. ನಾಗೇಂದ್ರಪ್ಪ, ಹದಿನೈದನೆಯ ಶತಮಾನದ ಕನ್ನಡ ಸಾಹಿತ್ಯ ಚರಿತ್ರೆ, ಕನ್ನಡ ಸಾಹಿತ್ಯ ಪರಿಷತ್, ೧೯೯೬, ಪುಟ-೯.

೨೮. ಕೆ.ವಿ. ರಮೇಶ್, ಕರ್ಣಾಟಕ ಶಾಸನ ಸಮೀಕ್ಷೆ, ಪುಟ-೫೦-೫೧.

೨೯. ಜಿ.ಎಸ್. ಶಿವರುದ್ರಪ್ಪ, ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂ-೪, ಭಾಗ-೧,ಪುಟ ೧೪೩

೩೦. ಅದೇ ಪುಟ-೫೧.

೩೧. ಕೆ. ಕುಶಾಲಪ್ಪಗೌಡ (ಅನು), ಮಧುರಾವಿಜಯಂ ಅಥವಾ ವೀರಕಂಪರಾಯ ಚರಿತಂ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧, ಪ್ರಸ್ತಾವನೆ ಪುಟ-೨೦.

೩೨. ಅದೇ ಪುಟ-೨೧, ೨೧.

೩೩. ನಾಗರತ್ನಮ್ಮ, ಸಾಂಗತ್ಯ ಸಾಹಿತ್ಯ ಚೇತನ ಬುಕ್‌ಹೌಸ್, ಮೈಸೂರು, ೨೦೧೧ ಪುಟ-೧೦೩.

೩೪. ಕೆ. ಕುಶಾಲಪ್ಪಗೌಡ (ಅನು), ಮಧುರಾವಿಜಯಂ ಅಥವಾ ವೀರಕಂಪರಾಯ ಚರಿತಂ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪ್ರಸ್ತಾವನೆ ಪುಟ-೨೪.

೩೫. ಅದೇ ಪುಟ-೨೬.

೩೬. ಕರ್ನಾಟಕ ಪರಂಪರೆ ಸಂಪುಟ-೨, ೧೯೭೦, ಪುಟ-೧೩೭.

೩೭. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ ೪, ಭಾಗ ೧, ಪುಟ-೧೪೩, ಬೆಂಗಳೂರು ವಿಶ್ವವಿದ್ಯಾಲಯ, ೧೯೯೭.

೩೮. ವೀರಣ್ಣ ರಾಜೂರ, ಕನ್ನಡ ಸಾಂಗತ್ಯ ಸಾಹಿತ್ಯ, ಕನ್ನಡ ಸಾಹಿತ್ಯ ಪರಿಷತ್, ೧೯೮೫, ಪುಟ-೧೮೬.

೩೯. Devaraya II was a great builder and a Patron of Poets Himself a scholor and author... A History of South India by K.A. Nilakanta Sastri 3rd edn, 1966, Page-271.

೪೦. ಜಿ.ಎಸ್. ದೀಕ್ಷಿತ್, ಎಂ.ಎ. ವಿಶ್ವೇಶ್ವರಯ್ಯ (ಸಂ), ಸಂಗಮರ ಕಾಲದ ವಿಜಯನಗರ, ಅದರ ಇತಿಹಾಸ ಮತ್ತು ಸಂಸ್ಕೃತಿಗಳ ಅಧ್ಯಯನ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು, ೧೯೯೧, ಪುಟ-೧೫೩.

೪೧. ಎಸ್.ವಿದ್ಯಾಶಂಕರ, ವೀರಶೈವ ಸಾಹಿತ್ಯ ಚರಿತ್ರೆ, ಸಂಪುಟ ೩, ಭಾಗ-೧, ಪುಟ-೪೩೭

೪೨. ಬಿ.ಎಸ್. ಸಣ್ಣಯ್ಯ (ಸಂ), ದೇಪರಾಜ ವಿರಚಿತ ಸೊಬಗಿನ ಸೋನೆ, ಪ್ರಥಮ ಮುದ್ರಣ ೧೯೭೦, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ಪುಟ-೪, ಸಂಧಿ೧, ಪದ್ಯ ೧೦,

೪೩. ಅದೇ ಪುಟ-೮೩, ಸಂಧಿ ೮, ಪದ್ಯ ೩, ಅದೇ ಪುಟ ೧೭೮, ಸಂಧಿ ೧೪, ಪದ್ಯ ೧.೩, ಅದೇ ಪುಟ-೨೪೭, ಸಂಧಿ ೧೮, ಪದ್ಯ ೨, ಅದೇ ಪುಟ-೨೬೫, ಸಂಧಿ ೧೯, ಪದ್ಯ ೨, ಅದೇ ಪುಟ-೩೬೨, ಸಂಧಿ ೨೬, ಪದ್ಯ ೨.

೪೪. ಅದೇ ಪುಟ-೫, ಸಂಧಿ ೧, ಪದ್ಯ ೧೪, ಅದೇ ಪುಟ ೫೭, ಸಂಧಿ ೯, ಪದ್ಯ ೨, ಅದೇ ಪುಟ-೧೦೨, ಸಂಧಿ ೯, ಪದ್ಯ ೪೪, ಅದೇ ಪುಟ-೩೨೨, ಸಂಧಿ ೨೩, ಪದ್ಯ೧.

೪೫. ಅದೇ ಪುಟ-೬, ಸಂಧಿ ೧, ಪದ್ಯ ೧೭,೨೦.

೪೬. ಅದೇ ಪುಟ-೧೬, ಸಂಧಿ ೨, ಪದ್ಯ ೩.

೪೭. ಅದೇ ಪುಟ-೧೬, ಸಂಧಿ ೨, ಪದ್ಯ ೪.

೪೮. ಅದೇ ಪುಟ-೩೯, ಸಂಧಿ ೪, ಪದ್ಯ ೩. ಅದೇ ಪುಟ-೭೧, ಸಂಧಿ ೭, ಪದ್ಯ ೨. ಅದೇ ಪುಟ-೯೪, ಸಂಧಿ ೯, ಪದ್ಯ ೨. ಪುಟ-೧೦೨, ಸಂಧಿ ೯, ಪದ್ಯ ೪೪. ಅದೇ ಪುಟ-೩೪೮, ಸಂಧಿ ೨೫, ಪದ್ಯ ೨.

೪೯. ಅದೇ ಪುಟ-೧೩೮, ಸಂಧಿ ೧೨, ಪದ್ಯ ೨.

೫೦. ಎನ್.ಎಸ್. ತಾರಾನಾಥ, ದೇಪರಾಜನ ಅಮರುಕ, ಪರಿಶೋಧನ ಭಾರತೀ ಪ್ರಕಾಶನ, ಮೈಸೂರು, ೧೯೮೧, ಪುಟ–೪೫.

೫೧. ಬಿ.ಎಸ್. ಸಣ್ಣಯ್ಯ (ಸಂ), ಸೊಬಗಿನ ಸೋನೆ, ಪುಟ–೬, ಸಂಧಿ ೧, ಪದ್ಯ ೧೭.

೫೨. ಅದೇ ಪುಟ–೫, ಸಂಧಿ ೧, ಪದ್ಯ ೧೪. ಅದೇ ಪುಟ–೨೪೭, ಸಂಧಿ ೧೮, ಪದ್ಯ ೨. ಅದೇ ಪುಟ–೩೪೮, ಸಂಧಿ ೨೫, ಪದ್ಯ ೨.

೫೩. ಆರ್. ನರಸಿಂಹಾಚಾರ್ಯ, ಕರ್ಣಾಟಕ ಕವಿಚರಿತೆ ದ್ವಿತೀಯ ಸಂಪುಟ, ಪುಟ–೨

೫೪. ಬಿ.ಎಸ್. ಸಣ್ಣಯ್ಯ (ಸಂ), ದೇಪರಾಜ ವಿರಚಿತ ಸೊಬಗಿನ ಸೋನೆ, ೧೯೭೦, ಪ್ರಸ್ತಾವನೆ ಪುಟ–IX.

೫೫. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಬೆಂಗಳೂರು ವಿಶ್ವವಿದ್ಯಾಲಯ, ೧೯೭೭, ಪುಟ–೧೪೩.

೫೬. ವೀರಣ್ಣ ರಾಜೂರ, ಕನ್ನಡ ಸಾಂಗತ್ಯ ಸಾಹಿತ್ಯ, ೧೯೮೫, ಪುಟ, ೧೮೭.

೫೭. ಎಚ್. ದೇವೀರಪ್ಪ (ಸಂ), ಸಾಧನೆ, ೧೯೭೩, ಪುಟ–೧೫೬

೫೮. ರಂ.ಶ್ರೀ ಮುಗಳಿ, ಕನ್ನಡ ಸಾಹಿತ್ಯ ಚರಿತ್ರೆ, ೧೯೭೧, ಪುಟ–೨೯೩.

೫೯. ಸ.ಸ. ಮಾಳವಾಡ, ಸಾಹಿತ್ಯ ಸಂಗಮ, ಜಯಪ್ರಕಾಶನ, ಧಾರವಾಡ, ೧೯೭೦, ಪುಟ–೪೪.

೬೦. ಕೆ.ವಿ. ರಮೇಶ್, ಕರ್ಣಾಟಕ ಶಾಸನ ಸಮೀಕ್ಷೆ, ೧೯೭೧, ಪುಟ–೫೦–೫೧.

೬೧. ಸಿ.ಹಯವದನರಾವ್, ಮೈಸೂರು ಗೆಜೆಟಿಯರ್ ಭಾಗ–೨, ಪುಟ–೧೪೮೬.

೬೨. ಕನ್ನಡ ಸಾಹಿತ್ಯ ಚರಿತ್ರೆ, ಮೈಸೂರು ವಿಶ್ವವಿದ್ಯಾನಿಲಯ, ಕನ್ನಡ ಅಧ್ಯಯನ ಸಂಸ್ಥೆ, ೧೯೮೧, ಪುಟ–೭೪೯.

೬೩. ಬಿ.ಎಸ್. ಸಣ್ಣಯ್ಯ (ಸಂ), ಸೊಬಗಿನ ಸೋನೆ, ೧೯೭೦, ಪ್ರಸ್ತಾವನೆ ಪುಟ–XI, XII.

೬೪. ಅದೇ ಪುಟ–XII.

೬೫. ಎಂ. ಚಿದಾನಂದಮೂರ್ತಿ, ಛಂದೋತಂರಗ ಪುಟ–೧೩೨.

೬೬. ಟಿ.ವಿ. ವೆಂಕಟಾಚಲಶಾಸ್ತ್ರಿ, ಕನ್ನಡ ಛಂದಸ್ಸು, ೧೯೭೦, ಪುಟ–೭೦.

೬೭. ಕೆ. ಕುಶಾಲಪ್ಪಗೌಡ (ಅನು), ಮಧುರಾವಿಜಯಂ ಅಥವಾ ವೀರಕಂಪರಾಯ ಚರಿತಂ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧, ಪ್ರಸ್ತಾವನೆ ಪುಟ–೭.

೬೮. ಬಿ.ಎಸ್. ಸಣ್ಣಯ್ಯ (ಸಂ), ಸೊಬಗಿನ ಸೋನೆ, ೧೯೭೦, ಪ್ರಸ್ತಾವನೆ ಪುಟ–XII.

೬೯. ಕೆ. ನಾಗೇಂದ್ರಪ್ಪ, ಹದಿನೈದನೆಯ ಶತಮಾನದ ಕನ್ನಡ ಸಾಹಿತ್ಯ ಚರಿತ್ರೆ, ಕನ್ನಡ ಸಾಹಿತ್ಯ ಪರಿಷತ್, ೧೯೯೬, ಪುಟ–೯.

೭೦. ಸ.ಸ. ಮಾಳವಾಡ, ಸಾಹಿತ್ಯ ಸಂಗಮ, ಜಯಪ್ರಕಾಶನ, ಧಾರವಾಡ, ೧೯೭೦, ಪುಟ-೪೩.

೭೧. ಅದೇ ಪುಟ-೪೪.

೭೨. ಆರ್.ಎನ್. ವಿಜಯಲಕ್ಷ್ಮಿ, ಕನ್ನಡ ಸಾಂಗತ್ಯ ಪ್ರಕಾರ ಒಂದು ಸಂಕ್ಷಿಪ್ತ ಪರಿಚಯ, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ, ೧೯೮೨, ಪುಟ-೩೪.

೭೩. ಸದಾನಂದ ಕನವಳ್ಳಿ, ಪ್ರೊ.ಸಿ.ವಿ. ಕರಿಮನಿ (ಸಂ), ವೀರಶೈವ ಸಾಂಗತ್ಯ ಸಮೀಕ್ಷೆ ಕನ್ನಡ ಪುಸ್ತಕ ಪ್ರಾಧಿಕಾರ, ೨೦೧೦, ಪುಟ-೨೨೮.

೭೪. ಬಿ.ಎಸ್. ಸಣ್ಣಯ್ಯ (ಸಂ), ಸೊಬಗಿನ ಸೋನೆ ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೭೦, ಪುಟ-೧೨, ಸಂಧಿ ೧, ಪದ್ಯ೫೪.

೭೫. ಸದಾನಂದ ಕನವಳ್ಳಿ, ಪ್ರೊ.ಸಿ.ವಿ. ಕರಿಮನಿ (ಸಂ), ವೀರಶೈವ ಸಾಹಿತ್ಯ ಸಮೀಕ್ಷೆ, ಕನ್ನಡ ಪುಸ್ತಕ ಪ್ರಾಧಿಕಾರ, ೨೦೧೦, ಪುಟ-೧೯೯.

೭೬. ಅದೇ ಪುಟ-೧೯೯.

೭೭. ಸದಾನಂದ ಕನವಳ್ಳಿ, ಪ್ರೊ.ಸಿ.ವಿ. ಕರಿಮನಿ (ಸಂ), ವೀರಶೈವ ಸಾಹಿತ್ಯ ಸಮೀಕ್ಷೆ, ಕನ್ನಡ ಪುಸ್ತಕ ಪ್ರಾಧಿಕಾರ, ೨೦೧೦, ಪುಟ-೧೯೯.

೭೮. ಅದೇ ಪುಟ, ೧೯೯.

೭೯. ಎಂ. ಚಿದಾನಂದಮೂರ್ತಿ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪುಟ-೧೫೭.

೮೦. ಸದಾನಂದ ಕನವಳ್ಳಿ, ಪ್ರೊ.ಸಿ.ವಿ. ಕರಿಮನಿ (ಸಂ), ವೀರಶೈವ ಸಾಹಿತ್ಯ ಸಮೀಕ್ಷೆ ಪುಟ-೨೦೪.

೮೧. ವೀರಣ್ಣ ರಾಜೂರ, ಕನ್ನಡ ಸಾಂಗತ್ಯ ಸಾಹಿತ್ಯ, ೧೯೮೫, ಪುಟ-೧೮೬.

೮೨. ನಾಗರತ್ನಮ್ಮ, ಸಾಂಗತ್ಯ ಸಾಹಿತ್ಯ, ೨೦೧೧, ಪುಟ-೧೦೪.

೮೩. ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ಅಮರುಕ ಕೆಎ ೫೫೪, ಈ ಕಾಗದದ ಹಸ್ತಪ್ರತಿಯನ್ನು ಬಳಸಿದ್ದು.

೮೪. ಆರ್. ನರಸಿಂಹಾಚಾರ್ 'ಕರ್ಣಾಟಕ ಕವಿಚರಿತೆ', ೨, ಬೆಂಗಳೂರು ೧೯೭೩, ಪು-೪೩೪, ಪು-೪೫೦.

೮೫. ಸಿ.ಯು. ಮಂಜುನಾಥ, ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ-೪, ಭಾಗ-೧, ಪುಟ-೧೪೮.

೮೬. ಎನ್.ಎಸ್. ತಾರಾನಾಥ, ಪರಿಶೋಧನ, ಭಾರತೀ ಪ್ರಕಾಶನ, ಮೈಸೂರು, ೧೯೮೧, ಪುಟ-೪೨,೪೩.

೮೭. ಅದೇ ಪುಟ-೫೦

೮೮. ಹಾ.ಮಾ. ನಾಯಕ (ಪ್ರ.ಸಂ), ಕನ್ನಡ ಸಾಹಿತ್ಯ ಚರಿತ್ರೆ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಸಂಪುಟ-೫, ೧೯೮೧, ಪುಟ-೭೫೯.



# ಅಧ್ಯಾಯ : ನಾಲ್ಕು

## ಸೊಬಗಿನ ಸೋನೆ: ಪ್ರೇರಣೆ-ಪ್ರಭಾವ

ಕನ್ನಡ ಸಾಹಿತ್ಯವು ಯುಗಧರ್ಮಕ್ಕನುಗುಣವಾಗಿ ವಸ್ತು ಮತ್ತು ಸ್ವರೂಪದಲ್ಲಿ ಬದಲಾವಣೆಯನ್ನು ಪಡೆದುಕೊಳ್ಳುತ್ತ ಬೆಳೆದುಬಂದಿದೆ. ಹತ್ತನೆಯ ಶತಮಾನದ ಕನ್ನಡ ಸಾಹಿತ್ಯ ಪಂಡಿತರನ್ನು ಮೆಚ್ಚಿಸುವ ಉದ್ದೇಶದಿಂದ ರಚನೆಗೊಂಡರೆ, ಹದಿನೈದನೆಯ ಶತಮಾನದ ಕನ್ನಡ ಸಾಹಿತ್ಯವು ಜನಪರ ಕಾಳಜಿಯನ್ನು ಮೂಡಿಸುವ ಸಲುವಾಗಿ ರಚನೆಯಾಗಿರುತ್ತದೆ. ಈ ಕಾರಣದಿಂದ ಕನ್ನಡ ಕಾವ್ಯ ಪ್ರಕಾರವು ಮಾರ್ಗದಿಂದ ದೇಶಿಯತೆ ಕಡೆಗೆ, ಪ್ರೌಢತೆಯಿಂದ ಸರಳತೆಯ ಕಡೆಗೆ ಅರಮನೆಯಿಂದ ಜನಮನದ ಕಡೆಗೆ ಪರಿವರ್ತನೆ ಹೊಂದುತ್ತಾ ಹೆಚ್ಚು ಜನಸಾಮಾನ್ಯರನ್ನು ತಲುಪುವಂತಾಯಿತು. ಕನ್ನಡ ಕವಿಗಳು ಹುಟ್ಟಿ ಬೆಳೆದ ಪರಿಸರ, ಅನುಸರಿಸಿದ ಮತಧರ್ಮ, ರಾಜರ ಆಶ್ರಯ ಹಾಗೂ ಪ್ರೋತ್ಸಾಹ, ಅನ್ಯಭಾಷಾ ಸಾಹಿತ್ಯ, ಯುಗಧರ್ಮ ಇವುಗಳ ಪ್ರೇರಣೆಯಿಂದಾಗಿ ವೈವಿಧ್ಯಮಯ ಸಾಹಿತ್ಯ ರಚನೆಯಾಗಿದೆ.

ಒಂದು ಕಾವ್ಯ ರೂಪಗೊಳ್ಳುವಾಗ ಮತ್ತೊಂದು ಕಾವ್ಯದ ಪ್ರೇರಣೆಯನ್ನು ಪಡೆದುಕೊಳ್ಳುತ್ತದೆ. ಪ್ರೇರಣೆ ಇಲ್ಲದೆ ಕಾವ್ಯ ಹುಟ್ಟುವುದಿಲ್ಲ. ಪ್ರೇರಣೆ ಎಂದರೆ "ಒಂದು ಕಾರ್ಯದಲ್ಲಿ ಪ್ರವರ್ತಿಸುವಂತೆ ಮಾಡುವುದು"[೧] ಎಂದು ಕನ್ನಡ ನಿಘಂಟಿನಲ್ಲಿ ಅರ್ಥೈಸಲಾಗಿದೆ. "ಯಾವ ಒಬ್ಬ ಕವಿಯ ಕೃತಿಯೂ ಒಂದಲ್ಲ ಒಂದು ರೀತಿಯಲ್ಲಿ ಅದಕ್ಕಿಂತ ಹಿಂದೆ ಬಂದ ಕೃತಿಗಳಿಗೆ ಋಣಿಯಾಗದಿರಲು ಸಾಧ್ಯವಿಲ್ಲ. ಒಂದೊಂದು ಕವಿ ಕೃತಿಯೂ ಪೂರ್ವ ಕವಿ ಪರಂಪರೆಯ ಅಂಶಗಳಿಂದ ಪುಷ್ಟವಾದದ್ದು, ಅದರ ವಿಕಾಸದ ಪರಿಣಾಮ ರೂಪವಾದದ್ದು. ಈ ಮಾತು ಸಾಧಾರಣ ಕವಿಗಳನ್ನು ಕುರಿತದ್ದು ಮಾತ್ರವಲ್ಲ ಮಹಾಕವಿಗಳು ಕೂಡ ಯಾರಿಗೂ ಋಣಿಯಾಗದೆ ಸ್ವತಂತ್ರ ಪ್ರತಿಭೆಯವರು ಎಂದು ಹೇಳುವಂತಿಲ್ಲ"[೨] ಎಂದು ಜಿ.ಎಸ್. ಶಿವರುದ್ರಪ್ಪನವರ ಅಭಿಪ್ರಾಯ ಮುಖ್ಯವಾಗುತ್ತದೆ. "ಕೃತಿ ನಿರ್ಮಾಣ ಕಾಲದಲ್ಲಿ ಕವಿಯ ಸ್ವಂತ ನಾಡಿನ ಐತಿಹಾಸಿಕ, ಸಾಮಾಜಿಕ ಪ್ರಜ್ಞೆ ಅವನ ರಕ್ತದಲ್ಲಿಯೇ ಎಚ್ಚೆತ್ತಿರುತ್ತದೆ. ಯಾವುದೇ ಸಾಹಿತ್ಯ ಕೃತಿಯನ್ನಾಗಲೀ ಭೂತಕಾಲದ ಋಣದಿಂದ ಸಹಜವಾಗಿ ಬೇರ್ಪಡಿಸಲು ಬರುವಂತಿಲ್ಲ"[೩] ಎಂದು ಟಿ.ಎಸ್. ಎಲಿಯಟ್ ಹೇಳುತ್ತಾನೆ. ಕವಿಯು ಭೂತ ಮತ್ತು ವರ್ತಮಾನ ಕಾಲಗಳ ನಡುವೆ ತನ್ನ ತನವನ್ನು ಗುರುತಿಸಿಕೊಳ್ಳುತ್ತಾ ಭವಿಷ್ಯತ್ತಿನಲ್ಲಿ ಪ್ರಸ್ತುತನಾಗಬಯಸುತ್ತಾನೆ. ಕನ್ನಡ ಸಾಹಿತ್ಯ ಅನ್ಯಭಾಷಾ

ಸಾಹಿತ್ಯಗಳಿಂದ ಪ್ರೇರಣೆ ಪಡೆದಿದೆ. ಅದು "ವಿವಿಧ ಕಥಾ ಮೂಲಗಳಿಂದ ವಿಷಯಗಳನ್ನು ಯಥೋಚಿತವಾಗಿ ಸಂಗ್ರಹಿಸಿ, ಜಾಣ್ಮೆಯಿಂದ ಸಂಯೋಜಿಸಿ ಸ್ವತಂತ್ರವಾದ ರೀತಿಯಲ್ಲಿ ಒಂದು ಸಂಮಿಶ್ರ ಕಥಾ ಸೃಷ್ಟಿಯನ್ನು ಕನ್ನಡ ಕವಿಗಳು ಮಾಡಿರುವುದು ಸಾಮಾನ್ಯವಾಗಿ ಗೋಚರವಾಗುತ್ತದೆ.[೪] ಈ ಮಾತು ಎಲ್ಲ ಪುರಾಣ ಕಾವ್ಯಗಳಿಗೆ ಅನ್ವಯಿಸುವುದಲ್ಲದೆ ಸೊಬಗಿನ ಸೋನೆ ಕಾವ್ಯಕ್ಕೂ ಅನ್ವಯವಾಗುತ್ತದೆ. "ಅನೇಕ ಸಂಸ್ಕೃತ ಕಾವ್ಯಗಳಿಂದ, ವಸ್ತುವನ್ನೋ, ವಸ್ತುವಿನ್ಯಾಸವನ್ನೋ, ಪದಪುಂಜಾದಿಗಳನ್ನೋ ಧಾರಾಳವಾಗಿ ಕನ್ನಡ ಕವಿಗಳು ತಮ್ಮ ಕೃತಿಗಳಲ್ಲಿ ಅಳವಡಿಸಿಕೊಂಡಿದ್ದಾರೆ. ಹಾಗೆಯೇ ಸಂಸ್ಕೃತ ಕವಿಗಳನ್ನು ಕೆಲವರು ತಮ್ಮ ಕಾವ್ಯಗಳ ಆರಂಭದಲ್ಲಿ ಸ್ತುತಿಸಿದ್ದಾರೆ"[೫] ಎಂದು ಜಿ.ಎಸ್. ಶಿವರುದ್ರಪ್ಪನವರು ವ್ಯಕ್ತಪಡಿಸಿರುವುದು ಇಲ್ಲಿ ಪ್ರಸ್ತುತವೆನ್ನಿಸುತ್ತದೆ. ಪಂಪನಿಗೆ ವ್ಯಾಸಕವಿ, ಪೊನ್ನನಿಗೆ ಕಾಳಿದಾಸ, ರನ್ನನಿಗೆ ಪಂಪ, ಭಾಸಕವಿ, ದುರ್ಗಸಿಂಹನಿಗೆ ವಸುಭಾಗಭಟ್ಟ, ಭೀಮಕವಿಗೆ ಪಾಲ್ಕುರಿಕೆ ಸೋಮನಾಥ ಕವಿಗಳು ಸಾಹಿತ್ಯ ಕೃಷಿಗೆ ಪ್ರೇರಣೆ ಕೊಟ್ಟಂತೆ ದೇಪರಾಜ ಕವಿಗೂ ಪ್ರೇರಣೆ ನೀಡಿದ ಕವಿಗಳಿರಬಹುದು ಎನ್ನಿಸುತ್ತದೆ. ಈ ಹಿನ್ನೆಲೆಯಲ್ಲಿ ಸೊಬಗಿನ ಸೋನೆ ಕಾವ್ಯದ ಆರಂಭದಲ್ಲಿ ಕವಿ ದೇಪರಾಜನು ಸಂಸ್ಕೃತ ಕವಿಗಳನ್ನು ಮಾತ್ರ ಸ್ಮರಿಸಿರುವುದು ಕಂಡುಬರುತ್ತದೆ.

> ಕಾಲುವಿಡಿವೆ ವಾಲ್ಮೀಕಿಯ ಚಾಚುವೆ
> ಭಾಳವ ಬಾಣನಡಿಗಳಲ್ಲಿ
> ಕಾಳಿದಾಸಗೆ ದಾಸನಪ್ಪೆನುಳಿದ ಕವಿ
> ಜಾಲವ ಜಯಯೆಂದು ಬಲಗೊಂಬೆ (೧/೧೩)

ವಾಲ್ಮೀಕಿಯ ಕಾಲು ಹಿಡಿವೆ, ಬಾಣನ ಪಾದಗಳಿಗೆ ನನ್ನ ಹಣೆ ಚಾಚುವೆ, ಕಾಳಿದಾಸನಿಗೆ ದಾಸನಾಗುವೆ, ಉಳಿದ ಕವಿ ಸಮೂಹವನ್ನು ಜಯ ಜಯ ಎಂದು ಹೇಳಿ ನಮಸ್ಕರಿಸುವೆನೆಂದು ದೇಪರಾಜ ಪೂರ್ವ ಕವಿಗಳ ಸ್ಮರಣೆ ಮಾಡಿರುತ್ತಾನೆ. ಸಂಸ್ಕೃತ ಸಾಹಿತ್ಯದ ಮಹಾಕವಿಗಳಾದ ಇವರು ದೇಪರಾಜನಿಗೆ ಮಾದರಿಯಾಗಿರುತ್ತಾರೆ. ದೇಪರಾಜನ ಮತ್ತೊಂದು ಕೃತಿ ಅಮರುಕ ಶತಕವು ಸಂಸ್ಕೃತ ಕವಿ ಅಮರುಕನ ಶತಕವನ್ನು ಕನ್ನಡಕ್ಕೆ ಭಾಷಾಂತರಿಸಿ ಪರಿವರ್ಧಿನಿ ಷಟ್ಪದಿಯಲ್ಲಿ ರಚಿಸಿದ್ದಾಗಿದೆ. ಇದರಿಂದ ದೇಪರಾಜ ಸಂಸ್ಕೃತ ಭಾಷೆಯ ಸಾಹಿತ್ಯವನ್ನು ಬಲ್ಲವನಾಗಿದ್ದಾನೆ. ಕನ್ನಡ ಸಾಹಿತ್ಯವು ಸಂಸ್ಕೃತ ಸಾಹಿತ್ಯಕ್ಕೆ ಸರಿಸಮಾನವಾಗಿ ಬೆಳೆಯಲೆಂಬ ಆಶಯವನ್ನು ದೇಪರಾಜ ತಳೆದಿರುವಂತಿದೆ. ಸಂಸ್ಕೃತ ಸಾಹಿತ್ಯದ ವಿಸ್ತಾರ, ಹರಹು ಪಡೆದುಕೊಂಡು ಕನ್ನಡದಲ್ಲಿ ಕಾವ್ಯ ರಚಿಸಲು ತೊಡಗಿದ್ದರಿಂದ ಸೊಬಗಿನ ಸೋನೆ ಕಾವ್ಯದಲ್ಲಿ ಸಂಪ್ರದಾಯದ ವರ್ಣನೆಗಳು ಅತಿಯಾಗಿವೆ.

ಸೊಬಗಿನ ಸೋನೆ ಕಾವ್ಯದ ಆಕರಗಳು ಯಾವುವೆಂಬುದರ ಬಗ್ಗೆ ಸ್ಪಷ್ಟತೆಯಿಲ್ಲ. ದೇಪರಾಜ ಕವಿಗೆ ಪ್ರೇರಣೆಯನ್ನು ನೀಡಿದ ಅಂಶಗಳ ಕುರಿತಾಗಿ ತನ್ನ ಕಾವ್ಯಗಳಲ್ಲಿ ಎಲ್ಲಿಯೂ ಪ್ರಸ್ತಾಪಿಸಿಲ್ಲದಿರುವುದರಿಂದ ಆಕರ ಗ್ರಂಥಗಳು ಯಾವುವೆಂದು ಸಂದಿಗ್ಧತೆ ಉಂಟಾಗಿದೆ. ಹಾಗಾಗಿ ಸೊಬಗಿನ ಸೋನೆ ಕಾವ್ಯದ ಆಕರಗಳ ನಿರ್ಧಾರ ಮಾಡುವುದು ಸುಲಭ ಸಾಧ್ಯವಲ್ಲ. ಆದರೂ

ಅಧ್ಯಯನದ ಸಂದರ್ಭದಲ್ಲಿ ಮೂಲ ಆಕರಗಳನ್ನು ಗುರುತಿಸುವುದು ಮಹತ್ವದ ವಿಚಾರವೇ ಆಗಿದೆ. ನಾಗವರ್ಮನು ಛಂದೋಂಬುಧಿಯನ್ನು ತನ್ನ ಹೆಂಡತಿ ಹರಿಣಾಕ್ಷಿಗೆ ಹೇಳಿದುದಾಗಿ ಇರುವ ಪದ್ಯ.

"ಇಂದು ನಿಭಾನನೆ ಮಂಗಳ
ಛಂದಂ ಪಿಂಗಳ ನಿನವನಿಯೊಳ್ ಪರಪಿದೊಡಾ
ಛಂದೋಂಬುರಾಶಿಯೊಳ್‌ಮಿಗೆ
ತಂದದ ನಿಜಸತಿಗೆ ನಾಗವರ್ಮಂ ಪೇಳ್ದಂ"[೬]

ಶಿವ ತನ್ನ ಮಡದಿ ಉಮೆಗೆ ಛಂದಸ್ಸನ್ನು ಹೇಳಿದನೆಂಬ ಪ್ರತೀತಿ ಇದೆ. ಇದನ್ನು ಪಿಂಗಳನು ಭೂಲೋಕಕ್ಕೆ ವಿಸ್ತರಿಸಿದನು. ಇದನ್ನು ನಾಗವರ್ಮ ತನ್ನ ಪತ್ನಿಗೆ ಪ್ರೀತಿಯಿಂದ ಹೇಳಿದ್ದಾನೆ. ಇಲ್ಲಿ ಸತಿ-ಪತಿಯರ ಸಂಭಾಷಣಾ ಶೈಲಿಯು ಸ್ವಾರಸ್ಯವಾಗಿ ಮೂಡಿಬಂದಿರುತ್ತದೆ. ಇದೇ ಸಂಪ್ರದಾಯವು ಸೊಬಗಿನ ಸೋನೆಯಲ್ಲಿಯೂ ಕಂಡುಬರುತ್ತದೆ.

"ನಾರಿ ಕೇಳ್ವಳು ಕಳಾವಿದೆ ಪೇಳುವ
ನಾ ರಸಿಕನು ದೇಪನೃಪನೆನೆ
ಆರಾಲಿಸರಾರೋದರು ಕಥೆಯಿದ
ನಾರು ಪೊಗಳದವರಿಳೆಯೊಳು."(೧/೨೦)

ದೇಪರಾಜ ಕವಿ ಸತಿ-ಪತಿಯರ ಸಂಭಾಷಣೆಯ ಹಾಗೆ ಕತೆಯನ್ನು ಹೇಳುವ ಕ್ರಮವಿದೆ. ಹಾಗೆಯೇ ಆಲಿಸುವವರೂ ಕಲಾವಿದರಂತೆ ಇದ್ದರೆ ಯಾರು ತಾನೆ ಇಂತಹ ಕಥೆಯನ್ನು ಆಲಿಸದೇ, ಓದದೇ, ಹೊಗಳದೇ ಇರಲು ಸಾಧ್ಯವಿಲ್ಲ ಎನ್ನುತ್ತಾನೆ. ಇಲ್ಲಿ ಕಥಾವಸ್ತುವಿಗಿಂತ ಕಥೆಯ ಅಭಿವ್ಯಕ್ತ ಕ್ರಮ ರಸವತ್ತಾಗಿರಬೇಕು. ಆಲಿಸುವವರೂ ಕಲಾವಿದರಾಗಿ ಮೆಚ್ಚುಗೆಯನ್ನು ವ್ಯಕ್ತಪಡಿಸಬೇಕು.

ಕವಿ ದೇಪರಾಜನಿಗೆ ಪತ್ನಿಯು ಕಾವ್ಯ ರಚನೆಗೆ ಸ್ಫೂರ್ತಿಯಾದ ಪ್ರಸಂಗ ಈ ಕೆಳಗಿನ ಪದ್ಯಗಳಿಂದ ತಿಳಿದುಬರುತ್ತದೆ. "ದೇಪನೃಪ ಮುನ್ನಜೆಯದ ಮಂಗಳವಪ್ಪೊಂದು ಕಥೆವೇಳ" (೧/೧೭) "ಕೇಳ್ವಕೋವಿದರಿಗೆ ಸೊಗಸೋಜೆವೊಲು ಸಕ್ಕಜ ಕನ್ನಡವೊಪ್ಪೆ ನೆಗೆ ಮೊಗದನೆ ಬಂದು ಕಥೆವೇಳ"(೧/೧೮)

"ನಲ್ಲನೆ ನಯನಾನಂದನೆ ಬಲ್ಲರ
ಬಲ್ಲಹನೆ ದೇಪ ನರನಾಥ
ಸೊಲ್ಲಿಸು ನಿನ್ನ ಜಾಣ್ನುಡಿ
ರನ್ನಗನ್ನಡಿಯಲ್ಲದೆ ನಾಡಾಡಿ ನುಡಿಯಲ್ಲ"(೨/೩)

ಎಂಬ ಮಾತುಗಳು ಕತೆಯ ವಿಸ್ತರಿಸಲು ಸ್ಫೂರ್ತಿಯಾಗಿವೆ. ಈ ಮೇಲಿನ ಅಂಶಗಳಿಂದ ಸೊಬಗಿನ ಸೋನೆಯ ಕತೆಗಳು ಸಂವಾದರೂಪದಲ್ಲಿರುವುದರಿಂದ ಓದುಗರಲ್ಲಿ ಕುತೂಹಲವನ್ನು

ಮೂಡಿಸುತ್ತವೆ. ಇದೇ ಪರಂಪರೆಯನ್ನು ನಂತರದಲ್ಲಿ ಬಂದ ಕನಕದಾಸರು ಮೋಹನ ತರಂಗಿಣಿಯಲ್ಲಿ ಅನುಸರಿಸಿದ್ದಾರೆ.

ಒಡಲಾಂತು ಹರಿಯ ಕೀರ್ತನೆಗೆಯ್ಯದ ಜಿಹ್ವೆ
ಕಡಲನಾಲಗೆಯಾಗದಿಹುದೆ
ಮಡದಿ ಕೇಳಿದಡೆಂದೆ ಕೃಷ್ಣ ಚರಿತ್ರವ
ತಡೆಯದೆ ನಿನಗೆ ವಿಸ್ತರಿಪೆ[೭] ಎಂದಿದ್ದಾರೆ.

ಸುಜ್ಞಾನವದೂಟಿಯಾದ ಪತ್ನಿ ಕನಕದಾಸರಿಗೆ ಇದ್ದಾಳೆ ಎಂದು ಭಾವಿಸುತ್ತಾ ಅವಳ ಸ್ಫೂರ್ತಿಯಿಂದ ಶೃಂಗಾರಪೂರ್ಣವಾದ ಕಾವ್ಯವನ್ನು ರಚಿಸಿದ್ದಾರೆ. ಮೋಹನ ತರಂಗಿಣಿ ಕಾವ್ಯಕ್ಕೆ ಸೊಬಗಿನ ಸೋನೆ ಎನ್ನುವ ಹೆಸರು ಅಳವಡುತ್ತದೆ ಎಂದು ಜಿ.ಜಿ. ಮಂಜುನಾಥನ್ ಅವರು ಅಭಿಪ್ರಾಯಪಟ್ಟಿದ್ದಾರೆ. ಮುದ್ದಣ್ಣ ಕವಿಯು ಕಾವ್ಯವನ್ನು ತನ್ನ ಪತ್ನಿಗೆ ಸಂಭಾಷಣಾ ಸ್ವರೂಪದಲ್ಲಿ ಹೇಳಿರುವುದನ್ನು ರಾಮಾಶ್ವಮೇಧದಲ್ಲಿ ಕಾಣಬಹುದು. ಕಾವ್ಯಕತೆಯನ್ನು ಜನಸಾಮಾನ್ಯರಿಗೆ ಮನಮುಟ್ಟುವಂತೆ ಹೇಳಬೇಕೆಂಬ ನೆಪದಲ್ಲಿ ಪತ್ನಿ ಸಹೃದಯರ ಸ್ಥಾನದಲ್ಲಿದ್ದು ಕತೆಯನ್ನು ಆಲಿಸುತ್ತಾಳೆ. ಈ ಮೇಲಿನ ಕಾವ್ಯಗಳಿಂದ ದೇಪರಾಜ ಕಾವ್ಯವನ್ನು ಪತ್ನಿಗೆ ಹೇಳುವ ಸಂಪ್ರದಾಯಕ್ಕೆ ಮೊದಲಿಗನಾಗಿರುತ್ತಾನೆ.

ಸೊಬಗಿನ ಸೋನೆಯ ಸಂಪಾದಕರಾದ ಬಿ.ಎಸ್. ಸಣ್ಣಯ್ಯ ಅವರು ಈ ಕಾವ್ಯದ ಪ್ರೇರಣೆ ಕುರಿತು "ಈ ಕಥೆಗಳು ಪೂರ್ಣವಾಗಿ ಒಂದಡೆ ಬೃಹತ್ಕೋಶದಲ್ಲಾಗಲಿ, ಕಥಾಸರಿತ್ಸಾಗರದಲ್ಲಾಗಲಿ, ದಶಕುಮಾರ ಚರಿತೆಯಲ್ಲಾಗಲಿ ದೊರೆಯುವುದು ತಿಳಿದುಬರುತ್ತಿಲ್ಲ. ಈ ಕಥೆಗಳ ಮೂಲಛಾಯೆ ಮಾತ್ರ ಅಲ್ಲಿ ಇಲ್ಲಿ ಇರುವುದನ್ನು ನೋಡಬಹುದು"[೮] ಎಂಬ ಅಭಿಪ್ರಾಯ ಪಟ್ಟಿದ್ದಾರೆ. ಈ ಹಿನ್ನೆಲೆಯಲ್ಲಿ ಕಥಾ ಸರಿತ್ಸಾಗರವು ಸಂಸ್ಕೃತ ಭಾಷೆಯ ದೊಡ್ಡದಾದ ಪದ್ಯ ಕಾವ್ಯ ಇಲ್ಲಿಯ ಕೆಲವು ಅಂಶಗಳು ಸೊಬಗಿನ ಸೋನೆ ಕಾವ್ಯಕ್ಕೆ ಪ್ರೇರಣೆಯಾಗಿರುವುದನ್ನು ಕಾಣಬಹುದು. ಕಥಾ ಸರಿತ್ಸಾಗರದ ಪ್ರತಿಲಂಬಕದ ಮೊದಲಲ್ಲಿ ಶಿವ, ಪಾರ್ವತಿ, ಗಣಪತಿ, ಸರಸ್ವತಿ, ಮನ್ಮಥ ಇವರಲ್ಲಿ ಒಬ್ಬೊಬ್ಬರ ಸ್ತೋತ್ರಗಳು ಇವೆ. ಈ ಅಂಶಗಳು ಸೊಬಗಿನ ಸೋನೆಯ ಪ್ರತಿ ಸಂಧಿಯ ಆರಂಭದ ಸ್ತುತಿ ಪದ್ಯಗಳಲ್ಲಿ ಶಿವನನ್ನು ವರ್ಣಿಸಲಾಗಿದೆ. ಉಳಿದಂತೆ ಪಾರ್ವತಿ, ಗಣಪತಿ, ಸರಸ್ವತಿಯರ ಸ್ತುತಿಯನ್ನು ಮಾಡಿದೆ. ಅಲ್ಲಿಯ ಕಥೆಗಳ ಅಭಿವ್ಯಕ್ತ ಕ್ರಮ ಶಿವಪಾರ್ವತಿಯ ಸಂವಾದದಂತೆ ಇವೆ. ಇದೇ ಕ್ರಮವನ್ನು ದೇಪರಾಜ ಅನುಸರಿಸಿದ್ದಾನೆ. ಪ್ರತಿಯೊಂದು ಕತೆಯೂ ಮತ್ತೊಂದು ಕತೆಗೆ ಸಂಬಂಧವಿರುವಂತೆ ರಚನೆ ಆಗಿವೆ. ಈ ಕ್ರಮ ಸೊಬಗಿನ ಸೋನೆಯಲ್ಲಿಯ ಏಳು ಕತೆಗಳೂ ಇದೇ ಕ್ರಮವನ್ನು ಒಳಗೊಂಡಿವೆ.

ಕಥಾ ಸರಿತ್ಸಾಗರದ "ರತ್ನ ಪ್ರಭಾಲಂಬಕದಲ್ಲಿ ಬರುವ ಗುಣವರೆ ರೂಪ ಶಿಖೆಯರ ಕಥೆಯಲ್ಲಿ ಗಂಡು ಸಂತಾನ ಪ್ರಾಪ್ತಿ ಪ್ರಸಂಗವು"[೯] ಸೊಬಗಿನ ಸೋನೆಯಲ್ಲಿ ಸುರಭಾವತಿ–ಜಯಶೇಖರನ ಕತೆಯಲ್ಲಿ ಪ್ರಮುಖವಾಗಿ ಮೂಡಿಬಂದಿದೆ. ಶಶಾಂಕವತೀ ಲಂಬಕದಲ್ಲಿ ಬರುವ ವಿಮಲಬುದ್ಧಿಯ ವೃತ್ತಾಂದಲ್ಲಿ "ಮೃಗಾಂಕನು ಇದೇ ಇರಬೇಕು ಅವನು ಹೇಳಿದ ನವಿಲು,

ಎಂದುಕೊಂಡು ಅದನ್ನಿಟ್ಟಿದ್ದ ಪಂಜರದ ಬಾಗಿಲು ತೆಗೆದನು. ಅದು ಹೊರಕ್ಕೆ ಬಂದು ಅವನನ್ನು ದೃಷ್ಟಿಸಿ ನೋಡಿ ಅವನ ಕಾಲ ಮೇಲೆ ಬಿದ್ದು ಹೊರಳಾಡಿತು. ಅದು ಹೊರಳುತ್ತಿದ್ದಾಗ ಅದರ ಕತ್ತಿನಲ್ಲಿ ಒಂದು ದಾರ ಕಟ್ಟಿದ್ದನ್ನು ನೋಡಿ ಅದು ಬಿಗಿಯುತ್ತಿರಬಹುದೆಂದು ಅದನ್ನು ಬಿಚ್ಚಿ ಹಾಕಿದನು"[೧೦] ಈ ಪ್ರಸಂಗವು ಸೊಬಗಿನ ಸೋನೆಯಲ್ಲಿ ವಿಕ್ರಮನಿಗೆ ಬೇಡರು ಕಾಣ್ಕೆಯಾಗಿ ನಾಗರಿಕ ಪಕ್ಷಿಯನ್ನು ಕೊಡುತ್ತಾರೆ. ನಾಗರಿಕ ಪಕ್ಷಿಯು ವಿಕ್ರಮ ರಾಜನಿಗೆ ಸಹಾಯ ಮಾಡು ಎಂದು ಹೇಳುವುದು.

ಉಡಿದಪವೆಱಕೆ ಕಾಲ್ಗಳ ಸಂದು ನೊಂದು ಜು
ಮ್ಮಿಡುತಿವೆ ಕೇಳುಸುರ್ಗುಬ್ಬಸ
ಅಡಸುತಲಿದೆ ಕಟ್ಟನು ಬಿಟ್ಟು ಕಾಯಿಯ
ನ್ನೊಡೆಯ ವಿಕ್ರಮಯೆಂದುದಾ ಪಕ್ಕಿ (೧೪/೨೧)

ನಾಗರಿಕ ಪಕ್ಷಿಯು ವಿಕ್ರಮರಾಜನೇ ನನ್ನ ರೆಕ್ಕೆಗಳು, ಕಾಲ್ಗಳು ನೊಂದು ಉಬ್ಬಸ ಪಡುತ್ತಿದ್ದೇನೆ. ಕಟ್ಟಿದ ದಾರದಿಂದ ಬಿಡಿಸಿ ರಕ್ಷಿಸು ಎಂದು ವಿನಂತಿಸುವ ಪ್ರಸಂಗವು ಸೊಬಗಿನ ಸೋನೆ ಕಾವ್ಯದ ನಿರೂಪಣಾ ಕ್ರಮದಲ್ಲಿ ಹೋಲಿಕೆಯಿದೆ. ಆದರೆ ಕಥಾವಸ್ತು ಬೇರೆಯಾಗಿದೆ. ಮುಂದೆ ಶಶಾಂಕವತೀ ಲಂಬಕದಲ್ಲಿ ಬರುವ ಗುಣಾಕರನ ವೃತ್ತಾಂತದಲ್ಲಿ "ದೇವ! ನಾಗಶಾಪದಿಂದ ನಾವು ಬೇರೆಯಾದ ಮೇಲೆ ಅಲ್ಲಿ ಇಲ್ಲಿ ಸುತ್ತುತ್ತಾ ವಿಂಧ್ಯವಾಸಿನೀ ಕ್ಷೇತ್ರಕ್ಕೆ ಬಂದೆ. ಅಲ್ಲಿ ಹಗಲೂ ರಾತ್ರಿಯೂ ನಾನಾ ಪ್ರಾಣಿಗಳು ಬಲಿಯಾಗಿ ಆ ಸ್ಥಳವು ಯಮನ ಮನೆಯಂತಿತ್ತು. ಅಲ್ಲಿ ನಿನ್ನನ್ನಗಲಿದ ದುಃಖವನ್ನು ನಾನು ಸಹಿಸಲಾರದೆ ದೇವಿಗಾದರೂ ಬಲಿಯಾಗುತ್ತೇನೆಂದು ಕತ್ತಿಯನ್ನು ತೆಗೆದುಕೊಂಡೆ. ಆಗ ಒಬ್ಬ ವೃದ್ಧ ತಾಪಸಿಯು ಬಂದು ಅದೇಕೆಂದು ಕೇಳಿದಳು. ನಾನು ನನ್ನ ವೃತ್ತಾಂತವನ್ನು ತಿಳಿಸಿದೆನು[೧೧] ಎಂಬ ವಿಷಯವು ಸೊಬಗಿನ ಸೋನೆ ಕಾವ್ಯದ ವಸಂತೆಯ ವೃತ್ತಾಂತದಲ್ಲಿ ಮಹಾಕಾಳಿಯನ್ನು ತೃಪ್ತಿಪಡಿಸುವುದಕ್ಕಾಗಿ ನಾನಾ ಪ್ರಾಣಿಗಳು ಬಲಿಯಾಗುತ್ತಿರುವ ದೃಶ್ಯಕ್ಕೆ ಸಾದೃಶ್ಯವಾಗಿದೆ.

ಬರೆಬರೆ ಕಂಡ ವಿಕ್ರಮ ಬೇವುತಿಹ ಹೆಣ
ನುರಿಯಿಂದ ಬಗುಳ್ವ ಬಳ್ಳುಗಳಿಂದ
ಮರುಳ ಪೆಕ್ಕಣದಿ ಪಲ್ಮೊರೆವ ಭೂತಗಳಿಂದ ಭೀ
ಕರವಾಗಿರ್ದದೊಂದು ಮಸಣಗಾಡು (೯/೧೬)

ಬಳಿಕ ಕೇಳಬಲೆ ಸೂತ್ರದ ಗುಂಡ ಚಿಮ್ಮಿಸೆ
ತಲೆ ಸಿಡಿದಾಲಿತಾಗಸದಲ್ಲಿ
ಲಲಿತೆ ಮೃಗರದೆಡೆಯಲ್ಲಿ ಮರನಾದಳು
ಪುಳುಕಿಸಿ ಕಂಪಿಸಿದಳು ಕಾಳಿ (೯/೫೭)

ಮಹಾಕಾಳಿ ದೇವತೆಯಿದ್ದ ಅರಣ್ಯವು ಶ್ಮಶಾನ ಭೀಕರವಾಗಿತ್ತು. ದೇವಿಯ ಕೃಪೆಯಿಂದ ವಸಂತೆಯ ಆಸೆಯನ್ನು ಪೂರೈಸುವುದಕ್ಕಾಗಿ ವಿಕ್ರಮಕುಮಾರ ದೇವಿಯ ಎದುರಿನಲ್ಲೆ ಆತ್ಮಾಹುತಿ ಯಾಗುತ್ತಾನೆ. ಮಹಾಕಾಳಿಯು ಲೆಕ್ಕವಿಲ್ಲದ ಪ್ರಾಣಿ ಪಕ್ಷಿಗಳನ್ನು ಬಲಿತೆಗೆದುಕೊಂಡು

ಸಂತೃಪ್ತಳಾಗಿರುತ್ತಾಳೆ. ಲಲಿತೆಯು ಮಹಾಕಾಳಿ ದೇವಾಲಯದಲ್ಲಿ ವಿಕ್ರಮ ಮತ್ತು ಮಧುರ ಕುಮಾರರ ಶಿರಗಳು ರುಂಡದಿಂದ ಬೇರೆಯಾಗಿರುವುದನ್ನು ಕಂಡು ಬೆಚ್ಚಿ ಬೀಳುತ್ತಾಳೆ. ಇಂಥ ಭಯಾನಕ ದೃಶ್ಯಗಳು ಕಥಾ ಸರಿತ್ಸಾಗರದಿಂದ ಪ್ರೇರಣೆಯಾಗಿ ಚಿತ್ರಣವಾಗಿರುವುದು ಕಂಡುಬರುತ್ತದೆ.

ದಂಡಿಯ ದಶಕುಮಾರ ಚರಿತೆಯ ಮಿತ್ರಗುಪ್ತನ ವೃತ್ತಾಂತದಲ್ಲಿ ಬರುವ ನಿತಂಬವತಿಯ ಕಥೆಯು ಸೊಬಗಿನ ಸೋನೆಯ ಬರಗೆಯ ಪಾತ್ರಕ್ಕೆ ಹೋಲಿಕೆ ಇರುವುದನ್ನು ಕಾಣಬಹುದು.

"ಕಿಂ ಕ್ರೂರಂ ಸ್ತ್ರೀಹ್ರದಯಂ ಕಿಂ ಗೃಹಿಣಿ ಪ್ರಿಯಹಿತಾಯ ದಾರಗುಣಾಃ ಕಃಕಾಮಃ ಸಂಕಲ್ಪಃ ಕಿಂ ದುಷ್ಕರಸಾಧನಂ ಪ್ರಜ್ಞಾ"[೧೨] "ಈ ಸೂಕ್ತಿಯ ತತ್ವವು ಕವಿ ಬರಗೆಯ ಮೂಲಕ ಚಿತ್ರಿಸಿರುವಂತಿದೆ. ಅಲ್ಲಿಯ ನಿತಂಬವತಿ ಇಲ್ಲಿ ಬರಗೆಯಾಗಿದ್ದಾಳೆ. ಜೈನ ಸಂನ್ಯಾಸಿನಿಯ ಕುತಂತ್ರದಿಂದ ನಿತಂಬವತಿಯು ಗಂಡನಿಂದ ಬೇರ್ಪಟ್ಟು ಪಾಲಕಂಟಕನ ವಶವಾಗುತ್ತಾಳೆ. ಇದಕ್ಕೆ ಆಕೆಯ ಕಾಲಂದುಗೆ ಸಾಧನವಾಗುತ್ತದೆ. ಅಂತೆಯೇ ಬರಗೆಯು ತನ್ನ ಗಂಡನನ್ನು ಕೊಲ್ಲಿಸಿ ತಾನು ಮಾದಲನನ್ನು ಕೂಡಲು ನಾಗರಹಕ್ಕಿ ನೆರವಾಗುತ್ತದೆ. ಅದಕ್ಕೆ ಪತ್ರಿಣಿಯ ಪದಕ ಕಾರಣವಾಗುತ್ತದೆ. ಅಲ್ಲಿಯ ಜೈನ ಪರಿವ್ರಾಜಕೆಯ ಸ್ಥಾನದಲ್ಲಿ ಇಲ್ಲಿ ನಾಗರ ಹಕ್ಕಿ ಇದೆ. ಕಾಲಂದುಗೆಗೆ ಬದಲಾಗಿ ಪದಕವಿದೆ"[೧೩] ಎಂದು ಬಿ.ಎಸ್. ಸಣ್ಣಯ್ಯನವರು ಪ್ರೇರಣೆ ಕುರಿತು ಹೇಳಿರುವುದು ಒಪ್ಪತ್ತಕ್ಕದ್ದಾಗಿದೆ. ಆದರೆ ಅಲ್ಲಿಯ ನಿತಂಬವತಿ ಇಲ್ಲಿಯ ಬರಗೆ ಇವರಿಬ್ಬರ ಗುಣ ಸ್ವಭಾವಗಳು ವಿರುದ್ಧ ದಿಕ್ಕಿನಲ್ಲಿವೆ. ನಿತಂಬವತಿಯು ಕಲಹಕಂಟನ ಕಾಮಕ್ಕೆ ಬಲಿಯಾದರೆ, ಬರಗೆಯ ಕಾಮಕ್ಕೆ ಮಾದಲನು ಬಲಿಯಾಗಿದ್ದಾನೆ ಕವಿ ಸಮಕಾಲೀನ ಸಮಸ್ಯೆಗಳ ಅಭಿವ್ಯಕ್ತಿಗೆ ಬದಲಾವಣೆಯನ್ನು ಮಾಡಿಕೊಂಡಿರಬಹುದಾದ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ. ದಶಕುಮಾರ ಚರಿತೆಯಲ್ಲಿ ಕಲಹಕಂಟಕನೇ ದುಷ್ಟ ವ್ಯಕ್ತಿಯಾಗಿ, ಕುತಂತ್ರದ ಮೂಲಕ ನಿತಂಬವತಿಯನ್ನು ವಶಪಡಿಸಿಕೊಳ್ಳುವ ಚಿತ್ರಣವಿದೆ. ಸೊಬಗಿನ ಸೋನೆಯಲ್ಲಿ ಬರಗೆಯು ಚಾರಿತ್ರ್ಯಹೀನಳಾಗಿ, ಗಂಡನನ್ನು ಮೋಸದಿಂದ ಕೊಲ್ಲಿಸುವ ನೀಚತನವನ್ನು ವ್ಯಕ್ತಪಡಿಸುತ್ತಾಳೆ.

ಕಂಜರೆಯ ವೃತ್ತಾಂತದಲ್ಲಿ ಬರುವ ವಿಷಯಕ್ಕೆ ದಶಕುಮಾರ ಚರಿತೆಯಲ್ಲಿ "ಮಿತ್ರಗುಪ್ತನು ಕತ್ತೆತ್ತಿ ನೋಡಲು ಒಬ್ಬ ರಾಕ್ಷಸನು ಒಬ್ಬ ಹೆಂಗಸನ್ನು ಎತ್ತಿಕೊಂಡು ಹೋಗುತ್ತಿದ್ದುದು ಕಂಡಿತು. ಆಗ ಬ್ರಹ್ಮರಾಕ್ಷಸನು ಆಕಾಶಕ್ಕೆ ನೆಗೆದು ಆ ರಾಕ್ಷಸನನ್ನು ಹಿಡಿದುಕೊಂಡನು. ಹೆಂಗಸು ಆತನ ಕೈತಪ್ಪಿ ಕೆಳಗೆ ಬೀಳಲು, ಮಿತ್ರಗುಪ್ತನು ಅವಳನ್ನು ಆತುಕೊಂಡನು. ನೋಡಿದರೆ ಅವಳು ಕಂದುಕಾವತಿಯಾಗಿದ್ದಳು..."[೧೪] ಕಂದುಕಾವತಿಯು ಸೊಬಗಿನ ಸೋನೆಯ ಕಂಜರೆಗೆ ಹೋಲಿಕೆಯಾಗಿದ್ದಾಳೆ. ಬ್ರಹ್ಮ ರಾಕ್ಷಸನ ಸ್ಥಾನದಲ್ಲಿ ಸೊಬಗಿನ ಸೋನೆಯ ಮಾಳವನಿದ್ದಾನೆ. ಅಲ್ಲಿ ಬ್ರಹ್ಮ ರಾಕ್ಷಸನು ಆಕಾಶಕ್ಕೆ ನೆಗೆದು ರಾಕ್ಷಸನನ್ನು ಕೊಂದರೆ ಇಲ್ಲಿ ಮಾಳವನು ನೆಲದಲ್ಲಿ ಓಡಿಹೋಗಿ ಹೋರಾಡುತ್ತಾನೆ. ಇದನ್ನು ಕಂಡ ವಿಕ್ರಮನು ಬಾಣಬಿಟ್ಟು ರಾಕ್ಷಸನನ್ನು ಕೊಲ್ಲುತ್ತಾನೆ. ಅಲ್ಲಿ ಕಂದುಕಾವತಿಯು ಆಕಾಶದಿಂದ ನೆಲಕ್ಕೆ ಬೀಳುತ್ತಾಳೆ. ಇಲ್ಲಿ ಕಂಜರೆಯು ಆಕಾಶದಿಂದ ಬೀಳುತ್ತಿರುವುದನ್ನು ಕಂಡ ವಿಕ್ರಮನು ಅನಿಲಶರವನ್ನು ಬಿಟ್ಟು ಆಕೆಯನ್ನು ಮೆಲ್ಲಗೆ ನೆಲಕ್ಕಿಳುಹುತ್ತಾನೆ. ಹೀಗೆ ದೇಪರಾಜ ಕವಿಯು ಅಲ್ಪಸ್ವಲ್ಪ ವಿಷಯಗಳಿಂದ ಪ್ರೇರಿತನಾಗಿದ್ದು, ಉಳಿದಂತೆ ಸ್ವಕಲ್ಪಿತ

ವಿಷಯವಾಗಿರಬಹುದು. ಈ ಕುರಿತಾಗಿ ಸಂಸ್ಕೃತ ಸಾಹಿತ್ಯದ ಕಥೆಗಳನ್ನು ತೌಲನಿಕವಾಗಿ ಅಧ್ಯಯನ ಕೈಗೊಂಡಾಗ ಖಚಿತವಾದ ನಿರ್ಧಾರಕ್ಕೆ ಬರಬೇಕಾಗುತ್ತದೆ.

ಸಂಸ್ಕೃತ ಕವಿ ಬಾಣನನ್ನು ದೇಪರಾಜ ಕವಿ ಸ್ಮರಿಸಿದ್ದು, ಕಾದಂಬರಿಯ ಪ್ರಾರಂಭದಲ್ಲಿ ಬರುವ ಶೂದ್ರಕ ರಾಜನ ಪ್ರಸಂಗವು ಸೊಬಗಿನ ಸೋನೆಯ ಜಯಶೇಖರ ರಾಜನಿಗೆ ಹೋಲಿಕೆ ಇರುವುದು ಕಂಡುಬರುತ್ತದೆ. ಕಾದಂಬರಿಯಲ್ಲಿ ಶೂದ್ರಕ ರಾಜ ಸಕಲ ಕಲಾವಲ್ಲಭನಾಗಿದ್ದರೂ ಮಕ್ಕಳಿಲ್ಲದೇ ಪರಿತಪಿಸುವ ವಿಷಯ ಜಯಶೇಖರ ರಾಜನೂ ಸುಖಸಂಪತ್ತನಿಂದ ಕೂಡಿದ್ದು ಯಾವುದೇ ಕೊರತೆಯಿಲ್ಲದೆ ಆಳ್ವಿಕೆ ನಡೆಸುತ್ತಿರುತ್ತಾನೆ. ಪತ್ನಿ ಸುರಭಾವತಿ ತಮ್ಮ ಬಾಳಿಗೆ ಮಕ್ಕಳಿಲ್ಲ ಎಂದು ಮುನಿಸಿಕೊಂಡಾಗ ಗಿಳಿಯ ಸಲಹೆಯಂತೆ ರಾಜ ರಾಣಿಯ ಪುತ್ರಾಭಿಲಾಷೆಯನ್ನು ತಿಳಿದು ಅವಳ ಬಯಕೆಯನ್ನು ಪೂರೈಸಲು ಮುಂದಾಗುವ ಪ್ರಸಂಗದ ಸಾಮ್ಯತೆ ಇದೆ. ನಂತರ ಚಂಡಾಲ ಕನ್ನಿಕೆಯು ತನ್ನ ಕೈಯೊಳಗೆ ಒಂದು ಗಿಳಿಯ ಪಂಜರವನ್ನು ಹಿಡಿದುಕೊಂಡು ಆ ಗಿಳಿಯನ್ನು ಅರಸನಿಗೆ ಕಾಣಿಕೆಯಾಗಿ ನೀಡುವ ಪ್ರಸಂಗವು ಸೊಬಗಿನ ಸೋನೆಯಲ್ಲಿ ವಿಕ್ರಮರಾಜನಿಗೆ ಬೇಡರು ನಾಗರಿಕ ಪಕ್ಷಿಯನ್ನು ಕಾಣಿಕೆಯಾಗಿ ಅರ್ಪಿಸುವ ಪ್ರಸಂಗಕ್ಕೆ ಪ್ರೇರಣೆಯಾಗಿರಬೇಕೆನ್ನಿಸುತ್ತದೆ. ಕಾದಂಬರಿಯಲ್ಲಿ ನಿರೂಪಿತಗೊಂಡಿರುವ ಗಿಳಿ, ಜಾಬಾಲಿ, ಮಹಾಶ್ವೇತೆಯ ಚಿತ್ರಣದ ಪ್ರಭಾವವು ಸೊಬಗಿನ ಸೋನೆಯ ನಾಗರಿಕ ಪಕ್ಷಿ, ತಂದೆ ನಾಗರಿಕ ಪಕ್ಷಿ, ಪತ್ರಿಣಿಯ ವರ್ಣನಾ ಅಂಶಗಳಲ್ಲಿ ಕಾಣಬಹುದಾಗಿದೆ. ದೇಪರಾಜ ಪ್ರತಿಭಾನ್ವಿತ ಕವಿಯಾಗಿರುವುದರಿಂದ, ಸಮಕಾಲೀನ ಸಮಾಜದ ಚಿತ್ರಣ ಬಿಂಬಿಸುವಾಗ ವಸ್ತು ಮತ್ತು ಪಾತ್ರಗಳ ರಚನೆಯಲ್ಲಿ ಸ್ವಂತಿಕೆಯಿಂದ ಕಾವ್ಯ ರಚಿಸಿದ್ದಾನೆ ಎನಿಸುತ್ತದೆ.

ವಾಲ್ಮೀಕಿ ಮತ್ತು ಕಾಳಿದಾಸರಂತಹ ಮಹಾಕವಿಗಳ ಸಾಹಿತ್ಯದಿಂದ ಪ್ರೇರಿತನಾಗಿ ದೇಪರಾಜ ತನ್ನ ಕಾವ್ಯದ ಆರಂಭದಲ್ಲಿ ಸ್ಮರಿಸಿದ್ದಾನೆ. ಇದರಿಂದ ಕನ್ನಡ ಕವಿಗಳಿಗೆ ಸಂಸ್ಕೃತ ಕವಿಗಳೇ ಮಾದರಿಯಾಗಿರುವುದು ಕಂಡುಬರುತ್ತದೆ. ಕಾಳಿದಾಸನ ಶಾಕುಂತಲ ನಾಟಕದಲ್ಲಿ ಆದರ್ಶ ಸ್ತ್ರೀಯರ ಚಿತ್ರಣವಿದೆ. ಸೊಬಗಿನ ಸೋನೆ ಕಾವ್ಯದಲ್ಲಿ ಆದರ್ಶ ಸ್ತ್ರೀಯರಾದ ಸುರಭಾವತಿ, ಕಂಜರೆ, ವಸಂತೆ, ಪತ್ರಿಣಿಯರ ವರ್ಣನೆ ಪ್ರಮುಖವಾಗಿದೆ. ಸುರಭಾವತಿಯು ರಾಣಿಯಾಗಿದ್ದು ರಾಜನ ಆಡಳಿತದಲ್ಲಿ ಮುಂದಾಲೋಚನೆ ಉಳ್ಳ ಆದರ್ಶನಾರಿಯಾಗಿದ್ದಾಳೆ. ವಿಕ್ರಮರಾಜ ಕಂಜರೆಯನ್ನು ರಕ್ಷಿಸಿ ಅವಳ ಅಪೇಕ್ಷೆಯಂತೆ ಮದುವೆ ಮಾಡಿಸುತ್ತಾನೆ. ವಸಂತೆ ರಾಜಕುಮಾರಿಯಾಗಿದ್ದು ಮಹಾಕಾಳಿಯ ಕೃಪೆಯಿಂದ ಉತ್ತಮ ವರನನ್ನು ಪಡೆಯುತ್ತಾಳೆ. ಪತ್ರಿಣಿಯು ರಾಜಕುಮಾರಿ ದೈವಭಕ್ತನಾದ ಆದರ್ಶರಾಜಕುಮಾರನಾದ ವಿಕ್ರಮನನ್ನು ಪ್ರೀತಿಸುತ್ತಾಳೆ. ಈ ಎಲ್ಲಾ ಸ್ತ್ರೀಪಾತ್ರಗಳಲ್ಲಿ ಭಾರತೀಯ ಆದರ್ಶ ಗೃಹಿಣಿಯರ ಗುಣಗಳನ್ನು ಕಾಣಬಹುದು.

ವಿಜಯನಗರದ ಕವಯತ್ರಿ ಗಂಗಾದೇವಿಯ ಮಧುರಾವಿಜಯಂ ಅಥವಾ 'ವೀರಕಂಪರಾಯ ಚರಿತಂ' ಕಾವ್ಯವು ಸಂಸ್ಕೃತ ಭಾಷೆಯಲ್ಲಿದೆ. ಇದರ ಕಾಲ ಸುಮಾರು ಕ್ರಿ.ಶ. ೧೩೭೧. ಈ ಕಾವ್ಯದ ಆರಂಭದಲ್ಲಿ ಗಣಪತಿ, ಪಾರ್ವತಿ ಪರಮೇಶ್ವರ, ಸರಸ್ವತಿಯ ಸ್ತುತಿ ಇದೆ. ಗಂಗಾದೇವಿಯು

ಗುರುಸ್ತುತಿಯಲ್ಲಿ ವಾಲ್ಮೀಕಿ, ವ್ಯಾಸ, ಕಾಳಿದಾಸ, ಬಾಣ, ಭಾರವಿ, ದಂಡಿ, ಭವಭೂತಿ, ತಿಕ್ಕಯ್ಯ, ಅಗಸ್ತ್ಯ, ಗಂಗಾಧರ ಮತ್ತು ವಿಶ್ವನಾಥ ಇವರನ್ನು ಸ್ಮರಿಸಿದ್ದಾಳೆ.

> "ಕಾವ್ಯರಸಧಾರೆಯನು ಮೊದಲೆಳೆಗೆ ಕರೆದವನು
> ದಿವ್ಯ ಮುನಿ ಆದಿಕವಿ ವಾಲ್ಮೀಕಿಯು"[೧೫]
> "ದಾಸತಾಂ ಕಾಳಿದಾಸಸ್ಯ ಕವಯ: ಕೇನ ಬಿಭ್ರತಿ
> ಇದಾನೀಮಪಿ ತಸ್ಯಾರ್ಥಾನುಪ ಜೀವಂತ್ಯಮೀಯತಃ[೧೬]

"ಕಾಳಿದಾಸನ ಅರ್ಥದಿಂದಲುಪಜೀವಿಸಿಹರೆಲ್ಲ ಕವಿಗಳು ಎಂದರೇನಚ್ಚರಿ? ಕವಿನಿಕರ ಕಾಳಿದಾಸಗೆ ದಾಸರೆಂಬುದನು ಮೀರಲಿಕ್ಕೆಡೆಯುಂಟೆ ಲೋಕದಲ್ಲಿ?"[೧೭]

ಈ ಪದ್ಯದಲ್ಲಿ ಉಕ್ತವಾಗಿರುವ 'ಕಾಳಿದಾಸನಿಗೆ ದಾಸ' ಎಂಬ ಭಾವ ಕವಿ ದೇಪರಾಜನಲ್ಲಿಯೂ ಬಂದಿರುವುದನ್ನು ಕಾಣಬಹುದು.

ದೇಪರಾಜ ಕವಿಯು ಕನ್ನಡ ಕವಿಗಳನ್ನು ಸ್ಮರಿಸದಿದ್ದರೂ ಕನ್ನಡದ ಲೀಲಾವತೀ, ಕುಸುಮಾವಳೀ ಕಾವ್ಯಗಳನ್ನು ಗಮನಿಸಿರಬಹುದೆನ್ನುಸುತ್ತದೆ. ಸುರಭಿಶೇಖರನ ಭಕ್ತಿಯ ಚಿತ್ರಣವು ಹರಿಹರ ಕವಿಯ ರಗಳೆಗಳ ಕಥೆಗಳನ್ನು ವರ್ಣಿಸುವ ರೀತಿಯಲ್ಲಿದೆ. ಅತಿಯಾದ ವರ್ಣನೆಗಳು, ಸ್ತ್ರೀ ಸೌಂದರ್ಯದ ಚಿತ್ರಣ, ಭಕ್ತಿಪ್ರಧಾನ ವಿವರಣೆ ಕುರಿತಂತೆ ಪ್ರೇರಣೆ ಸಹಜವಾಗಿ ಒದಗಿಬಂದಿರಬಹುದು. ಕಂಜರೆಯ ವೃತ್ತಾಂತದಲ್ಲಿ ಬರುವ "ರೋಷಭಾಸ್ಕರ ಮುನಿಯ ವನದ ಪ್ರಸಂಗದಲ್ಲಿ ರಾಘವಾಂಕನ ಹರಿಶ್ಚಂದ್ರ ಕಾವ್ಯದ ಪ್ರಭಾವವಿದೆ. ಆತ ತನ್ನ ತಲೆಗೂದಲನ್ನು (ಕಿರುಜಡೆ) ಕಿತ್ತುಬಿಟ್ಟಾಗ ಭಯಂಕರಾಕಾರ ನಿಂತು ಹಸಿವೆಗೆ ಆಹುತಿ ಕೇಳುವಲ್ಲಿ ವೀರಭದ್ರನ ಕಥೆಯ ಛಾಯೆಯೂ ಇದೆ. ನೀಚತನದಲ್ಲಿ ಅಲ್ಲದಿದ್ದರೂ ತನ್ನ ಮಾತು ಚಮತ್ಕಾರಗಳಲ್ಲಿ ಇಲ್ಲಿನ ನಾಗರ ಪಕ್ಷಿ, ಕಾದಂಬರಿಗಳು ಗಿಳಿಯನ್ನು ನೆನಪಿಸುತ್ತದೆ"[೧೮] ಎಂದು ಹಂಪ ನಾಗರಾಜಯ್ಯ ತಿಳಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಹರಿಶ್ಚಂದ್ರ ಕಾವ್ಯ, ಕಾದಂಬರಿಯನ್ನು ಗಮನಿಸಲಾಗಿದೆ. ಆದರೆ ಪುರಾಣಗಳಿಂದ, ಭವಾವಳಿಗಳಿಂದ, ವೀರಶೈವ, ಜೈನ ಕವಿಗಳಿಂದ ಅಲ್ಪಸ್ವಲ್ಪ ಪ್ರೇರಣೆಯನ್ನು ಪಡೆದಿದ್ದಾನೆಯೇ ಹೊರತು ಪೂರ್ಣವಾಗಿ ಒಂದು ಕೃತಿಯ ಪ್ರೇರಣೆಯನ್ನು ಪಡೆದಿರುವುದಿಲ್ಲ. ಶಿವಶರಣರ ಭಕ್ತಿ ಪ್ರಧಾನವಾದ ಜೀವನವು ಪ್ರೇರಣೆ ಒದಗಿರುವುದರಿಂದ ವಿಕ್ರಮರಾಜನು ಧರ್ಮವೀರನಾಗಿ ಸೊಬಗಿನ ಸೋನೆಯಲ್ಲಿ ವರ್ಣಿತವಾಗಿದ್ದಾನೆ.

ಸೊಬಗಿನ ಸೋನೆಯಿಂದ ಪ್ರಭಾವಗೊಂಡ ಕಾವ್ಯಗಳನ್ನು ಈ ಮುಂದಿನಂತೆ ಚರ್ಚಿಸಲಾಗಿದೆ. ಪದ್ಮಕವಿಯು ಸು. ೧೫೨೮ರಲ್ಲಿ 'ವರ್ಧಮಾನಚರಿತಂ' ಎಂಬ ಸಾಂಗತ್ಯ ಕಾವ್ಯವನ್ನು ರಚಿಸಿದ್ದಾನೆ. ಮಹಾವೀರಚರಿತೆಯನ್ನು ಸಾಂಗತ್ಯದಲ್ಲಿ ರಚಿಸಿದವರಲ್ಲಿ ಅಗ್ರಗಣ್ಯನಾಗಿದ್ದಾನೆ. ಈ ಕಾವ್ಯದ ಸಂಪಾದಕರಾದ ಬಿ.ಎಸ್. ಸಣ್ಣಯ್ಯ ಅವರು "ಪದ್ಮಕವಿಯು ತನ್ನ ಸಾಂಗತ್ಯ ಕೃತಿಯ ರಚನೆಗೆ ಮೊದಲು ಈತನಿಗಿಂತ ಹಿಂದಿದ್ದ ಸು. ೧೪೧೦ರಲ್ಲಿದ್ದ ದೇಪರಾಜನ ಸೊಬಗಿನ ಸೋನೆಯನ್ನು ನೋಡಿ ಅದರಿಂದ ಪ್ರೇರೇಪಿತನಾಗಿರಬಹುದು. ಸೊಬಗಿನ ಸೋನೆಯಲ್ಲಿ ಬರುವ ರಾಣಿ ಸುರಭಿವತಿಯ ಮಕ್ಕಳ ಹಂಬಲದ ವರ್ಣನೆಗೆ ಆತನ ಮನಸೋತಿದೆ ಅದನ್ನು ತನ್ನ ಕೃತಿಯಲ್ಲಿಯೂ

ಅಳವಡಿಸಬೇಕೆಂಬ ಇಚ್ಛೆ ಕವಿಗೆ ಆಗಿದ್ದಿರಬಹುದು. ಅಲ್ಲಿನ ವರ್ಣನೆಗಳಿಗೂ ಇಲ್ಲಿನ ಚಿತ್ರಣಕ್ಕೂ ಬಹುಮಟ್ಟಿನ ಹೋಲಿಕೆಯನ್ನು ಗುರುತಿಸಬಹುದಾಗಿದೆ"[೧೯] ಎನ್ನುತ್ತಾರೆ.

ಸೊಬಗಿನ ಸೋನೆ ಕಾವ್ಯದ ವಸ್ತು, ಮತ ಧರ್ಮಕ್ಕಿಂತ ಭಿನ್ನವಾಗಿದ್ದರೂ ಶೈಲಿ, ವರ್ಣನೆಗೆ ಸಾಮ್ಯತೆ ಇರುವ ಪದ್ಯಗಳಿವೆ.

| **ಸೊಬಗಿನ ಸೋನೆ** | **ವರ್ಧಮಾನ ಚರಿತೆ** |
|---|---|
| ಈಯದ ಕೈ ನನೆಯೇಱದ ಎಳೆವಳ್ಳಿ<br>ಕಾಯದ ಮರ ಬೆಳೆಯದ ನೆಲ<br>ಪ್ರಾಯದೊಳೆಳೆ ಬರೂಗೆಯದ ಪಾಳ್ದೊಡೆ<br>ರಾಯ ಕೇಳಿಳೆಯೊಳಗೆಸವುದೆ ೨/೨೮. | ಬಾಲನ ಪೊಱದ ಬಸುಱು ಕಾದಲನ ನೋಡ<br>ದಾಲಿ ಕುಲವನು ಪೆಚ್ಚಿಸದ<br>ಶೀಲ ಸಂಗೀತವ ಕೇಳದ ಕಿವಿಗಳು<br>ಬಾಲೆಗೆ ವ್ಯರ್ಥಮದಲ್ತೆ ೩/೨೩ |

ಗಂಡುಮಕ್ಕಳಿಗೆ ಜನ್ಮ ನೀಡದ ಸ್ತ್ರೀಯ ಬಾಳು ವ್ಯರ್ಥ ಎಂಬಲ್ಲಿ ಸಾಮ್ಯತೆ ಇದೆ.

| | |
|---|---|
| ತೋರದ ಮೊಲೆಯನೊರಸುತ ಕೊನೆವಾ<br>ಲ್ಗರದಿಟ್ಟಿಗೆ ಮೇಲುದ ಸಾರ್ಚಿ<br>ಪರಸಿ ತೂಪಿಱೆದೆತ್ತಿ ಕಂದಗೆ ಮೊಲೆಯಿವ<br>ಸಿರಿ ಮುನ್ನ ನೋನದವಳ್ಗುಂಟೆ ೨/೨೯ | ಮೊಲೆಯ ತುದಿಗೆ ವದನವ ನೀಡಲಱಿಯದೆ<br>ತಲೆಯನಲುಗಿ ಕಂಠಸರದ<br>ನೆಲೆಯ ನೀಲಕೆ ಚಾಚಿ ಯಳುವಕಂದನಕಂಡು<br>ನಲುನಗೆಯೆಂದು ಪುಟ್ಟುವುದೊ ೩/೨೫. |
| ಸಿಱಿವಿಡಿದಬ್ಬಬ್ಬ ಮುತ್ತೆಂಬ ಮುದ್ದೆಂಬ<br>ಮಱಿಗೊಂಡುದಾಯೆಂಬ ಮೊಳೆವಲ್ಲು<br>ಮಿಱುಗಿ ನಗುವ ಲಲ್ಲೆಗೆಯಿವ ಮಕ್ಕಳಮುದ್ದು<br>ನೆಱಿ ಮುನ್ನ ನೋನದವಳ್ಗುಂಟೆ ೨/೩೦. | ಅಬ್ಬಬ್ಬ ಯೆನ್ನತ ಬಪ್ಪ ಕುಮಾರನ<br>ತಬ್ಬಿ ತೋಳುಯ್ಯಲೆಯಿಂದ<br>ಪರ್ಬಿಯಾಡಿಸುವಿನಿಯನೊಳೀಯಕ್ಷಿಗೆ<br>ಹಬ್ಬವಿನ್ನೆಂದಾದಪುದೊ ೩/೩೦. |

ಸ್ತ್ರೀಯು ಗಂಡುಮಗುನಿನ ಹಾರೈಕೆಯಲ್ಲಿ ಸಂಭ್ರಮಪಡುತ್ತಾಳೆ.

| | |
|---|---|
| ರಮಣನೆ ದೇಪಭೂವರರಾಜೇಂದ್ರ ಚಂ<br>ದ್ರಮ ನಿನ್ನ ಚದುರ ಮೆಲ್ನುಡಿಗಳು<br>ಹಿಮಗದಿರನ ಲಾಲಿಪ ಜಾಣರ ಹೃ<br>ತ್ಕುಮುದವನ ವನಲಱಿಚುತಿದೆ ೯/೨. | ರಸಿಕರ ತಲೆವಣಿಯಲರುವಿಲ್ಲನ ಪೊಚ್ಚ<br>ಪೊಸಬೆಡಗೆನೆ ಮುಂಗಥೆಯ<br>ಉಸುರಿನಿಯನೆ ನೇಹದೆಱಕವಬಲ್ಲನೆ<br>ಪಸಿವು ತೊಲಗಲು ಕರ್ಣಗಳ ೬/೨ |
| ಕೋವಿದ ಕುಟಿಲ ಕುಂತಳೆಯನ್ನರ್ದೆಯಂಚೆ<br>ದಾವರೆಮೊಗ್ಗೆ ಮೊಲೆಯಳೆ<br>ಮಾವನ ಮಗಳೆ ಮನೋಹರೆ ಮದನ ಸಂ<br>ಜೀವಳೆ ಕೇಳು ಮೇಲ್ಗಥೆಯನು (೯/೩) | ಇಟ್ಟೆಡೆ ಮೊಲೆಯ ಬೆಡಗಿ ನಿಡಿದಾ ದೋಳು<br>ದಿಟ್ಟಿಯ ನೀಱ ಕಪ್ಪಾದ<br>ಬಟ್ಟದುಱಿಬಿನೆಳೆವೆಣ್ಣೆಹರನ ನಾಡ<br>ಕಟ್ಟೊಡತಿಯೆ ಕಥೆಗೇಳ (೬/೩) |
| ನಲ್ಲನೆ ನಯನಾನಂದನೆ ಬಲ್ಲರ<br>ಬಲ್ಲಹನೆ ದೇಪನರನಾಥ<br>ಸೊಲ್ಲಿಸು ನಿನ್ನ ಜಾಣ್ನುಡಿ ಕನ್ನಗನ್ನಡಿ<br>ಯಲ್ಲದ ನಾಡಾಡಿ ನುಡಿಯಲ್ಲ (೨/೩) | ನಲ್ಲನೆ ನಗೆ ನುಡಿಗಾಱನೆ ಪೆಣ್ಣಲ<br>ರ್ವಿಲ್ಲನೆ ನುಡಿ ಬಸಂತದೊಳು<br>ಪಲ್ಲವಿಸುತೆ ನನೆಕೂನೆಯಾಯ್ತು ಚಿತ್ತ ಸಂ<br>ಫಲ್ಲವಲ್ಲರಿ ಬಗೆಗಾಱ (೯/೨) |

ಪಿಡಿನಡುವಿನ ನಲ್ಲಳೆ ಬಿಟ್ಟಮೊಲೆಯಳೆ
ಕುಡಿತಗಣ್ಣಳ ಕೊಂಕುಗುರುಳಳೆ
ನಿಡುಮುಡಿಯಳೆ ಅಂಚೆಯಡಿಯಳೆ ಕೈದಳ
ಪೊಡೆಯಸಿಯಳೆ ಮೆಲ್ಗಥೆಗೇಳ (೧೮/೩.)

ನಿಡು ಮುಡಿಯಳೆ ನಿಡುಗಣ್ಗಳ ಕೋಮಲೆ
ಬಡುನಡು ಬಿಡಬಾಸೆಯವಳೆ
ಕಡು ಬಟ್ಟದೊಡೆಯಳೆಬಟ್ಟಬಲ್ಮೊಲೆಯಳೆ
ಕುಡಿವುರ್ವಿನವಳೆ ಕೇಳ್ ಕಥೆಯ (೯/೩.)

ಕಾವ್ಯದ ಆನಂದವು ಪ್ರಿಯಕರನ ಪ್ರೇಮದಂತೆ ಇದೆ ಎಂಬಲ್ಲಿ ಸಾಮ್ಯತೆ ಇದೆ.

ಈ ಮೇಲಿನ ಪದ್ಯಗಳನ್ನು ಗಮನಿಸಿದರೆ ಪದ್ಮಕವಿಯು ಹೃದಯಕ್ಕೆ ರಸಾನಂದವನ್ನು ನೀಡವಂತೆ ಸೊಬಗಿನ ಸೋನೆಯ ಪದ್ಯಗಳಿಗೆ ಆಕರ್ಷಿತನಾಗಿರುವುದು ಕಂಡುಬರುತ್ತದೆ. ಸತಿ-ಪತಿಯರ ಸಂಭಾಷಣೆಯ ರೀತಿಯಲ್ಲಿ ಕವಿ ಮತ್ತು ಸಹೃದಯರ ಸಂಭಾಷಣಾಕ್ರಮವು ಚಿತ್ರಣಗೊಂಡಿದೆ. ಈ ಹಿನ್ನೆಲೆಯಲ್ಲಿ ಸೊಬಗಿನ ಸೋನೆ ಕಾವ್ಯ ಹಲವು ದೃಷ್ಟಿಯಿಂದ ಮಹತ್ವದ ಕೃತಿಯಾಗಿ ಕಂಡುಬರುತ್ತದೆ. ಕಥೆಯನ್ನು ವಿಶೇಷವಾಗಿ ಹಾಡುಗಬ್ಬವಾಗಿ ಆಲಿಸಿ ಆಸ್ವಾದಿಸುವ ಪರಿಪಾಟವಿರಬೇಕೆನ್ನಿಸುತ್ತದೆ. ಏಕೆಂದರೆ ಕವಿ ಪತ್ನಿ ಕತೆಯನ್ನು ಆಲಿಸಿ ಮೆಚ್ಚುಗೆ ವ್ಯಕ್ತಪಡಿಸುವ ಪರಿಯು ಪೀಠಿಕಾ ಪದ್ಯಗಳಲ್ಲದೆ ಹಾಗಾಗಿ ಇದೊಂದು ಹಾಡುಗಬ್ಬವೆಂದು ಖಚಿತವಾಗುತ್ತದೆ.

ದೇಪರಾಜನ ಸೊಬಗಿನ ಸೋನೆಯನ್ನು ಅನುಸರಿಸಿ ಹೊಸದಾದ ಛಂದಸ್ಸು ಮೂಡಿಬಂದಿದೆ. ಅದು 'ಸೊಬಗಿನ ಸೋನೆ ವರ್ಣ', ಸೊಬಗಿನ ಸೋನೆ ಮಟ್ಟ ಎಂಬುದಾಗಿ ನಂತರ ಬಂದ ಹಲವು ಕವಿಗಳಿಗೆ ಪ್ರಭಾವವನ್ನು ಬೀರಿದೆ.

ವೀರಜನಪತಿ ಕವಿಯು 'ವಿಕ್ರಮ ವಿಲಾಸ' ಎಂಬ ಕಾವ್ಯವನ್ನು ಸಾಂಗತ್ಯದಲ್ಲಿ ರಚಿಸಿದ್ದಾನೆ. ಕವಿಚರಿತೆಕಾರರು ಈತನ ಕಾಲವನ್ನು ಕ್ರಿ.ಶ. ೧೬೫೦ ಎಂದು ಗುರುತಿಸಿದ್ದಾರೆ. ಸೊಬಗಿನ ಸೋನೆಯ ಕೆಲವೊಂದು ಅಂಶಗಳು ವಿಕ್ರಮವಿಲಾಸ ಕಾವ್ಯಕ್ಕೆ ತಾಳೆಯಾಗುತ್ತವೆ.

ಕವಿ ಕಾಳಿದಾಸ ಮಯೂರನುದ್ಭಟ ಬಾಣ
ಕವಿ ಮಲುಹಣ ಭವಭೂತಿ
ಭುವನದೊಳಿನ್ನುಳ್ಳ ಶಿವಕವಿಗಳನೋಂತು
ವಿವರಿಪೆ ನಾನೀ ಕೃತಿಯ[೨೦] ಎಂದು ವೀರಜನಪತಿ ಕಾವ್ಯ ರಚಿಸಿದರೆ ಇಲ್ಲಿ ದೇಪರಾಜ ಸಂಸ್ಕೃತ ಕವಿಗಳನ್ನು ಸೊಬಗಿನ ಸೋನೆಯಲ್ಲಿ ಸ್ಮರಿಸಿದ ಹಾಗೆ ವೀರಜನಪತಿಯು ಕಾಳಿದಾಸ, ಬಾಣ ಮುಂತಾದ ಕವಿಗಳನ್ನು ಹೆಸರಿಸಿದ್ದಾನೆ.

**ಸೊಬಗಿನ ಸೋನೆ**

ಪುರಗಿರಿ ಋತು ನಂದನ ರವಿ ಶಶಿಸಾಗ
ರ ರತಿ ಮಧು ಮಂತ್ರನೃಪರೇಳ್ಗೆ
ಧುರ ಚರ ಜಲಕೇಳಿ ಸುತ ಕಲ್ಯಾಣ
ವಿರಹ ಕಾವ್ಯಕೆ ಪದಿನೆಂಟಂಗ ೧/೨೩.

**ವಿಕ್ರಮವಿಲಾಸ ಕಾವ್ಯ**

ಗಿರಿಪುರ ಋತು ರವಿ ಶಿಶಿವನಜಲಕೇಳಿ
ಪರಿಣಯ ಮಧು ಸಿಂಧು ಸಮರ
ಚರಯನರತಿ ಮಂತ್ರ ಸುತ ನೃಪಕಾಮಿನಿ
ವಿರಹವಂಗಗಳು ಸತ್ಕೃತಿಗೆ ೧/೨೦

ಕಾವ್ಯಕ್ಕೆ ಅಷ್ಟಾದಶವರ್ಣನೆಗಳು ಪ್ರಮುಖವೆಂಬಂತೆ ಇವೆ.

ನರದೇಹವಿದಕಾಲಸ್ಯ ಹಸಿವು ನಿದ್ರೆ
ವೆರಸಿಹುದುದು ಕಾರಣದಿಂದ
ವಿರಚಿಪ ಕಬ್ಬದೊಳಗ ಕಂದು ಕಸರಿಕೆ
ಯಿರೆ ತಿದ್ದಿ ಮಱವುದು ಸುಜನರು ೧/೮

ನರದೇಹಮಿದರೊಳೆಚ್ಚರಿಕೆ ಮರವೆ ಮೋಸ
ವೆರಸಿಹುದುದು ಕಾರಣದಿ
ಕರುಣದಿ ಮತಿಯಿತ್ತು ರಕ್ಷಿಸು ಬೆಳಗೋ
ಡರಸ ಶ್ರೀ ವೀರಭದ್ರೇಶ ೧/೨೨

ಕವಿ ಓದುಗರಲ್ಲಿ ವಿನಯವಂತಿಕೆಯನ್ನು ಬಯಸುತ್ತಾನೆ.

ತುಱುಚೆಗಂಡಂಜಿ ಸೋಂಕದೆತೊಲಗುವವೊಲು
ಹೆಱಸಾರುವರುಂಟೆ ಮರುಗಕ್ಕೆ
ಅಱಿವ ಸುಜಾಣ ರಸಿಕರಂತಿರಲಿನಾ
ನೆಱಗುವೆ ಮುನ್ನ ಖೂಳರಿಗಂಜಿ ೧/೧೧

ದಿವದಲ್ಲಿ ದಿಟ್ಟಿಗಾಣದೆ ಗೂಗೆ ನಿಶಿಯೊಳು
ದಿವಸಪತಿಯ ಪಳಿವಂತೆ
ವಿವರಗಾಣದೆ ಕುಂದನೆಣಿಸಿ ನಿಂದಿಪ ದು
ಷ್ಕವಿಗಳಿಗಂಜಿ ವಂದಿಸುವೆ ೧/೧೧

ಕುಕವಿಗಳಿಂದ ಎಚ್ಚರಿಕೆಯಿಂದಿರಲು ಕವಿ ಸೂಚಿಸುತ್ತಾನೆ.

ಯುವತಿಯ ಕಳೆಯನಱಿದು ಜಾಣವಿಟನನು
ಭವಿಪೊಲಱಿವನೆ ನರಪಶು
ಕವಿತೆಯ ರಸವನಂತಱಿವ ರಸಿಕನಲ್ಲ
ದವಗುಣಿಯಱಿದು ಸುಖಿಸುವನೆ ೧/೧೨

ನಾಡಿಭೇದವನರಿವುದು ವೈದ್ಯಗಲ್ಲದೆ
ನಾಡೊಳಜ್ಞರಿಗೆ ತಿಳಿವುದೆ
ಮೂಢಗೆ ಕಾವ್ಯದ ಸಾರವೆಂತರಿವುದು
ನೋಡಿ ಪ್ರವುಡರು ತಿದ್ದುವುದು ೧/೧೬

ಸಹೃದಯರು ಕಾವ್ಯವನ್ನು ಅರ್ಥಪೂರ್ಣಗೊಳಿಸುತ್ತಾರೆ.

ಮೊತ್ತದ ನಾಯಿಗಳವ್ವಳಿಸೆ ಘರ್ಜಿಸಿ ಪಂದಿ
ಯೆತ್ತ ಝುಲ್ಲನೆ ಕೆದರ್ದೊಡಗೂಡಿ
ಮುಕ್ತಿ ಮಿಂಚುಗಳೊಳ್ ಮುಗಿಲ್
ಸಿಂಗವಱಿಗಳೊಳ್
ಮತ್ತೇಭ ಚಲವಾಡುವೊಲಾಯ್ತು ೧೧/೬೭

ಎಲ್ಲೆಲ್ಲಿ ಬೇಡರ ಬಿಲ್ಲುಲಿ ನಾಯ್ಗಳ
ಗಳ್ಳಿನಬ್ಬರ ಮೃಗ ಬೀಳ್ವ
ತಲ್ಲಣದಳಲು ರುಧಿರ ಚಲ್ಲದಿಹ ಠಾ
ವಿಲ್ಲವೆನಿಸಿತು ಕಾನನದಿ ೪/೭೯

ಬೇಟೆಯ ವರ್ಣನೆಯಲ್ಲಿ ಸಾಮ್ಯತೆ ಇದೆ.

ಕಳಮಕ್ಕೆ ಕವಿವ ಗಿಳಿವಿಂಡ ಸೋವಾಡು
ವೆಳೆವೆಂಗಳೆಸದರಬಲೆ ಕೇಳ
ಬಲವಿಂದಲವ ಝುಂಕಿಸಿ ತಮ್ಮ ಮೆಲ್ಲುಲಿ
ಗಲಿಪಂತೆ ಶಾಳಿವನಗಳೊಳು ೧/೩೭

ಕಳಮಕೆ ಕವಿವೆಳೆಗಿಳಿವಿಂಡ ಹೊಡೆವ ಹೆಂ
ಗಳ ಸವಿನುಡಿಗಳ ಕೇಳಿ
ಉಲಿದ ಕೋಗಿಲೆಗಳು ತಲೆದೋರದೆ ಮೌನ
ಗೊಳುತಿರ್ದವು ಕೋಟರದಿ ೨/೮೨

ಗಿಳಿಗಳ ವರ್ಣನೆ ಪ್ರಧಾನವಾಗಿದೆ.

ಕಱವುದು ಸುಖವ ಕಂಗೊಳಿಪುದು ನೋಳ್ಪರ
ಮೆಱವ ನಾಡೊಳಂಗನೆ ಕೇಳ
ತೊಱೆ ಕಾಲ್ಗೊಡದಿಹವಿಲ್ಲ ಕಾಲ್ಪೊಗದಿಹ
ಕೆಱೆಯಿಲ್ಲ ಕೆಱೆಯಿಲ್ಲದೂರಿಲ್ಲ ೧/೨೮

ಪರಿವ ಪೆರ್ದೊರೆ ಗಡ್ಡಗಟ್ಟೆಯ ಬಂಧಿಸಿ
ತಿರುಹಿತರುವ ಕಾಲುವೆಗಳು
ಕೆರೆ ಭಾವಿ ತಂಗೊಳನು ಪವನವಿಲ್ಲದ
ಬರಿನೆಲನಾ ನಾಡೊಳಿಲ್ಲ ೨/೭೨

ನಾಡಿನಲ್ಲಿ ಊರುಗಳ ವರ್ಣನೆ ಪ್ರಮುಖವಾಗಿದೆ.

ಕಾಡೆಕ್ಕಲ ಪಲ್ಮೊರೆದೆತ್ತಿ
ಈಡಾಡಿ ಬಿಲ್ಕೋಲ್ಗಳ ಪೆರ್ಬಂದಿಯ
ಕೋಡ ಪಿಡಿದೆತ್ತಿ ಕುಕ್ಕರಿಸಿದ ೧೨/೧೫
ಬಿರಿದುದು ಸೊಕ್ಕಿದೆಕ್ಕಲನೊಡಲ್ಬಿಂಬಾ
ಧರೆ ಕೇಳು ೧೨/೧೬

ಸೊಕ್ಕಿದೆಕ್ಕಲನೊಂದು ದಾಡೆಯ ಜಡಿವುತ
ಹೊಕ್ಕಿತು ಬೇಡರ ಮೇಲೆ
ಕುಕ್ಕರಿಸಿದುದೆದೆ ಬಿರಿಯೆ ಕಾಳಜ ಕರು
ಳೊಕ್ಕವು ನೆಲದೆಡೆಯಲ್ಲಿ ೪/೪೭

'ಹಂದಿ' ಬೇಟೆಯ ವರ್ಣನೆಯಲ್ಲಿ ಸಾಮ್ಯತೆ ಇದೆ.

ಸೊಬಗಿನ ಸೋನೆಯಲ್ಲಿ ಕಾಶ್ಮೀರದ ಅರಸ ಸೌಂದರನು ಬೇಟೆಯಾಡುತ್ತಾ ಅರಣ್ಯದಲ್ಲಿ ರೋಷಭಾಸ್ಕರ ಮುನಿ ಆಶ್ರಮ ಪ್ರವೇಶಿಸಿ ಶಾಪಪಡೆದ ಪ್ರಸಂಗಕ್ಕೆ ಹೋಲುವ ವಿಷಯ 'ವಿಕ್ರಮ ವಿಲಾಸ' ಕಾವ್ಯದಲ್ಲಿದೆ. "ಚಂದ್ರಗುಪ್ತ ಒಂದು ದಿನ ತನ್ನ ಒಡ್ಡೋಲಗದಲ್ಲಿ ಕುಳಿತಿರುವಾಗ ಒಬ್ಬ ಬೇಡರ ಒಡೆಯನು ಬಂದು ರಾಜನಿಗೆ 'ಆನೆಯ ತಲೆಯ ಮುತ್ತುಗಳನ್ನು ಕಾಣಿಕೆಯಿತ್ತು ದೇವ, ಕಾಡಿನ ಕ್ರೂರ ಮೃಗಗಳು ಊರೊಳಗೆ ನುಗ್ಗಿ ರೈತರ ಬೆಳೆಗಳನ್ನೆಲ್ಲಾ ನಾಶ ಮಾಡುತ್ತಿವೆ. ಅಲ್ಲಿಗೆ ತಾವು ದಯಮಾಡಿಸಿ ಅವುಗಳ ಉಪಟಳವನ್ನು ನಿವಾರಿಸಿ ನಮ್ಮನ್ನೆಲ್ಲಾ ಕಾಪಾಡಬೇಕು' ಎಂದು ಪ್ರಾರ್ಥಿಸಿಕೊಂಡನು. ಅದರಂತೆ ಮರುದಿನ ರಾಜನು ಸಕಲ ಸಿದ್ಧತೆಗಳಿಂದ ಬೇಟೆಗೆ ಹೊರಟು ಕಾಡನ್ನು ಸೇರಿ ಕಾಡು ಮೃಗಗಳನ್ನು ಕೊಂದು ಅವುಗಳ ಹಾವಳಿಯನ್ನು ಅಡಗಿಸಿದನು. ಅರಮನೆಗೆ ಹಿಂತಿರುಗುತ್ತಿರುವಾಗ ರಾಜನು ಶಾಂತಕ ಮುನಿಯ ಆಶ್ರಮವನ್ನು ಪ್ರವೇಶಿಸಿ ಮುನಿಯನ್ನು ನಾನಾ ವಿಧವಾಗಿ ಸ್ತುತಿಸಿ ಪುತ್ರಸಂತಾನ ಕರುಣಿಸು ಎಂದು ಪ್ರಾರ್ಥಿಸಿಕೊಂಡನು."[೨೦]

ಚಂದ್ರಗುಪ್ತರಾಜ ಶಾಂತಕ ಮುನಿಯಿಂದ ಪುತ್ರ ಸಂತಾನ ಕರುಣಿಸು ಎಂದು ಪ್ರಾರ್ಥಿಸಿಕೊಂಡರೆ ಸೌಂದರರಾಜನ ಸೈನ್ಯದ ಆಳುಗಳು ರೋಷಭಾಸ್ಕರ ಮುನಿಯ ಆಶ್ರಮದಲ್ಲಿಯ ಗಿಡಮರಗಳನ್ನು ನಾಶಗೊಳಿಸಿ ಮುನಿ ಶಿಷ್ಯರನ್ನು ದಂಡಿಸಿದ ಪರಿಣಾಮವಾಗಿ ಶಾಪವನ್ನು ಪಡೆದು ಅರಮನೆಗೆ ಹಿಂತಿರುಗುತ್ತಾರೆ. ಈ ವಿಷಯವು ಭಿನ್ನವಾಗಿದೆ. ನಂತರ ಮಹಾಕಾಳಿಯ ವರ್ಣನೆ ಶ್ಮಶಾನದ ವರ್ಣನೆ, ಪಾರ್ವತಿಯು ಜೀವದ ಬೊಂಬೆಗಳಾಗಿ ಮಾತು ಬಾರದಂತೆ ಈ ಸಿಂಹ ಪೀಠದಲ್ಲಿ ನಿಲ್ಲಿರಿ ಎಂದು ಶಾಪವೀಯುವ ಪ್ರಸಂಗವು ಸೊಬಗಿನ ಸೋನೆಯ ಮಹಾಕಾಳಿ, ವನದವರ್ಣನೆ, ಸುರಭಿಶೇಖರನಿಗೆ ಶಾಪವೀಯುವ ವಿಷಯಕ್ಕೆ ಹೊಂದಾಣಿಕೆಯಾಗುವುದನ್ನು ಕಾಣಬಹುದು. ಬತ್ತೀಸ ಪುತ್ತಳಿಯ[೨೨] ಕಥೆಗಳ ಶೈಲಿಯು ಇಲ್ಲಿಯ ಕತೆಗಳಿಗೆ ಪ್ರಭಾವವಿರುವುದನ್ನು ಗುರುತಿಸಿದೆ.

ಲಕ್ಷ್ಮಯ್ಯ ಕವಿಯು ಮದನಮೋನಿಯ ಕಥೆಯನ್ನು ರಚಿಸಿದ್ದಾನೆ. ಇದರ ಕಾಲ ಸುಮಾರು ೧೬೫೦. ಸೊಬಗಿನ ಸೋನೆಯ ಛಂದಸ್ಸನ್ನೇ ಅನುಸರಿಸಿ ಬರೆದ ಕಾವ್ಯವಾಗಿದೆ. ಮದನಮೋಹಿನಿಯ ಕಥೆಯನ್ನು ಸಂಪಾದಿಸಿದ ಬಿ.ಎಸ್. ಸಣ್ಣಯ್ಯ ಅವರು "ಒಂದು ಹಸ್ತಪ್ರತಿಯ ಆದಿಯಲ್ಲಿಯೆ ಮದನ ಮೋಹಿನಿಯ ಚರಿತೆ, ಸೊಬಗಿನ ಸೋನೆವರ್ಣ ಓದುವುದಕ್ಕೆ ಶುಭಮಸ್ತು"[೨೩] ಎಂದಿದೆ ಎಂಬುದಾಗಿ ಬಿ.ಎಸ್. ಸಣ್ಣಯ್ಯ ಅವರು ಅಭಿಪ್ರಾಯಪಟ್ಟಿದ್ದಾರೆ. ದೇಪರಾಜನೇ ಸರ್ವವಿಘ್ನಗಣಗಳುಳ್ಳ ಛಂದೋಲಯಗಳನ್ನು ನಾಲ್ಕು ಸಾಲುಗಳಲ್ಲಿ ಬಳಸಿದ್ದಾನೆ. ಈತನ ನಂತರ ಬಂದ ಕವಿಗಳು ಈ ಪರಂಪರೆಯನ್ನು ಅನುಸರಿಸಿ ಬರೆದವರಲ್ಲಿ ಲಕ್ಷ್ಮಯ್ಯ ಕವಿಯೂ ಒಬ್ಬ.

ಕಾವ್ಯಾರಂಭದಲ್ಲಿ ಶಿವನನ್ನು ಕುರಿತ ಸ್ತುತಿಪದ್ಯವು ಹೋಲಿಕೆಯಿರುವುದು.

| **ಸೊಬಗಿನ ಸೋನೆ** | **ಮದನ ಮೋಹಿನಿಯ ಕಥೆ** |
|---|---|
| ಕಂಜಜ ಕಂಜಾಕ್ಷನತ ಮಂಜುಳಪಾದ | ಕಂಜಸಂಭವ ಕಪಾಲವ ಪಿಡಿದನೆ |
| ಕಂಜ ಕುಂಜರ ದೈತ್ಯ ಭಂಜನ | ಕಂಜವೈರಿಯ ಸೂಡಿದಭವನೆ |
| ನಂಜುಭಾಜನ ಕುಂಜಬಾಂಧವ ರಾಜಧ | ಕಂಜ ವೈರಿಯ ಪಗೆವನ ಕರ್ಣಕುಂಡಲ |
| ನಂಜಯಾಂಬಕ ತ್ರಿಯಂಬಕ ಜಯ (೧/೩) | ನಂಜುಂಡಲಿಂಗಗೆ ಶರಣೆಂಬೆ (೧/೯) |

ಇವರಿಬ್ಬರಲ್ಲಿ ಶಿವನ ಸ್ತುತಿ ಸಾಮ್ಯತೆ ಇದೆ. ನಂತರ ಪೂರ್ವಕವಿ ಸ್ಮರಣೆಯಲ್ಲಿ ದೇಪರಾಜನಿಗೆ ಸರಿಹೊಂದುವ ಕವಿಗಳನ್ನು ಲಕ್ಷ್ಮಯ್ಯ ಕವಿ ಅನುಸರಿಸಿದ್ದಾನೆ. ಅದು

ವ್ಯಾಸ ವಾಲ್ಮೀಕಿ, ಹರೀಶ ಬಾಣನು ಕಾಳಿ
ದಾಸ ಮಯೂರನು ಮಲುಹಣ
ಈಶಭಕ್ತನು ರಾಘವಾಂಕನ ಬಲಗೊಂಡು
ಲೇಸಾಗಿ ಪೇಳ್ವೆನೀ ಕೃತಿಯನು (ಮ.ಮೊ. ೧/೧೩) ಎಂಬ ಸ್ತುತಿ ಇದೆ. ಆದರೆ

ಸಂಸ್ಕೃತದ ವಾಲ್ಮೀಕಿ, ಬಾಣ, ಕಾಳಿದಾಸ ಕವಿಗಳನ್ನು ಸ್ಮರಿಸಿದ್ದಾನೆ. ಆದರೆ ಕನ್ನಡ ಕವಿಗಳಲ್ಲಿ ಮಲುಹಣ, ರಾಘವಾಂಕರನ್ನು ಮಾತ್ರ ಸ್ಮರಿಸಿದ್ದಾನೆ. ದೇಪರಾಜನನ್ನು ಸ್ಮರಿಸಿಲ್ಲ. ಆದರೂ ಸಹಿತ ಸೊಬಗಿನ ಸೋನೆಯ ಪ್ರಭಾವವು ಈ ಕೃತಿಯ ಮೇಲಾಗಿರುವುದನ್ನು ಖಚಿತಪಡಿಸುವ ಅಂಶಗಳು ಇನ್ನು ಕೆಲವು ಪದ್ಯಗಳಲ್ಲಿ ಕಾಣಬಹುದು.

| **ಸೊಬಗಿನ ಸೋನೆ** | **ಮದನ ಮೋಹಿನಿಯ ಕಥೆ** |
|---|---|
| ನರದೇಹವಿದ ಕಾಲಸ್ಯಹಸಿವು ನಿದ್ರೆ | ಜಡಮತಿಯಹ ಎನ್ನಯ ಕೃತಿಯೊಳು ತಪ್ಪ |
| ವೆರಸಿಹುದದು ಕಾರಣದಿಂದ | ಹಿಡಿಯದೆ ಕೇಳ್ವ ರಸಿಕರೆಲ್ಲ |
| ವಿರಚಿಪ ಕಬ್ಬದೊಳಗೆ ಕಂದು ಕಸರಿಕೆ | ಬಿಡದೆ ಲಾಲಿಪುದು ಮಕ್ಕಳ ತೊದಲ್ನುಡಿಗಳು |
| ಯಿರೆ ತಿದ್ದಿಮೆಱವುದು ಸುಜನರು (೧/೮) | ಪಡೆದ ಜನನಿಗೆ ಮುದ್ದಾದಂತೆ (೧/೧೫) |

ಕವಿಯು ತನ್ನ ದೋಷಗಳನ್ನು ಸಹೃದಯದಲ್ಲಿ ವಿನಯದಿಂದ ಹೇಳಿಕೊಂಡಿದ್ದಾನೆ.

ಕಾವ್ಯದಲ್ಲಿ ಕವಿಗೆ ತಿಳಿಯದೇ ನುಸುಳಿಬಂದ ದೋಷಗಳ ಕುರಿತು ಸಹೃದಯರಲ್ಲಿ ವಿನಂತಿ ಮಾಡುವ ಪರಿ ಇಬ್ಬರಲ್ಲೂ ಸಾಮ್ಯತೆಯಿದೆ. ಮನುಷ್ಯರಾದ ಕವಿಗಳು ಆಲಸ್ಯ ಹಸಿವು ಜಡತ್ವದಿಂದಾಗಿ ತಪ್ಪುಗಳು ಸಹಜವಾಗಿರುತ್ತವೆ. ಅವುಗಳನ್ನೆ ಸರಿಪಡಿಸಿಕೊಂಡು ಕಾವ್ಯದ ರಸಾನಂದಕ್ಕೆ ಭಂಗ ಬರದಹಾಗೆ ಆಸ್ವಾದಿಸಲು ಕೇಳಿಕೊಂಡಿರುತ್ತಾರೆ.

ಕವಿಗಳು ತಮ್ಮ ಕಾವ್ಯದ ಬಗೆಗೆ ಮೆಚ್ಚುಗೆಯನ್ನು ವ್ಯಕ್ತಪಡಿಸುವ ಪರಿ ಇಬ್ಬರಲ್ಲೂ ತಾಳೆಯಾಗುತ್ತದೆ.

ಚಂದನದಂಪು ತಾವರೆಗೊಳ ಪೂವಲ್ಲಿ
ಕಂದನ ತೊದಲೊಂದಿದ ನುಡಿ
ಒಂದಿನಿಸಗಲಿ ಕೂಡುವ ನಲ್ಲಳ ಸ್ನೇಹ
ದಂದ ದೇಪುಗನ ಕಾವ್ಯದ ರಸ
(ಸೊ.ಸೋ ೧/೧೦)

ಸಕ್ಕರೆಯಂತೆ ಜೇನ್ಗೊಡದಂತೆ ಚಿಲಿಪಾಲು
ಸೊಕ್ಕುಜವ್ವನೆಯ ಸೊಬಗಿನಂತೆ
ಚಿಕ್ಕಪ್ರಾಯದ ಹೆಣ್ಣು ತೆಕ್ಕೆಯಗಲಿಕೂಡು
ವಕ್ಕುರಂತಿಹುದು ಈ ಕೃತಿಯೆಂದ
(ಮ.ಮೋ ೧/೧೭)

ಕಾವ್ಯದ ಆನಂದ ಹೇಗಿರುತ್ತದೆ ಎಂಬ ಬಗ್ಗೆ ಸಾಮ್ಯತೆ ಇದೆ.

ಕಾವ್ಯದ ರಸಾನುಭವ ಆಗುವ ಪರಿಯನ್ನು ಕವಿಯು ನೀಡುವ ದೃಷ್ಟಾಂತಗಳಲ್ಲಿ ಹೋಲಿಕೆಯಿರುವುನ್ನು ಕಾಣುತ್ತೇವೆ. ಪ್ರಿಯತಮೆ ಪ್ರಿಯಕರರ ದೇಹ ಮನಸ್ಸುಗಳ ತಾದ್ಯಾತ್ಮ ಹೊಂದಿದಾಗ ಆಗುವ ಅನುಭೂತಿಯ ಹಾಗೆ ಕಾವ್ಯ ಆನಂದವನ್ನು ನೀಡುತ್ತದೆ. ಇಲ್ಲಿ ಪ್ರೀತಿ, ಸ್ನೇಹ ಆನಂದದ ಕ್ಷಣಗಳನ್ನು ಹೇಳಲು ಸಾಧ್ಯವಿಲ್ಲ ಇವುಗಳನ್ನು ಅನುಭವಿಸಿಯೇ ತಿಳಿದಿರುವಂತಹ ಸ್ಥಿತಿ ಎಂಬುದನ್ನು ವ್ಯಕ್ತಪಡಿಸಿದೆ. ದೇಪರಾಜ ಕವಿ ಕಾವ್ಯಾನಂದದ ಪರಿಣಾಮವನ್ನು ಹೇಳುವ ಪ್ರಸಂಗದಿಂದ ಲಕ್ಷ್ಮಯ್ಯ ಕವಿ ಪ್ರಭಾವಕ್ಕೊಳಗಾಗಿದ್ದಾನೆನ್ನಬಹುದು.

ರಾಮನ ನನ್ನಿ ರಾವಣನಧಟಾಬಲ
ರಾಮನ ಬಲ ಸೋಮನ ಗುಣ
ಭೂಮಿಯ ಸಮತೆ ಕಾಮನ ರೂಪು ಹರಿಲೀಲೆ
ಯಾಮಹಿಪನ ಪೂರ್ದಿಮೆಜಿದವು (೧/೫೭)

ಕಾಮನ ರೂಪು ಭೀಮನ ಶಕ್ತಿ ಸಾಮರ್ಥ್ಯ
ಸೋಮನ ಶಾಂತಿ ರಾಮನ ಛಲ
ರಾಮಣೀಯಕವಾಗಿ ಧರೆಯ ಪಾಲಿಸುತಿಹ
ಭೂಮಿಪತಿಯ ನೇಮವನಾಂತು (೧/೩೬)

ಸೊಬಗಿನ ಸೋನೆಯಲ್ಲಿ ರಾಜ ಜಯಶೇಖರನ ಗುಣಸ್ವಭಾವ ಸಾಮರ್ಥ್ಯಗಳನ್ನು ಕುರಿತ ವರ್ಣನೆಯಲ್ಲಿ ಮನ್ಮಥನಂತೆ ರೂಪ, ರಾಮನಬಲ, ಸೋಮನಗುಣ, ಭೂಮಿಯ ಸಮತೆಯಂತೆ ಇರುವ ಉಪಮೆಗಳ ಮೂಲಕ ವರ್ಣಿಸಲಾಗಿದೆ. ಇದು ಮದನಮೋಹಿನಿ ಕಥೆಯಲ್ಲಿ ಮಾಳವದೇಶದ ಅರಸ ಚಂದ್ರಶೇಖರ ರಾಯನ ಮಗ ಜಯಸೇನನ ವರ್ಣನೆಯಲ್ಲಿ ಪ್ರೇರಣೆ ಪಡೆದಿರುವುದು ಕಂಡುಬರುತ್ತದೆ.

ಮದನ ಮೋಹಿನಿಯ ಸಂಪಾದಕರಾದ ಬಿ.ಎಸ್. ಸಣ್ಣಯ್ಯನವರು ಕಥಾವಸ್ತುವಿನ ಬಗ್ಗೆ ಪ್ರಸ್ತಾವನೆಯಲ್ಲಿ "ಮದನ ಮೋಹಿನಿಯ ಕಥೆಯ ಓಟ ಛಂದಸ್ಸು ಮೊದಲಾದವುಗಳನ್ನು ನೋಡಿದರೆ ಸೊಬಗಿನ ಸೋನೆಯನ್ನೇ ಅನುಸರಿಸಿರುವುದು ಸ್ಪಷ್ಟವಾಗುತ್ತದೆ. ಸೊಬಗಿನ ಸೋನೆಯಲ್ಲಿ ಏಳು ಕಥೆಗಳ ಸರಣಿ ಬಂದು ವಿಕ್ರಮ ಅಥವಾ ಜಸಗಂಪನೇ ಅದರ ಮೂಲವ್ಯಕ್ತಿಯಾಗಿರುವಂತೆ, ಇಲ್ಲಿ ಮೂರು ಕಥೆಗಳ ಓಟವಿದ್ದು ಜಯಸೇನನು ಈ ಕಥೆಗಳನ್ನು ಬೆಸೆಯುವವನಾಗಿದ್ದಾನೆ. ಅಲ್ಲಿ ರಕ್ಕಸನ ವಶಳಾಗಿದ್ದ ಕಂಜರೆಯನ್ನು ವಿಕ್ರಮ ಬಿಡಿಸಿದರೆ, ಇಲ್ಲಿ ರಕ್ಕಸನಿಗೆ ಸೆರೆ ಸಿಕ್ಕಿದ ಮದನ ಮೋಹಿನಿಯನ್ನು ಜಯಸೇನನು ಬಿಡಿಸುತ್ತಾನೆ. ಅಲ್ಲಿ ಬಿಡುಗಡೆ ಹೊಂದಿದ ಕಂಜರೆಯು ತನ್ನ ಕಥೆಯನ್ನು ತಾನೇ ಹೇಳಿಕೊಳ್ಳುವಂತೆ ಇಲ್ಲಿ ಮದನಮೋಹಿನಿಯು ತನ್ನ ವೃತ್ತಾಂತವನ್ನು ತಾನೇ ಹೊರಗೆಡಹುತ್ತಾಳೆ.

ಸೊಬಗಿನ ಸೋನೆಯಲ್ಲಿ ಮಕ್ಕಳಿಲ್ಲದ ರಾಣಿ ಸುರಭಿವತಿಯ ದುಃಖವನ್ನು ಹೋಗಲಾಡಿಸಲು ಜಯಶೇಖರರಾಯನು ಹರನನ್ನು ಕುರಿತು ತಪಸ್ಸನ್ನು ಮಾಡಿ ಮಗನನ್ನು ಪಡೆಯಲು ಹೊರಡುತ್ತಾನೆ.

ಹರಸಿ ಬೀಳ್ಕೊಟ್ಟಳಂಗನೆ ಮಂತ್ರಿ ವಿಜಯನ
ನಿರಿಸಿದನಾ ನಾಡುಗಾಪಿಗೆ
ಹರುಷ ಕೈಮಿಗೆ ಬಂದನು ಹರಗಿರಿಗೆ ಭೂ
ವರನಾಳುತ ಶುಭಶಕುನವ (ಸೊಸೋ ೨/೩೩) ಎಂಬುದಾಗಿ ಸೊಬಗಿನ ಸೋನೆಯಲ್ಲಿ ಬಂದರೆ ಮದನಮೋಹನಿ ಕಥೆಯಲ್ಲಿ ಮಾಳವ ದೇಶದರಸು ನರೇಂದ್ರನು 'ಪನ್ನಗಧರನ ಕುರಿತು ತಪವಿದ್ದು ತಾ ಚೆನ್ನಪ್ಪ ಸುತನ ತಹೆನು'

ಎಂದು ಬುದ್ಧಿಯ ಪೇಳಿ ಪಟ್ಟದ ರಾಣಿಗೆ
ಅಂದು ಬೀಳ್ಕೊಂಡೋಲಗವಿತ್ತು
ಛಂದದಿಂ ಮಂತ್ರಿಯ ಕರೆಸಿ ಪಟ್ಟವ ಕಟ್ಟಿ
ಅಂದೆಲ್ಲರಿಗೆ ಬುದ್ಧಿಯ ಪೇಳ್ದ। (ಮ.ಮೋ. ೭/೩೧)

ಬಂದನು ಪುರಜನ ಪರಿಜನವೆಲ್ಲವ
ಅಂದದಿಂದಲೆ ಬೀಳ್ಕೊಂಡವನಾಗ
ಇಂದ್ರಕೀಲಾದಿ ಪರ್ವತಕಾಗಿ ನಡೆತಂದ
ನಿಂದುಧರನೆ ಗತಿಯೆನುತಲಿ (ಮ.ಮೋ. ೭/೩೨)

ಎಂದು ಬರುತ್ತದೆ. ಸೊಬಗಿನ ಸೋನೆಯಲ್ಲಿ 'ಇಂದು ಶೇಖರನಗಜೆಯ ಮುಡಿಯೊಳಗಿಂದ ಮಂದಾರ ದರಳ ಕೊಟ್ಟ'ನಾದರೆ, ಇಲ್ಲಿ 'ತವೆ ದಯದಿಂದ ಕೆಂದಾವರೆ ಪೂವಿತ್ತು ದಿವಿಜ ವಂದಿತ ಬೀಳ್ಕೊಟ್ಟ. ಸೊಬಗಿನ ಸೋನೆಯಲ್ಲಿ ಸೌಂದರಾಜನು ರೋಷಭಾಸ್ಕರ ಮುನಿಯುಗ್ರಕೋಪಕ್ಕೆ ಪಕ್ಕಾಗಿ ಸಮಸ್ತವೂ ನಾಶವಾಗಿ ಕಂಜರೆಯೊಬ್ಬಳುಳಿದರೆ, ಇಲ್ಲಿ ಪರಾಶರ ಮುನಿ ಮತ್ತು ಕಾಮಧೇನುವಿನ ಕೋಪಕ್ಕೆ ತುತ್ತಾದ ಮಂದಾಕಿನೀ ನಗರವೇ ನಾಶವಾಗಿ ಮದನಮೋಹಿನಿ ಯೊಬ್ಬಳುಳಿಯುತ್ತಾಳೆ.

ಸೊಬಗಿನ ಸೋನೆಯಲ್ಲಿ ಕಥೆಯ ಮುಂದುವರಿಕೆಗೆ ಕವಿ ಮತ್ತು ಆತನ ನಲ್ಲೆಯ ಮಧ್ಯೆ ನಡೆಯುವ ಸರಸ ಸಂಭಾಷಣೆ ಇಲ್ಲಿಯೂ ಕಂಡುಬರುತ್ತದೆ. ಮದನಮೋಹಿನಿಯು ಸಾರಂಗಧರನ ಕಥೆಯನ್ನು ಹೇಳುವ ಮೊದಲು

ಅವಧರಿಸೆಲೆ ನೃಪ ಮುನ್ನೊಬ್ಬರಾಯನ
ಕುವರಗೆ ಬಂದ ಸಂಕಟವನು
ಕಿವಿಗಿಂಪಾದ ವಿಚಿತ್ರದ ಕಥೆಯನು
ಭುವನಾಧಿಪತಿಯೆ ಚಿತ್ತೈಸೆಂದ (ಮ.ಮೋ. ೭/೧೩) ಎಂದು ಪತ್ನಿಯು ಹೇಳಿದರೆ,

ಆತನು

ನಲ್ಲಳೆ ನಗೆಮೊಗದಳೆ ನಾರಿ ರತ್ನವೆ
ಬಲ್ಲಳೆ ಬಹು ನೀತಿಶಾಸ್ತ್ರವ

ಚೆಲ್ಲೆಗಂಗಳ ಹೆಣ್ಣೆ ಹೇಳೆಂದು ಮುದ್ದಿಸಿ
ಗಲ್ಲವ ಪಿಡಿದು ಮುಂಡಾಡಿದ (ಮ.ಮೋ. ೭/೧೪)

ಅದಕ್ಕೆ ಉತ್ತರವಾಗಿ ಆಕೆಯು

ವಿಸ್ತರಿಸುವೆನಾದಡೆ ಕೇಳು ನೃಪಮಣಿ
ಮಸ್ತಕಶೂಲ ಚಿತ್ತವಧಾನ
ಅಸ್ಥಿರವಾದ ದೇಹವ ಬಿಟ್ಟು ಪರರಿಗೆ
ಇತ್ತ ಪರಸುವ ಸಜ್ಜನರೆಲ್ಲ (ಮ.ಮೊ. ೭/೧೫) ಎಂದು ಹೇಳಿ ಕತೆಯನ್ನು ಪ್ರಾರಂಭಿಸುತ್ತಾಳೆ"[೨೪]

ಈ ಮೇಲಿನ ಪದ್ಯಗಳನ್ನು ಉದಾಹರಿಸುತ್ತ ಬಿ.ಎಸ್. ಸಣ್ಣಯ್ಯ ಅವರು ಸೊಬಗಿನ ಸೋನೆ ಕಾವ್ಯದ ಪ್ರಭಾವವು ಮದನಮೋಹಿನಿ ಕಥೆಯ ಕಾವ್ಯದಲ್ಲಾದ ಬಗ್ಗೆ ಸವಿಸ್ತಾರವಾಗಿ ವಿವರಿಸಿ ಖಚಿತಪಡಿಸಿದ್ದಾರೆ. ಲಕ್ಷ್ಮಯ್ಯ ಕವಿ ದೇಪರಾಜನ ವರ್ಣನೆ, ಶೈಲಿ, ಕಥಾವಸ್ತು, ಛಂದಸ್ಸು, ಅಲಂಕಾರಗಳಿಗೆ ಆಕರ್ಷಿತನಾಗಿ ಕಾವ್ಯ ರಚಿಸಿರಬಹುದು. ಮದನ ಮೋಹಿನಿಯ ಕಾವ್ಯವನ್ನು ಓದುತ್ತಾ ಹೋದಂತೆ ಸೊಬಗಿನ ಸೋನೆಯ ಮುಂದುವರಿದ ಕಥೆಯನ್ನು ಓದಿದಂತೆ ಭಾಸವಾಗುತ್ತದೆ.

ಶಾಂತಲಿಂಗ ದೇಶಿಕ ಕವಿಯ ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರರತ್ನಾಕರ ಕಾವ್ಯದಲ್ಲಿ ಸೊಬಗಿನ ಸೋನೆಯ ಎರಡು ಕತೆಗಳನ್ನು ಸಂಕ್ಷಿಪ್ತವಾಗಿ ಹೇಳಲಾಗಿದೆ. ಶಾಂತಲಿಂಗ ದೇಶಿಕ ಕವಿಯ ಕಾಲ ೧೬೭೨ ಇದೆ. ಇಲ್ಲಿ ಒಟ್ಟು ೫೧೮ ಕತೆಗಳಿವೆ. ಸೊಬಗಿನ ಸೋನೆಯ ಕಂಜರೆಯ ಕತೆಯಲ್ಲಿ ಬರುವ ರೋಷಭಾಸ್ಕರ ಮುನಿಯ ಕತೆ ಇಂತಿದೆ.

ಸೌಂದರ ತೋಹಿನೊಳ್
ನಿಂದಿರೆ ಹರಿಗಂಡು
ಪಿಂದಟ್ಟಿರೋಷಭಾಸ್ಕರನಾ
ನಂದನವಳಿದುದ
ಚೆಂದವ ಶಪಿಸಲು
ಹೊಂದಿದರವರಂತಿದಲ್ಲಾ

ಎಂಬುದಕ್ಕೆ ೨೪೦ನೇ ಕಥೆಯಲ್ಲಿ ಸೌಂದರ ತೋಹಿನೊಳ್ ರೋಷಭಾಸ್ಕರ ಶಪಿಸಲು ಹೊಂದಿದರವರಂತಿದಲ್ಲಾ ಎಂಬುದಕ್ಕೆ ಕಥೆ:

ಕಾಶ್ಮೀರ ದೇಶದೊಳೊಪ್ಪುವ ಅವಂತಿಪುರದಲ್ಲಿರ್ದ ಸೌಂದರರಾಯಂ ಸಿಂಹದ ಬೇಂಟೆಯಂ ಪೋಗಿ ಸಿಂಹಮಂ ಕೊಂದು ಮರಳಿ ಊರಿಗೆ ಬರಲಾತನ ಚತುರಂಗ ಬಲಂ ಅರಣ್ಯದೊಳು ರಾಜನ ಅಜಿಸುತ್ತಂಬರುವಲ್ಲಿ, ರೋಷಭಾಸ್ಕರ ಮುನಿಯ ವನದಲ್ಲಿ ಬೇಂಟೆಯನಾಡಿ ಪುಷ್ಪಫಲಗಳಂ ಊಟಿಯಂ ಮಾಡುವಾಗ, ಆ ಮುನಿಯ ಶಿಷ್ಯರು ಸಮದನುಕುಮಾರನೆಂಬುವರು 'ಬೇಡ' ವೆನಲವರಂ ಜೆಡೆಯಿಂದ ಪೆಡಗುಡಿಯಂ ಕಟ್ಟಿಹಾಯ್ಕಿ ರಾಜನ ಬಲವು ಊರಿಗೆ ಹೋಗಲು,

ಇತ್ತಲಾ ಮುನಿಗಳು ಬಿಡಿಸಿಕೊಂಡು ಬಂದು ಗುರುವಿಂಗೆ ಪೇಳಲಾತನುಗ್ರಕೋಪದಲ್ಲಿ ಜೆಡೆಯಂ ಕಿತ್ತು ನೆಲಕ್ಕಪಳಿಸಲಾಗ, ಜಡೆ ರಕ್ಕಸಿಯಾಗಿ ಪುಟ್ಟಿ ಬೆಸನಂ ಬೇಡಲು, ಸೌಂದರನ ಬಲವಂ ಆಹಾರವಂ ಕೊಳ್ಳು ಪೋಗೆನಲವಂತಿಪುರಕ್ಕೆ ಅದ್ಭುತರೂಪಾಗಿ ರಕ್ಕಸಿ ನಡದು ಬಂದು ಸೌಂದರನ ಬಲವೆ ಆಹಾರವಾಗಬೇಕೆಂದು ಕೂಗುತ್ತಿರಲು ಅವರು ಇದಿರಾಗಿ ಸಾವಿರಾನೆ, ಹತ್ತುಸಾವಿರ ಕುದುರೆ, ಕುಜಿಕೋಣನೆಂಬತ್ತು ಸಾವಿರ, ಲೆಕ್ಕವಿಲ್ಲದಷ್ಟು ಕೂಳು, ಬಂಡಿಯ ತುಂಬಿ ಕಳುಹಲಷ್ಟನೂ ನುಂಗಿ ಮುಂದಕ್ಕೆ ಬರುವಾಗ, ಸೌಂದರರಾಯನನಂತಬಲಗೂಡಿ ಕದನಕ್ಕೆ ಬರಲು, ನುಂಗಿತ್ತು. ಸೌಂದರನ ಮಗಂ ಖಚರನ ತಂಗಿಯಾದ ಕಂಜರೆಯಂ ಹೆಗಲನೇಜೆಸಿಕೊಂಡು ಖೇಚರದಲ್ಲಿ ಪೋಗುವಾಗ ಅಜೆಯದೆ ರೋಷಭಾಸ್ಕರ ಮುನಿಯ ಆಶ್ರಮದ ಮೇಲೆ ಬರಲು, ನೆಳಲುಬೀಳಲು ಕಂಡು, ಆ ಮುನಿಗಳು ಕರದಡೆ ಬಾರದಿರಲು, ಅವರು ಗುರುವಿಗೆ ಪೇಳೆ ಶಾಪವಂ ಕೊಟ್ಟರು. "ನಿನ್ನ ತಂಗಿಯ ನೆಲಕಿಳಿಸಿದಡೆ ನಿನ್ನ ತಲೆ ಸಹಸ್ರ ಹೋಳಾಗಲಿ" ಎಂದು ಶಪಿಸಲವನ ತಂಗಿ "ನಿಶ್ಯಾಪವೆಂದಿಗೆ'ನಲು, "ನೀನು ಜಸಗಂಪವಿಕ್ರಮನಲ್ಲಿ ಧನುರ್ವಿದ್ಯೆಯಂ ಕಲಿವ ಮಾಳವ ರಾಜನಂ ಮದುವೆಯಾದಡೆ ನಿಶ್ಯಾಪ"ವೆನಲು ಕೇಳಿಕೊಂಡು ಪೋಗುವಾಗ ಇತ್ತ ಬಾಗೂರನೆಂಬ ರಕ್ಕಸನು "ನಿನ್ನ ತಂಗಿಯ ಎನಗೆ ಕೊಡೆ"ನಲು "ಕ್ಷತ್ರಿಯರು ನಾವೇಕೆ ಕೊಟ್ಟೇವೆ"ನಲು, "ಕದನಕ್ಕೆ ಬಾರೆ"ಂದು ಕರೆಯಲು ಮರದ ಮೇಲೆ ತಂಗಿಯಂ ಕುಳ್ಳಿರಿಸಿ ರಕ್ಕಸನ ಕೂಡೆ ಕಾದುವಾಗಂ ರಕ್ಕಸಗಂಬು ತಾಗಿ ಕಂಜರೆಯಿದ್ದ ಮರದ ಮೇಲೆ ಬೀಳಲು ಮುಜಿದು ಕಂಜರೆ ನೆಲಕ್ಕೆ ಬೀಳುವಾಗಣ್ಣನಾದ ಖಚರನ ತಲೆ ಗಗನಕ್ಕೆ ಸಿಡಿದು ದುಃಖದಿಂದಿರಲು, ಇತ್ತ ರಕ್ಕಸಂ ಕಂಜರೆಯಂ ಕೊಂಡು ಪೋಗುವಾಗ, ಭೂಮಿಯಾಕಾಶಕ್ಕೆ ಮೊರೆಯಿಡುವಾಗ, ಜಯಶೇಖರರಾಯನ ಸತಿ ಸುರಭಾವತಿಯ ಮಗ ಜಸಗಂಪವಿಕ್ರಮಂ ಕೇಳಿ, ಮಧುರ ಮಾಳುವರಂ ಕಳುಹಿ ಬಿಡಿಸಲು, ಬಿಡದಿರಲು, ತಾ ಹೋಗಿ ಅವನಂ ಕೊಂದು ಕಂಜರೆಯಂ ಬಿಡಿಸಿ, ಮಾಳವರಾಜಗೆ ಮದುವೆಯಂ ಮಾಡಿ ಕಂಜರೆ ಪೇಳಲು ಪೂರ್ವವೃತ್ತಾಂತವಂ ಕೇಳಿ, ವಿಕ್ರಮು ರೋಷಭಾಸ್ಕರನಾಶ್ರಮಕ್ಕೆ ಬಂದು ಸ್ತುತಿಸಿ ಕರುಣವಂ ಪಡೆದು ಸೌಂದರ ಮೊದಲಾದವರಂ ರಕ್ಕಸಿಯಿಂದುಗುಳಿಸಿ, ಪ್ರಾಣವಂ ಪಡದು, ಮುನಿಯಪ್ಪಣೆಯಿಂದ ತಮ್ಮ ಪಟ್ಟಣಕ್ಕೆ ಪೋದರು."[೨೫] ಎಂಬುದಾಗಿ ಸಂಗ್ರಹ ರೂಪದಲ್ಲಿ ನೀಡಿದೆ. ರಾಜ ಮತ್ತು ಮುನಿಗಳ ಪರಂಪರೆ ಪ್ರತೀಕವಾಗಿದೆ.

ಸೊಬಗಿನ ಸೋನೆಯ ಸುರಭಿಶೇಖರನ ಕಥೆಯನ್ನು ಕುರಿತು ಭೈರವೇಶ್ವರ ಕಾವ್ಯದ ಕಥಾಸೂತ್ರ ರತ್ನಾಕರದಲ್ಲಿ ಹೀಗೆ ಇದೆ. "೨೪೬ನೇ ಕಥೆ ಜಸಗಂಪನಿಂದ ವನಜನು ಪಂದಿರೂಪನೀಡಾಡಿದನು ಎಂಬುದಕ್ಕೆ ಕಥೆ:

ಶಶಿವಾಳಪುರದಲ್ಲಿ ಜಯಶೇಖರರಾಯನ ಸತಿ ಸುರಭಾವತಿಯ ಮಗ "ಜಸಗಂಪ ವಿಕ್ರಮ"ನೆಂಬ ಉಭಯ ನಾಮದಿಂದಿರುತಂ, ಅಡವಿಗೆಯ್ದು ಬೇಂಟೆಯನಾಡುವಾಗ, ಮುನ್ನೊಬ್ಬ ದೇವಲೋಕದ ಪುವ್ವಡಿಗನು ಪಾರ್ವತೀದೇವಿಯೊಡನೆ ಪುಸಿಯು ನುಡಿಯಲು, "ಸೂಕರನಾಗೆ"ಂದಾಜ್ಞಾಪಿಸಲು, "ಎನಗೆ ಸುಜನ್ಮವೆಂದಿಗೆ"ನಲು "ಜಸಗಂಪನಿಂದ ಸುಖವಹುದೆ" ನಲವಂ ಬಂದು ಭೂಲೋಕದಲ್ಲಿ ಪುಟ್ಟಿ ಸೂಕರನಾಗಿ ಅರಣ್ಯದೊಳಗಿರಲು, ವಿಕ್ರಮನೆಸೆಯಲು

ಅದಜಿ ಪೊಟ್ಟೆಯೊಳಗಣಿಂದ ವನಜನೆಂಬವಂ ಪೊಱವಟ್ಟು ಶಾಪದ ಬಿಡುಗಡೆ ತನಗಾದುದ ವಿಕ್ರಮಗೆ ಪೇಳಿ ತನ್ನ ಗಂಧರ್ವಲೋಕಕ್ಕೆ ಪೋದನು.

ಈ ಕಥೆಗೆ ಹಿನ್ನೆಲೆಯಾಗಿ ಆರಂಭದಲ್ಲೇ ಈ ಪದ್ಯವಿದೆ.

ಪೆಂಪೆಸದಿಹ ಜಸ
ಗಂಪನ ಕೈ ಸೋಂಕಿ
ನಿಂ ಪಂದಿರೂಪನೀಡಾಡಿ
ಕಂಪುಗಣಿಯನ ರೂ
ಪಂ ಪಳಿವಂತಾದ
ಸಂಪನ್ನ ವನಜನಂತಾಗ"[೨೬]



ದೇಪರಾಜ ವರ್ಣನೆಯ ಮೂಲಕ ವಿವರಿಸಿದ ಕಥೆಯನ್ನು ಸಂಕ್ಷಿಪ್ತವಾಗಿ ಒಂದೇ ಪದ್ಯರೂಪದಲ್ಲಿ ಆಶಯವನ್ನು ಮಾತ್ರ ನೀಡಿದ್ದಾನೆ. ವೀರಶೈವ ಧರ್ಮಕ್ಕೆ ಸಂಬಂಧಿಸಿ ಸಂಗ್ರಹಿಸಿದ ಕಾವ್ಯ ಇದಾಗಿದ್ದರಿಂದ ಅಲ್ಲಿಯ ಕತೆಗಳನ್ನು ಆಯ್ದುಕೊಂಡಿರುತ್ತಾನೆ. ದೇಪರಾಜನಿಗೆ ಹನ್ನೆರಡನೆಯ ಶತಮಾನದ ಶಿವಶರಣರ ಆದರ್ಶದ ಬದುಕು, ಅವರ ಸಂದೇಶಗಳು ಶಿವನಿಗೆ ಸಂಬಂಧಿಸಿದ ಭಕ್ತಿ, ಪವಾಡಗಳನ್ನು ತಿಳಿಸುವ ಮೂಲಕ ಶಿವನ ಮಹಿಮೆಯನ್ನು ವಿಕ್ರಮ(ಜಸಗಂಪ)ನ ಮೂಲಕ ಚಿತ್ರಿಸಿದ್ದಾನೆ.

ಸೊಬಗಿನ ಸೋನೆ ಕಾವ್ಯದ ಮೇಲೆ ಜೈನ ಕವಿಗಳು, ವೀರಶೈವ ಕವಿಗಳು ಹಾಗೂ ಸಂಸ್ಕೃತದ ಕೆಲವು ಕವಿಗಳ ಪ್ರಭಾವವಿದೆ ಎಂಬುದು ಮೇಲಿನ ಅಂಶಗಳಿಂದ ತಿಳಿದುಬರುತ್ತದೆ.

ದೇಪರಾಜ ಹತ್ತು ಹಲವು ಕಡೆಗಳಿಂದ ಜ್ಞಾನವನ್ನು ಪಡೆದುಕೊಂಡು ಸಮಕಾಲೀನ ಸಮಸ್ಯೆಗಳ ಅಭಿವ್ಯಕ್ತಿಗಾಗಿ ಸ್ವಪ್ರತಿಭೆಯಿಂದ ಕಾವ್ಯವನ್ನು ರಚಿಸಿರುವುದನ್ನು ಗುರುತಿಸಬಹುದಾಗಿದೆ.

**ಅಡಿ ಟಿಪ್ಪಣಿಗಳು**

೧. ಜಿ. ವೆಂಕಟಸುಬ್ಬಯ್ಯ, ಪ್ರ.ಸಂ. ಕನ್ನಡ ನಿಘಂಟು, ಸಂಪುಟ-೬, ಕ.ಸಾ.ಪ. ಬೆಂಗಳೂರು, ೧೯೯೦, ಪುಟ-೬೧೩೭

೨. ಜಿ.ಎಸ್. ಶಿವರುದ್ರಪ್ಪ, ವಿಮರ್ಶೆಯ ಪೂರ್ವ ಪಶ್ಚಿಮ, ಪುಟ-೪೭.

೩. ಮನ್ವಂತರ ಸಂಪುಟ೩, ೧೯೬೮, ಎಲಿಯಟ್ ಕವಿಯ ವಿಮರ್ಶೆಯ ವಿಚಾರಗಳು, ಪುಟ-೧೪.

೪. ಕನ್ನಡ ಸಾಹಿತ್ಯ ಚರಿತ್ರೆ, ಮೈಸೂರು ವಿಶ್ವವಿದ್ಯಾಲಯ, ಪುಟ-೬೪೪.

೫. ಜಿ.ಎಸ್. ಶಿವರುದ್ರಪ್ಪ, ಕನ್ನಡ ಸಾಹಿತ್ಯ ಸಮೀಕ್ಷೆ, ಪುಟ-೫೭.

೬. ಜಿ.ಜಿ. ಮಂಜುನಾಥನ್ (ಸಂ), ಮೋಹನ ತರಂಗಿಣಿ, ಪ್ರಸ್ತಾವನೆ, ೧೯೯೯, ಪುಟ-೧೧

೭. ಅದೇ ಪುಟ-೧೫೯,೧೩-೨.

೮. ಬಿ.ಎಸ್. ಸಣ್ಣಯ್ಯ (ಸಂ), ಸೊಬಗಿನ ಸೋನೆ, ಪ್ರಸ್ತಾವನೆ ಪುಟ-LIII

೯. ಎ.ಆರ್. ಕೃಷ್ಣಶಾಸ್ತ್ರಿ, ಕಥಾಮೃತ, ಪುಟ-೧೭೯.

೧೦. ಅದೇ ಪುಟ-೨೮೦.

೧೧. ಎ.ಆರ್. ಕೃಷ್ಣಶಾಸ್ತ್ರಿ, ಕಥಾಮೃತ ಪುಟ-೨೮೫.

೧೨. ದಂಡಿಯ ದಶಕುಮಾರ ಚರಿತಂ, ಷಷ್ಠೋಚ್ಛ್ವಾಸಂ

೧೩. ಬಿ.ಎಸ್. ಸಣ್ಣಯ್ಯ (ಸಂ), ಸೊಬಗಿನ ಸೋನೆ, ಪ್ರಸ್ತಾವನೆ ಪುಟ-XLV

೧೪. ಚೌಂಡರಸನ ಅಭಿನವ ದಶಕುಮಾರ ಚರಿತೆ, ೧೨ನೆಯ ಆಶ್ವಾಸ ೧೮೪-೧೯೩ ಪದ್ಯದವರೆಗೆ ವರ್ಣನೆ.

೧೫. ಕೆ. ಕುಶಾಲಪ್ಪಗೌಡ (ಅನು), ಮಧುರಾವಿಜಯಂ ಅಥವಾ ವೀರಕಂಪರಾಯಚರಿತಂ ಹಂಪಿ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೩೦, ಪದ್ಯ೧-೫.

೧೬. ಅದೇ ಪ್ರಸ್ತಾವನೆ ಪುಟ-೨೫.

೧೭. ಅದೇ ಪುಟ-೩೧

೧೮. ಹಂಪನಾಗರಾಜಯ್ಯ, ಸಾಂಗತ್ಯ ಕವಿಗಳು, ೨೦೧೨ ಪುಟ-೧೨.

೧೯. ಬಿ.ಎಸ್. ಸಣ್ಣಯ್ಯ (ಸಂ), ವರ್ಧಮಾನಚರಿತಂ ಪದ್ಮಕವಿ, ೧೯೭೫, ಪ್ರಸ್ತಾವನೆ ಪುಟ-XXXVii.

೨೦. ನಗುವನಹಳ್ಳಿ ಪಿ.ರತ್ನ (ಸಂ), ವಿಕ್ರಮವಿಲಾಸ ಕ.ಅ.ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಪುಟ-೪ ಪದ್ಯ ೧-೧೦.

೨೧. ಅದೇ ಪುಟ–XV.

೨೨. ವೈ.ಸಿ. ಭಾನುಮತಿ (ಸಂ), ಬತ್ತೀಸಪುತ್ತಳಿ ಕಥೆಗಳು ಕು.ಕ.ಅ.ಸಂಸ್ಥೆ, ಮೈಸೂರು.

೨೩. ಬಿ.ಎಸ್. ಸಣ್ಣಯ್ಯ (ಸಂ), ಮದನಮೋಹಿನಿಯ ಕಥೆ, ಕ.ಅ. ಸಂಸ್ಥೆ, ಮೈಸೂರು, ಪ್ರಸ್ತಾವನೆ ಪುಟ–XXVI, XXVii.

೨೪. ಅದೇ ಪುಟ–XXV, XXVi.

೨೫. ಆರ್.ಸಿ. ಹಿರೇಮಠ, ಎಂ.ಎಸ್. ಸುಂಕಾಪುರ (ಸಂ), ಶಾಂತಲಿಂಗ ದೇಶಿಕ ಕೃತಿ, ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರ ಭಾಗ–೨, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೮, ಪುಟ–೧೭–೧೮.

೨೬. ಅದೇ ಪುಟ–೨೩.



ಅಧ್ಯಾಯ : ಐದು

## ಸೊಬಗಿನ ಸೋನೆ: ವಸ್ತುವಿವೇಚನೆ

ಅಧ್ಯಾಯ : ಐದು

# ಸೊಬಗಿನ ಸೋನೆ: ವಸ್ತು ವಿವೇಚನೆ

## ೫.೧. ಸೊಬಗಿನ ಸೋನೆ: ವಸ್ತು

ಈ ಕಾವ್ಯದ ಕಥಾಸಾರವನ್ನು ಅಧ್ಯಯನದ ಅನುಕೂಲಕ್ಕಾಗಿ ಕವಿ ಈ ಕೆಳಗಿನ ಪದ್ಯದಲ್ಲಿ ಹೇಳಿರುವ ಪಾತ್ರಗಳ ಹಿನ್ನೆಲೆಯಲ್ಲಿ ವಿಭಜಿಸಿಕೊಂಡು ವಿಶ್ಲೇಷಿಸಲಾಗಿದೆ.

"ಸುರಭಾವತಿಯ ಕಂಜರೆಯ ವಸಂತೆಯ
ಹರಭಕ್ತ ವನಜ ನಾಗರಪಕ್ಕಿ
ಬರಗೆಯ ಕಥೆಯ ಪತ್ರಿಣಿಯ ಶೃಂಗಾರವ
ವಿರಚಿಸಿದನು ದೇಪನರನಾಥ"[೧]

ಎಂಬುದಾಗಿ ಕವಿಯೇ ಹೇಳಿದ್ದಾನೆ. ಇಲ್ಲಿ ಸುರಭಾವತಿ, ಕಂಜರೆ, ವಸಂತೆ, ಸುರಭಿಶೇಖರ, ನಾಗರಿಕಪಕ್ಷಿ, ಬರಗೆ ಮತ್ತು ಪತ್ರಿಣಿಯ ಒಟ್ಟು ಏಳು ಕಥೆಗಳಿವೆ. ಈ ಎಲ್ಲಾ ಕಥೆಗಳಲ್ಲಿ ವಿಕ್ರಮನು ನಾಯಕನಂತೆ ವಿಜೃಂಭಿಸಿದ್ದಾನೆ. ಕಾವ್ಯದಲ್ಲಿ ಇಪ್ಪತ್ತಾರು ಸಂಧಿ, ಎರಡು ಸಾವಿರದ ಹದಿನೆಂಟು ಪದ್ಯಗಳಲ್ಲಿ ವಸ್ತು ವಿನ್ಯಾಸಗೊಂಡಿದೆ. ಪ್ರತಿ ಸಂಧಿಯ ಆರಂಭ ಮತ್ತು ಅಂತ್ಯದ ಸ್ತುತಿ ಪದ್ಯಗಳಲ್ಲಿ ಖ್ಯಾತ ಕರ್ಣಾಟಕಗಳ ೪೧ ವೃತ್ತಗಳನ್ನು ಬಳಸಲಾಗಿದೆ. ಉಳಿದ ಸಾವಿರದ ಒಂಬೈನೂರ ಎಪ್ಪತ್ತೆಂಟು ಪದ್ಯಗಳಲ್ಲಿ ಬೇರೆ ಬೇರೆ ಕಥೆ ಕುರಿತ ಸೊಬಗಿನ ಸೋನೆ ಮಟ್ಟಿನಲ್ಲಿ ವರ್ಣಿಸಲಾಗಿದೆ. ಹಾಗೆ ನೋಡಿದರೆ ಕಾವ್ಯದಲ್ಲಿ ಕವಿಯ ಪತ್ನಿಯೇ "ಮುನ್ನಜೆಯದ ಮಂಗಳವಪ್ಪೊಂದು ಕಥೆವೇಳ (೧/೧೭) ಕೇಳ್ವ ಕೋವಿದರಿಗೆ ಸೊಗಸೂಜೆವೊಲು ಸಕ್ಕಜ ಕನ್ನಡವೊಪ್ಪ ಕಥೆವೇಳ" (೧/೧೮) ಎಂದು ಪತ್ನಿ ಕವಿಯಲ್ಲಿ ವಿನಂತಿಸಿಕೊಳ್ಳುತ್ತಾಳೆ. ಪ್ರತಿಯಾಗಿ ಕವಿಯು ಈ ಪದ್ಯದಲ್ಲಿ

"ಎಲೆ ಪ್ರಿಯೆ ಕೇಳು ತೊಳದ ಮುತ್ತು ಕರತಳಾ
ಮಳಕವೀ ಕಥೆ ಸೊಬಗಿನ ಸೋನೆ
ತಿಳಿಯದೆ ಸುಯ್ದು ಮಗುಳೆ ಓದಿ ಬೇಸತ್ತು
ತಲೆಗೊಡಹುವ ಕಬ್ಬದೊಳಗಲ್ಲ" (೧/೨೧)

ಶಿವ ಪಾರ್ವತಿಯರಿಗೆ ಸಂಬಂಧಿಸಿದ ಕಥೆ ತನಗೆ ಕರಗತವಾಗಿದೆ. ಇದನ್ನು ಹೇಳುವ ಕಲೆಯೂ ಸಿದ್ಧಿಸಿದೆ. ಆಲಿಸುವವರು ಬೇಸಪಡುವ ಸ್ಥಿತಿ ಬರುವುದಿಲ್ಲ ಎಂಬ ನಂಬಿಕೆ ಕವಿಗಿದೆ.

ಎಂದು ಪತ್ನಿ ಮತ್ತು ಸಹೃದಯರನ್ನು ಉದ್ದೇಶಿಸಿ ಕಥೆಯನ್ನು ಹೇಳುವುದನ್ನು ಗಮನಿಸಿದರೆ ಕಥೆಗೆ ಹಿನ್ನೆಲೆಯಾಗಿ ೧ನೇ ಸಂಧಿಯಲ್ಲಿ ಅರವತ್ತೇಳು ಪದ್ಯಗಳಿವೆ. ಖ್ಯಾತಕರ್ಣಾಟಕ ವೃತ್ತಗಳಲ್ಲಿ ಹಂಪೆಯ ವಿರೂಪಾಕ್ಷನ ಸ್ತುತಿ ಇದೆ. ಇವುಗಳೆಲ್ಲವನ್ನು ಗಮನಿಸಿದರೆ ಕಾವ್ಯದ ವಸ್ತುವನ್ನು ಆರಂಭದಲ್ಲೇ ವಿವೇಚಿಸಿದ್ದಾನೆ. ಪ್ರತಿ ಸಂಧಿಯ ಆರಂಭದ ಪದ್ಯಗಳಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರನ ಸ್ತುತಿ ಇದೆ. ಕಥೆಯ ಮುಕ್ತಾಯ ಹಾಗೂ ಸಂಧಿಯ ಅಂತ್ಯದಲ್ಲಿ "ಛಳಿವೆಟ್ಟು ಮಗಳ ಕಾಲ್ಗೆಱಗಿ ತಿಳುಪಿ ಕೂಡಿ ನಲಿವ ಮಾದೇವ ಸಲಹುಗೆಮ್ಮ"(೨/ ೪೫) ಎಂದು ಕವಿ ಶಿವ–ಪಾರ್ವತಿಯರನ್ನು ಸ್ಮರಿಸುತ್ತ ವಿಘ್ನೇಶ್ವರ, ಲಕ್ಷ್ಮಿ ಸರಸ್ವತಿಯರು ಜಗವನ್ನು ಕಾಪಾಡಲೆಂದು ಕವಿ ಬಯಸುತ್ತಾನೆ.

ಗುರು, ಪೂರ್ವಕವಿ ಸ್ಮರಣೆ, ಕಾವ್ಯ, ಸಹೃದಯರು, ಪಂಡಿತರು, ವಿಮರ್ಶಕರು, ಕಾವ್ಯದ ಶೈಲಿ, ರಸ, ರೀತಿ ಇವುಗಳ ಕುರಿತು ವರ್ಣಿಸಿದ್ದಾನೆ. ಸೊಬಗಿನ ಸೋನೆ ಕಾವ್ಯ ಅಷ್ಟಾದಶವರ್ಣನೆಗಳನ್ನು ಅನುಸರಿಸಿ ಬರೆಯಲ್ಪಟ್ಟಿದೆ ಎಂದು ಕವಿ ಈ ಪದ್ಯದಲ್ಲಿ ಪ್ರಸ್ತಾಪಿಸಿದ್ದಾನೆ.

"ಪುರ ಗಿರಿ ಋತು ನಂದನ ರವಿ ಶಶಿ ಸಾಗ
ರ ರತಿ ಮಧು ಮಂತ್ರ ನೃಪರೇಳ್ಗೆ
ಧುರ ಚರ ಜಲಕೇಳಿ ಸುತ ಕಲ್ಯಾಣ
ವಿರಹ ಕಾವ್ಯಕೆ ಪದಿನೆಂಟಂಗ" (೧/೨೩)

ಎಂದಿರುವುದು ಮಹಾಕಾವ್ಯದ ಸಂಪ್ರದಾಯವು ತನ್ನ ಕಾವ್ಯಕ್ಕೆ ಶೃಂಗಾರವೆಂಬಂತೆ ಇದೆ.

ಇನಿತಂಗದೊಳು ಕಬ್ಬಕೆ ಸಿಂಗರವೆಂಬ
ರಿನಿಯಳೆ ಗಿರಿಜೇಶನೊಲವಿಂದ
ಎನಿತೊದವಿಸಿದನಿತನು ಪೇಳ್ವೆನೀ ಸೊಬ
ಗಿನ ಸೋನೆಯೊಳು ಕವಿಗಳ ನೋಂತು" (೧/೨೪)

ಶಿವನ ಕೃಪೆಯಿಂದ ಶೃಂಗಾರ ಕಥೆಗಳನ್ನು ಸೊಬಗಿನ ಸೋನೆ ಛಂದಸ್ಸಿನಲ್ಲಿ ರಚಿಸಿದ್ದೇನೆ ಎಂದು ಕವಿ ಅಭಿಪ್ರಾಯಪಟ್ಟಿರುವುದನ್ನು ನೋಡಬಹುದು. ಪದ್ಯವೊಂದರಲ್ಲಿ ಕವಿ ಹೇಳಿರುವ ಪಾತ್ರಗಳನ್ನು ಈ ಮುಂದಿನಂತೆ ವಿವೇಚಿಸಿದೆ.

**೫.೧.೧. ಸುರಭಾವತಿ ಕಥೆ**

ಪ್ರಸ್ತುತ ಈ ಕಥೆಯು ಸಂಧಿ ೧ ರಿಂದ ೪ರವರೆಗೆ ನೂರತೊಂಬತ್ನಾಲ್ಕು ಪದ್ಯಗಳಲ್ಲಿ ವರ್ಣಿತವಾಗಿದೆ. ಸಮುದ್ರದಿಂದ ಆವೃತವಾದ ಎತ್ತರವಾದ ಭೂಮಿಯ ಮೇರುಗಿರಿಯ ಪೂರ್ವದಲ್ಲಿ ಚದುರ ಎಂಬ ನಾಡು. ಅಲ್ಲಿ ಸಸಿವೊಳಲೆಂಬ ಪಟ್ಟಣವನ್ನು ಜಯಶೇಖರರಾಜ ಆಳ್ವಿಕೆ ಮಾಡುತ್ತಿದ್ದನು. ಆ ನಾಡಿನಲ್ಲಿ ಊರುಗಳು ತೋಟ, ಸರೋವರ, ಕೆರೆ, ಕಾಲುವೆ, ನದಿ, ಪ್ರಾಣಿ–ಪಕ್ಷಿಗಳಿಂದ ಸಮೃದ್ಧವಾಗಿದ್ದವು. ಜನತೆ ಸುಖದಿಂದ ಇದ್ದು ನುಡಿ, ನಡತೆಗಳಲ್ಲಿ ತೊಡಕಿಲ್ಲದಂತೆ ಬಾಳುತ್ತಿದ್ದರು. ಪಟ್ಟಣವು ಎತ್ತರವಾದ ಕೋಟೆ, ಧ್ವಜ, ಶಿಖರಗಳು ಕೂಡಿದ್ದು ದೂರದಿಂದ ನೋಡುವ ಜನರನ್ನು ಆಕರ್ಷಿಸುವಂತಿದ್ದವು. ನಗರದ ರಾಜಬೀದಿಗಳು ಹೂವು, ರಂಗೋಲಿ, ಮುತ್ತು, ರತ್ನಗಳ ತೋರಣಗಳಿಂದ, ಸುಂದರ ಸ್ತ್ರೀಯರ ಕಾಲಬಳೆಗಳ ಧ್ವನಿಯಿಂದ

ಮನಸೂರೆಗೊಳ್ಳುವಂತಿತ್ತು. ಆ ಪುರಕ್ಕೆ ಆಗಮಿಸುವ ರಸಿಕರ ಕ್ಷೇಮ ಕುಶಲವ ವಿಚಾರಿಸುವ ರಮಣಿಯರು ಶೋಭಿಸುತ್ತಿದ್ದರು. "ಶಿವ ಹರಿಗಳ ದೇಗುಲದಿಂದ ಕವಿಗಳ ಭಯಕಾಜಿ ರಸಿಕರ ಗೋಷ್ಠಿಗಳಿಂದ ರವಿಶಶಿವೀದಿಗಳೆಸದವು" (೧/೪೯) ಅಂದರೆ ಶಿವ ವಿಷ್ಣು ದೇವಾಲಯಗಳು ಅಲ್ಲಿಯ ಕೇರಿಗಳಲ್ಲಿ ಇದ್ದವು. "ಕರಿ ತುರಗವ ತಿದ್ದುವ ರಾಜಕುಮಾರರ ಸರಗೊಳಿಸುವ ನೃತ್ಯ ಮೊದಲಾದ ಭರತ ಕಲೆಯನರಿಪುವರೋದುವರ... ಮಲ್ಲರ ಮಣಿಗಾರಜಿರನಂಕಗಾಜಿರ ಗೆಲ್ಲವಜೆವ ಜೂಜುಗಾಜಿರ ಕೊಲ್ಲಟಿಗರ ಸೂಳೆಯರ ಚಿತ್ರಕಲೆಗಳ ಬಲ್ಲರ" (೧/೫೦-೫೧) ಕುಶಲಕರ್ಮಿಗಳಿದ್ದರು. ಹಾಗಾಗಿ ಜನತೆ ಅರುವತ್ನಾಲ್ಕು ವಿದ್ಯೆಗಳನ್ನು ತಿಳಿದಿದ್ದು ಗುಣ, ಧೈರ್ಯ, ಸಂಪತ್ತುಗಳಿಗೆ ಕೊರತೆ ಇಲ್ಲದಂತೆ ಅವರೆಲ್ಲರು ಶಿವಭಕ್ತರಾಗಿದ್ದರು ಎಂಬುದನ್ನು ಈ ಪದ್ಯದಲ್ಲಿ ಹೇಳಿದ್ದಾನೆ.

"ಎಲ್ಲರು ಶಿವಭಕ್ತರು ನನ್ನಿಯುಳ್ಳರು
ಬಲ್ಲ ಜಾಣರು ಭೋಗಿ ಸುಖಿಗಳು
ಗೆಲ್ಲಗೈಯರು ವೀರರು ಜಸವೆಣ್ಣೊಲ
ವಿಲ್ಲದರಿಲ್ಲವಾ ಪೊಳಲೊಳು" (೧/೫೪)

ಇಂತಹ ನಾಡನ್ನು ಆಳುವ ರಾಜರು ಸತ್ಯ, ಗುಣ, ರೂಪ, ದೈವಭಕ್ತಿ, ಬಲ, ದಾನ, ಸಮತಾಭಾವನೆಗಳಿಂದ ಸಕಲ ಕಲಾವಲ್ಲಭರಾಗಿದ್ದರು. ಇಂತಹ ರಾಜರಿಂದ ಈ ನಾಡು ನೆಲೆವೆಣ್ಣಿಗೆ ತವರೂರು, ಸಂಪತ್ತಿನ ನೆಲೆಬೀಡು, ವಿದ್ಯೆಗೆ ಸರಸ್ವತಿಯನ್ನು ಆರಾಧಿಸುವ, ಜಸವೆಣ್ಣಿಗೆ, ಗೆಲುವೆಣ್ಣಿಗೆ ಪೋಷಣೆ ಮಾಡುತ್ತ ಬಂದಿತ್ತು. ಈ ಪರಂಪರೆಯ ಮುಂದುವರಿಕೆಯಾಗಿ ಜಯಶೇಖರ ರಾಜ ರಾಮನ ಸತ್ಯ, ರಾವಣನ ಧೈರ್ಯ, ಬಲರಾಮನ ಬಲ, ಚಂದ್ರನ ಗುಣ, ಭೂಮಿಯ ಸಮತೆ, ಮನ್ಮಥನ ರೂಪ, ಹರಿಯಲೀಲೆ ಈ ಎಲ್ಲಾ ಗುಣಗಳಿಂದ ರಾಜ ಪ್ರಸಿದ್ಧಿಗೆ ಬಂದಿದ್ದನು. "ಸಿರಿವಂತನೆನೆ ಸಿರಿವೆತ್ತಾಗ ಕರವಾಳ ಜಡಿದು ಬಾಳಿದನಾಗ ಜಯಶೇಖರ" (೧/೫೮) ಎಂದು ನಾಡಿನ ಜನ ಹೊಗಳಿ ಹಾಡುತ್ತಿದ್ದರು. ಅಂದರೆ ಅರಸನಾಗಿ ಶ್ರೀಮಂತಿಕೆಯನ್ನು ಮೆರೆಯದೇ ಬೇಡಿದವರಿಗೆ ಸಂಪತ್ತನ್ನು ಕೊಟ್ಟು ತಾನು ಶಾಶ್ವತವಾದ ಕೀರ್ತಿಯನ್ನು ಪಡೆಯುವನು. ಈತನ ಗುಣ ಸ್ವಭಾವಗಳನ್ನು ವರ್ಣಿಸಲು ಚಂದ್ರ, ಹೊಂಬೆಟ್ಟ, ಸಮುದ್ರಗಳು ಹೋಲಿಕೆಯಾದರೂ ಪ್ರಕೃತಿಯಂತಹ ವಸ್ತುಗಳಲ್ಲೇ ಕೊರತೆಯನ್ನು ಕಾಣುತ್ತೇವೆಯೇ ಹೊರತು ರಾಜನಲ್ಲಿ ಯಾವುದೇ ಕುಂದುಕೊರತೆಗಳಿಲ್ಲವೆಂಬಂತೆ ಇದ್ದ ಈತ ತಿಳಿಯದ ಕಲೆಗಳು, ಮಾಡದ ದಾನಗಳು, ಮಣಿಯದ ಶತ್ರುಗಳು ಆ ನಾಡಿನಲ್ಲಿ ಇರಲಿಲ್ಲವೆಂಬಂತೆ ಇದ್ದನು.

ಈತನ ರಾಣಿ ಸುರಭಾವತಿಯು ಶಿವನಿಗೆ ಪಾರ್ವತಿ, ವಿಷ್ಣುವಿಗೆ (ಲಕ್ಷ್ಮಿ) ಇಂದಿರೆ, ಬ್ರಹ್ಮನಿಗೆ ಸರಸ್ವತಿ, ಪುರುಹೂತಗೆ ಶಚಿಯರಂತೆ ಇದ್ದಳು. ಇವಳು ರೂಪದಲ್ಲಿ ರತಿಯಂತೆ, ಜಾಣ್ಮೆಗೆ ಸರಸ್ವತಿಯಂತೆ ಪ್ರೀತಿಗೆ ಪಾರ್ವತಿಯಂತೆ, ಶಚಿ, ರೋಹಿಣಿಯರ ಪತಿಭಕ್ತಿಯ ಗುಣಗಳು ಮೈದಾಳಿವೆಯೋ ಏನೋ ಎಂಬಂತೆ ಶೋಭಿಸುತ್ತಿದ್ದಳು.

ಹಲವು ಕಾಲದವರೆಗೆ ಸುಖ ಸಮೃದ್ಧಿಯಿಂದ ಆಡಳಿತ ನಡೆಸುತ್ತ ಬಾಳುತ್ತಿದ್ದ ಅರಸನಿಗೆ ಯಾವುದೇ ಕುಂದುಕೊರತೆಗಳಿರಲಿಲ್ಲ. ಆದರೆ ಒಂದು ದಿನ ರಾಣಿ ಸಖಿಯರೊಂದಿಗೆ ಉದ್ಯಾನವನಕ್ಕೆ

ವಿಹರಿಸಲೆಂದು ಹೊರಟಳು. ಅಲ್ಲಿ ಹಂಸಗಳು ತಮ್ಮ ಮರಿಗಳೊಂದಿಗೆ ಸಂಭ್ರಮಿಸುತ್ತಿರುವುದನ್ನು ಕಂಡಳು. ಹಂಸಗಳು ಇವಳನ್ನೇ ಆಕರ್ಷಿಸಿ ಬಲೆಯಲ್ಲಿ ಹಾಕಿಕೊಂಡವೋ ಎಂಬಂತೆ ತಾಯಿ ಮರಿಗಳ ಸಂಭ್ರಮವಿತ್ತು. ಈ ದೃಶ್ಯವು ರಾಣಿಯನ್ನು ಚಿಂತೆಗೆ ತಳ್ಳಿತು. ಹಂಸಗಳ ಸಂಭ್ರಮ ರಾಣಿಯ ಮುಂದಿನ ಬದುಕಿಗೆ ನಾಂದಿ ಹಾಡಿದಂತೆ ಕಂಡಿತು. ತಾಯಿ ಹಂಸಗಳು ತಮ್ಮ ಮರಿಗಳಿಗೆ ಗುಟುಕು ಕೊಡುವ ವಾತ್ಸಲ್ಯ, ನಲಿದಾಡುವ, ನಟನೆ ಮಾಡಿ ತೋರಿಸುವ ದೃಶ್ಯವು ದೃಢಕಾಯದ ರಾಣಿಯ ಮನಸ್ಸನ್ನು ಚಿಂತೆಯಲ್ಲಿ ಕೊರಗುವಂತೆ ಮಾಡಿತು. ಹಂಸಗಳು ಮರಿಗಳೊಂದಿಗೆ ನಲಿದಾಡಿ ಸುಖವನ್ನು ಹೊಂದಿದಂತೆ ತನಗೆ ಅಂತಹ ಭಾಗ್ಯವಿಲ್ಲವೆಂಬ ಚಿಂತೆಯಲ್ಲಿಯೇ ಸಖಿಯರೊಂದಿಗೆ ಅರಮನೆಗೆ ಬಂದು ಹಾಸಿಗೆ ಹಿಡಿದಳು. ಶ್ವೇತಾಂಬರ ಧಾರಿಣಿಯಾಗಿ ಹಣೆಗೆ ಕಸ್ತೂರಿ ಧರಿಸಿ ಕಿವಿಯ ಆಭರಣ ತೆಗೆದಿರಿಸಿ ಇಂಪಾದ ಕಡಲಿನ ತೆರೆಯೊಳಗಿದ್ದ ಬೆಳದಿಂಗಳ ಅಧಿದೇವತೆಯಂತೆ ಇದ್ದಳು. ಹಂಸಗಳ ಬದುಕಿಗಿಂತ ತಾನು ಕಡಿಮೆ ಅಲ್ಲವೆಂದು ಬಗೆದು ಮಕ್ಕಳ ಬಯಕೆ ತೀವ್ರವಾಯಿತು. ಸಂತಸದ ಅರಮನೆ ಶೂನ್ಯದ ಬೀಡಾಯಿತು. ರಾಣಿಯ ಚಿಂತೆಗೆ ಸ್ಪಂದಿಸಿದ ಗಿಳಿ, ಕೋಗಿಲೆ, ಪಾರಿವಾಳ, ದುಂಬಿಗಳು ಸಹಿತ ಮೌನವಾಗಿದ್ದವು. ಸಖಿಯರು ಇಂಥ ಸ್ಥಿತಿಯಲ್ಲಿ ಸ್ತಬ್ಧರಾಗಿ ಬೆರಗಾದರು. ರಾಣಿಯ ಚಿಂತೆಯ ಕಾರಣವನ್ನು ಯೋಚಿಸಿ ತಿಳಿಯಬೇಕೆಂದು ಕವಿ ಪತ್ನಿಗೆ ಹೇಳಿದ್ದಾನೆ. ರಾಣಿಯ ಗೆಳತಿಯೊಬ್ಬಳು ರಾಜನ ಬಳಿಗೆ ಬಂದು ರಾಣಿಯ ಚಿತ್ತ ನಮಗೆ ಅರ್ಥವಾಗದು ಎಂದು ಮನವಿ ಮಾಡಿಕೊಂಡಳು. ತಕ್ಷಣ ರಾಜ ರಾಣಿಯನ್ನು ನೋಡಿ

> ನೇಹಗಲಹದೇಳ್ಗೆಯೊ ತಲೆವೇನೆಯೊ
> ದೇಹದಾಸರೊ ಪಿಸುಣ್ನುಡಿದರೊ
> ಊಹಿಸಬಾರದೆನುತ ನೃಪ ಪೊರ್ದಿದ
> ನಾ ಹೆಣ್ಣ ತಳಿರಡಿದೆಸೆಯನು (೨/೧೪)

ಗೆಳತಿಯರೊಂದಿಗಿನ ಕಲಹವೊ, ತಲೆ ನೋವೊ, ದೇಹದ ದಣಿವೋ, ಚಾಡಿಮಾತನ್ನು ಕೇಳಿದಳೊ ಏನೆಂದು ಊಹಿಸುವುದೇ ತಪ್ಪು. ಇವಳನ್ನು ಹೇಗೆ ಅರ್ಥಮಾಡಿಕೊಳ್ಳುವುದು. ಮುನಿಸಿಕೊಂಡು ಚಿಂತೆಯಲ್ಲಿದ್ದ ಇವಳನ್ನು ಮಾತನಾಡಿಸಿದರೆ ವಿಕೋಪಕ್ಕೆ ಹೋದಾಳೆಂಬ ಅಂಜಿಕೆಯಲ್ಲಿದ್ದನು. ಆ ಕ್ಷಣ ಅರಮನೆಯ ಪಂಜರದಲ್ಲಿದ್ದ 'ಮಧುರ' ಎಂಬ ಗಿಳಿಯು ರಾಜನಿಗೆ ಈ ರೀತಿ ಸಲಹೆ ನೀಡುವುದು.

> ರಾಯ ಕೇಳೆಮ್ಮಕ್ಕನ ಚಿಂತೆಯಿನ್ನ ಬ
> ರಾಯತಗೆಡಿಸಿತೆಮ್ಮೆಲ್ಲರ
> ಜೀಯ ಮೂಗರ ಮಾಡಿತು ಜಾಣಕಲೆಗಧಿ
> ನಾಯಕ ನುಡಿಸೊ ನಿನ್ನಿನಿಯಳ (೨/೧೭)

ಕಲೆಗಳಿಗೆ ಅಧಿನಾಯಕನಂತಿರುವ ಜಾಣನೇ ರಾಣಿಯ ಚಿಂತೆಯನ್ನು ಪರಿಹರಿಸಿ ನಮಗೆ ಸಂಭ್ರಮ ಉಂಟಾಗುವಂತೆ ಮಾಡು ಎಂದು ವಿನಂತಿ ಮಾಡಿತು. ಅರಗಿಳಿಯ ಮಧುರವಾದ ಮಾತುಗಳು ರಾಣಿಯ ಮನಸ್ಸಿಗೆ ಹಿತವೆನಿಸಿತು. ಅವಳ ಮನಕರಗಿ ರಾಜನ ಕಡೆ ದೃಷ್ಟಿ

ಹಾಯಿಸಿದಳು. ಮನ್ಮಥನಂತಿದ್ದ ಪ್ರಿಯನೇ ಈ ಹಿಂದೆ ಕಳೆದ ದಿನಗಳನ್ನು ನೆನಸಿಕೊಂಡು ಕೊರಗಿದ್ದೇನೆ. ಮುಂದಿನ ದಿನಗಳು ಹೀಗೆ ಕಳೆದರೆ ಸಾಮ್ರಾಜ್ಯದ ಜವಾಬ್ದಾರಿ ಹೊರುವವರಾರು?

ನೋಂತೆನು ಸಿರಿಗೆ ಜಸಕೆ ಚಿತ್ರಕಲೆಗಳ
ನಾಂತೆ ನಿನ್ನಯ ಸುಖಭೋಗಕ್ಕೆ
ಕಾಂತ ಬಾಳಿಗೆ ಬಾಲಕೇಳಿಯ ಸಿರಿಗೆ ನಾ
ನೋಂತುದಿಲ್ಲದ ಹೇಳುವೆನೇನ (೨/೨೬)

ಎನ್ನುತ್ತ ರಾಣಿಯು ಅರಸನೊಂದಿಗೆ ಎಲ್ಲ ಭಾಗ್ಯವನ್ನು ಪಡೆದು ಸುಖಪಟ್ಟಿದ್ದೇನೆ. ಆದರೆ ಪುತ್ರ ಸಂತಾನವಿಲ್ಲವೆಂಬ ಕೊರತೆಯನ್ನು ಹೇಳುವುದಾದರೂ ಹೇಗೆ ಸಾಮ್ರಾಜ್ಯದಲ್ಲಿ ನವಿಲಾಡದ ನಂದನ ವನ, ಕಳೆಯುಳ್ಳ ಯುವತಿಯ ರಾಡದ ನೆಲೆವಾಡು, ಪವನನಾಡದ ತನು ವ್ಯರ್ಥವೆನ್ನುತ್ತಾಳೆ.

ಈಯದ ಕೈ. ನನೆಯೇಱದ ಎಳೆವಳ್ಳಿ
ಕಾಯದ ಮರ ಬೆಳೆಯದ ನೆಲ
ಪ್ರಾಯದೊಳೆಳೆಬರೊಗೆಯದ ಪಾಳ್ಪೊಡೆ
ರಾಯ ಕೇಳಿಳೆಯೊಳಗೆಸವುದೆ (೨/೨೮)

ದಾನ ಮಾಡದ ಕೈ, ಬೆಳೆಯದ ನೆಲ, ಫಲ ನೀಡದ ಮರ, ಹೂ ಬಿಡದ ಬಳ್ಳಿಯ ಹಾಗೆ ಪ್ರಾಯವೂ ಕಾಲ ಮೀರಿದರೆ ವ್ಯರ್ಥವಲ್ಲವೇ, ಮಕ್ಕಳ ಮಮತೆ, ಹಾಲುಣಿಸುವ ಸುಖವನ್ನು ತಾಯಿ ಆದವಳು ಮಾತ್ರ ಅನುಭವಿಸಲು ಸಾಧ್ಯ ಆದರೆ ರಾಣಿಯಾದ ನನಗೆ ಗಂಡು ಮಗುವಿನ ತಾಯಿ ಆಗುವ ಭಾಗ್ಯವಿಲ್ಲವೆಂದು ನಿವೇದಿಸಿಕೊಂಡಳು. ಅರಸ ಒಳ್ಳೆಯದನ್ನೇ ಯೋಚಿಸಿದ್ದೀಯೆ. ಗಂಡು ಮಕ್ಕಳಿಲ್ಲದ ಸಂಸಾರ ನಿಸ್ಸಾರವಾಗುತ್ತದೆ. ಶ್ರೇಷ್ಠ ಮಕ್ಕಳಿಂದ ಎಲ್ಲ ರೀತಿಯ ಸುಖಸಂಪತ್ತು ಪಡೆದು ಜೀವನ ಅನುಭವಿಸುವುದೇ ಸಾರ್ಥಕವೆನಿಸುತ್ತದೆ. ಗಂಡು ಮಕ್ಕಳಿಗಾಗಿ ಚಿಂತಿಸುವುದು ಬೇಡ, ಜಗತ್ತಿಗೆ ಕೀರ್ತಿ ತರುವ ಮಗನನ್ನು ಪಡೆಯುವೆನು ಎಂದು ಆಡಳಿತದ ಜವಾಬ್ದಾರಿಯನ್ನು ಮಂತ್ರಿ ವಿಜಯನಿಗೆ ವಹಿಸಿ ಕೈಲಾಸಕ್ಕೆ ಹೋಗಿ ಶಿವನನ್ನು ಕುರಿತು ತಪಸ್ಸು ಮಾಡಿ ವರವನ್ನು ಪಡೆದೆ ಬರುತ್ತೇನೆಂದು ಪತ್ನಿಗೆ ಭರವಸೆ ನೀಡಿದನು. ಅಂತೆಯೇ ಅಘೋರ ತಪಸ್ಸನ್ನು ಕೈಗೊಳ್ಳುತ್ತಾನೆ. ರಾಜನ ತಪಸ್ಸಿಗೆ ಶಿವಪಾರ್ವತಿಯರು ಪ್ರತ್ಯಕ್ಷರಾಗುತ್ತಾರೆ.

ಏಳು ಮಗನೆ ಜಯಶೇಖರ ನಿನಗೆ ವಿ
ಶಾಲ ವಿಕ್ರಮನ ಕೀರುತಿವೆಣ್ಗೆ
ಲೋಲನ ಚಿತ್ರಕುಶಲ ಚವುಷಷ್ಠಿಕ
ಳಾಲಯನಪ್ಪ ಪುತ್ರನೆನಿತ್ತೆ (೨/೪೨) ಎಂದು ಶಿವ ಪ್ರತ್ಯಕ್ಷನಾದನು. ನಂತರ ಶಿವ ಪಾರ್ವತಿಯ ಮುಡಿಯೊಳಗಿದ್ದ ಮಂದಾರದ ಅರಳನ್ನು ಕೊಟ್ಟು ಆಶೀರ್ವದಿಸಿ ಅರವತ್ನಾಲ್ಕು ಕಲೆಗಳುಳ್ಳ ಪುತ್ರ ಕೀರ್ತಿವಂತನಾಗಿ ಬಾಳುತ್ತಾನೆ ಎಂದು ಕಳುಹಿಸಿಕೊಟ್ಟನು. ಜಯಶೇಖರರಾಜ ಕೈಲಾಸದಿಂದ ಸಸಿವೊಳಲಿಗೆ ಸಂಭ್ರಮದಿಂದ ಬಂದನು. ಕೂಡಲೇ ಪುರೋಹಿತರನ್ನು ಕರೆಯಿಸಿ ಅರಮನೆಯಲ್ಲಿ ಹೋಮ ಮಂತ್ರಗಳನ್ನು ನೆರವೇರಿಸಿದನು. ಮಂಗಳ ವಾದ್ಯಗಳು ಮೊಳಗಿದವು.

ಶಿವ ಕರುಣಿಸಿದ ಮಂದಾರದ ಅರಳನ್ನು ಉತ್ತಮ ತಿಥಿ, ವಾರ, ತಾರೆ, ಲಗ್ನ, ಗಳಿಗೆಯಲ್ಲಿ ಪ್ರೀತಿಯಿಂದ ರಾಣಿಯ ಮುಡಿಗೆ ಅಲಂಕರಿಸಿದನು. ರಾಣಿಯು ರಾಜನ ಪಕ್ಕದಲ್ಲಿ "ಸೌಂದರ ದೇಸಿ ಜಸಗೂಡಿ ಪುಟವಿಟ್ಟ ಮಿಸುನಿಯ ಪೊಸ ಪುತ್ಥಳಿಯಂತೆ"(೩/೭) ಕಂಗೊಳಿಸಿದಳು. 'ದೇವಕುಸುಮ'ವನ್ನು ಶಿವನೇ ಪ್ರೀತಿಯಿಂದ ಕರುಣಿಸಿ ಪುತ್ರನನ್ನು ಪಡೆಯಲೆಂದು ಹಾರೈಸಿದ್ದಾನೆ ಎಂಬುದನ್ನು ಕೇಳಿ ರಾಣಿಯು ಹೆಮ್ಮೆಯಿಂದ ಇದ್ದಳು. ದೇವಲೋಕದಿಂದ ದುಂದುಭಿ ಮೊಳಗಿದವು. ರಾಜನ ಪಿತೃಗಳು ಹಿಗ್ಗಿದರು ಜಗವೇ ಇದರಿಂದ ಸಂಭ್ರಮಿಸುವಂತಾಯಿತು. ರಾಣಿಯು ದಿನದಿನಕ್ಕೂ ವಸಂತದಂತೆ ಬೆಳೆದಳು.

ತೋಟದ ಆಳು ಮಾವು, ಹೂವು, ಚೆಂದಾವರೆ, ಹಲಸು, ಅರಳು, ಬಾಳೆಗೊನೆಗಳನ್ನು ಕಾಣಿಕೆಯಾಗಿ ತಂದನು. ರಾಜನು ಇತರೆ ಕನ್ನಿಕೆಯರಿಗೆ ಉಡುಗೆ-ತೊಡುಗೆಗಳನ್ನು ಕೊಟ್ಟು ಶೃಂಗಾರದಿಂದ ಉದ್ಯಾನವನಕ್ಕೆ ಬಂದನು. ರಾಜನು ಇಲ್ಲಿಗೆ ಬಂದಿರುವುದನ್ನು ನೋಡಿ ವನದಲ್ಲಿದ್ದ ದುಂಬಿ, ಗಿಳಿ, ನವಿಲು, ಕೋಗಿಲೆ, ಹಂಸ, ಜಾಣ್ಪಕ್ಕಿಗಳು ನಲಿದಾಡಿದವು. ಕುವರಿಯರು, ಅಬಲೆಯರು, ಶೈವ ಸನ್ಯಾಸಿನಿಯರು ಮರುಗ, ಕೆಂಪು ಕಣಗಿಲೆ, ಮಲ್ಲಿಗೆ, ತಾವರೆ, ನೈದಿಲೆ, ಸಂಪಗೆ, ಸೇವಂತಿಗೆ ಮುಂತಾದ ಅರಳಿದ ಹೂಗಳನ್ನು ಅರಸನಿಗೆ ಕೊಟ್ಟು ಸಂತೋಷದಿಂದ ಇದ್ದರು.

"ಮುತ್ತೈದೆಯರು ಅಲಂಕಾರಗೊಂಡು ಹೂವನ್ನು ಕೊಡಲು ಬಂದರು. ಒಬ್ಬಳು ತಾವರೆ ಹೂವನ್ನು ಕೊಟ್ಟು ರಾಜನಿಗೆ ಇದು ನಿನ್ನ ಚಿಂತೆಯನ್ನೇ ಕಳೆಯುತ್ತದೆ. ಮತ್ತೊಬ್ಬಳು ಮಾಕಂದರಳನ್ನು ನೀಡಿ ಶೋಕವನ್ನೇ ಮರೆಸುತ್ತದೆ. ಮೂರನೆಯವಳು ಕುಟ್ಮಜದ ಹೂವನ್ನು ಕೊಟ್ಟು ಹೃದಯವನ್ನೇ ಸೂರೆಗೊಳಿಸುತ್ತದೆ, ನಾಲ್ಕನೆಯವಳು ಮತ್ತೊಂದು ಹೂವನ್ನು ನೀಡಿ ಶೋಕವನ್ನುಂಟು ಮಾಡಿದವರನ್ನೇ ತಲುಪಿ ನಿದ್ರೆಗೈಯಿಸುವಂತೆ ಮಾಡುತ್ತದೆ. ಐದನೆಯವಳು ಸಾಮಾನ್ಯ ಹೂವಲ್ಲ ಅದು ರಾಜನ ಪ್ರಾಣವನ್ನೇ ರಕ್ಷಿಸುತ್ತದೆ"(೩/೪೫-೪೯) ಎಂದು ಅಲ್ಲಿದ್ದ ಹೆಣ್ಣುಮಕ್ಕಳು ವರ್ಣಿಸಿದರು. ಈ ನಾರಿಯರ ಮಧ್ಯೆ ರಾಜನು ನಕ್ಷತ್ರಗಳ ಮಧ್ಯೆ ಕಂಗೊಳಿಸುವ ಚಂದ್ರನಂತೆ ಇದ್ದನು. ರಾಣಿಯು ಹಲವು ಹೂವುಗಳಲ್ಲಿ ಚಂದಾವರೆಯಂತೆ ಶೋಭಿಸಿದಳು. ಆಗ ರಾಜರಾಣಿಯರು ಕಾಮಶಾಸ್ತ್ರವನ್ನು ತಿಳಿದು ಕಾಮಕಲೆಯ ಕಲಾಪವನ್ನು ಅನುಭವಿಸಲು ಮುಂದಾದರು. ಅಲ್ಲಿಂದ ಇತರ ಸ್ತ್ರೀಯರು ತೆರಳಿದರು. ಗರ್ಭವತಿಯಾದ ರಾಣಿಯನ್ನು ಕಂಡ ರಾಜ ಪುಳಕಗೊಂಡನು. ದಿನದಿನಕ್ಕೂ ರಾಣಿಯ ಮುಖ, ಮೈ, ಸ್ತನಗಳು ಕಾಂತಿಯುಕ್ತವಾದವು. ಕಪ್ಪಡರಿದ ಸ್ತನಗಳು ದೃಷ್ಟಿಹಾಯುವಂತೆ ಇದ್ದವು.

ಸುರಭಾವತಿ ರಾಣಿಯು ಪ್ರಸವವೇದನೆಪಡುತ್ತಿದ್ದಾಗ ಸಖಿಯರೂ, ಸೂಲಗಿತ್ತಿಯರೂ ಉಪಚರಿಸಿದರು. ಒಳ್ಳೆಯ ಮುಹೂರ್ತದಲ್ಲಿ ಗಂಡು ಮಗುವನ್ನು ಹೆತ್ತಳು. ಸೂಲಗಿತ್ತಿಯರು ಮಗುವಿಗೆ ಬೆಚ್ಚು ನೀರನ್ನು ಹಾಕಿ ಬಂಗಾರದ ಹರಿವಾಣದಲ್ಲಿಟ್ಟು ಹೊಕ್ಕುಳ ಬಳ್ಳಿಯನ್ನು ಕತ್ತರಿಸಿದರು. ಮಗು ಮಾಣಿಕ್ಯದಂತೆ, ಎಳೆನೇಸರನಂತೆ ಹೊಸ ಚಿಪ್ಪಿನಿಂದ ಹೊರಬಂದ ಮುತ್ತೋ ಎಂಬಂತೆ ಮಿರುಗುತ್ತಿರುವ ಗಂಡು ಮಗುವನ್ನು ಕಂಡ ರಾಣಿಯು ಸಂಭ್ರಮಿಸಿದಳು. ಸಖಿಯರು

ಬಾಣಂತಿಯ ಆರೈಕೆಯನ್ನು ಮಾಡಿದರು. ರಾಜ ಪುರದ ಜನಕ್ಕೆ ಅನ್ನದಾನವನ್ನು ಮಾಡಿ ಮಗನನ್ನು ನೋಡಿ ಹೆಮ್ಮೆಪಟ್ಟನು.

> ಕರೆದನರಸ ವಿಕ್ರಮನೆಂದು ಕೀರ್ತಿಯ
> ಪರಿಮಳದಿಂದ ಮೂಜಗವನು
> ಪೊರೆವನೆಂದಜೆವರಿಟ್ಟರು ಜಸಗಂಪನೆಂ
> ಬೆರಡನೆ ಪೆಸರನಾ ಕುವರಗೆ (೪/೨೫)

ಪುರೋಹಿತರಿಂದ ಲೌಕಿಕ, ವೈದಿಕ, ಹೋಮ ಶಾಂತಿ ಮಾಡಿಸಿ ಮಗುವಿಗೆ 'ವಿಕ್ರಮ' ಎಂದು ಹೆಸರಿಟ್ಟರು. ವಿಕ್ರಮನ ಕೀರ್ತಿಯು ಮೂರುಲೋಕಕ್ಕೂ ವ್ಯಾಪಿಸಲೆಂದು 'ಜಸಗಂಪ' ಎಂಬ ಎರಡನೇ ಹೆಸರನ್ನು ಕರೆದರು. ಮಂಗಳ ವಾದ್ಯಗಳು ಮೊಳಗಿದವು. ನಾರಿಯರು ಮಗುವನ್ನು ತೊಟ್ಟಿಲಲ್ಲಿಟ್ಟು ಜೋಗುಳ ಹಾಡುತ್ತಾ ವಂಶೋದ್ಧಾರಕನಾಗು ಎಂದು ಹಾರೈಸಿದರು. ಮಗು ದಿನದಿನಕ್ಕೂ ಬೆಳೆಯುತ್ತ ಅಂಬೆಗಾಲಿಟ್ಟು ದಟ್ಟವಾದ ಹೆಜ್ಜೆಯನ್ನು ಹಾಕುತ್ತ ನೆಡೆಯಿತು. ಈ ದೃಶ್ಯವು ಭೂಮಂಡಲದ ಹಗೆಗಳನ್ನು ಪಶುಗಳನ್ನಾಗಿ ಮಾಡಿ ಹಿಡಿದು ತರುತ್ತಾನೆಯೋ ಎಂಬಂತೆ ತೋರುತ್ತಿತ್ತು. ಕೈಗಳನ್ನು ಅಲ್ಲಾಡಿಸಿದರೆ ತನ್ನ ತೋಳ್‌ಬಾಳಿಗೆ ಸರಿಸಮಾನಾದ ಬಾಳ್ ಮತ್ತೊಂದಿಲ್ಲವೆಂಬಂತೆ ಇದ್ದನು. ಆನೆ, ಕುದುರೆಗಳನ್ನು ಪಳಗಿಸುತ್ತ, ಶಸ್ತ್ರಾಸ್ತ್ರ ವಿದ್ಯೆಗಳಲ್ಲಿ ಪರಿಣಿತನಾಗಿ ಪರಾಕ್ರಮಿಯೂ, ಚತುರನೂ ಆಗಿ ಬೆಳೆದು ಕುಲಮದ, ರೂಪಮದ, ಬಲಮದ, ಸಂತಸಮದಗಳಿಂದ ಕೂಡಿದ್ದರೂ ದಯೆ, ದಾಕ್ಷಿಣ್ಯ, ಮಮತೆ, ಶಿವಭಕ್ತಿ, ಶಾಂತಿಗಳಿಗೆ ಕೊರತೆ ಇಲ್ಲದಂತೆ ಬೆಳೆದನು. ವಿಕ್ರಮನ ಕೀರ್ತಿಯನ್ನು ಕೇಳಿದ ರಾಜಕುಮಾರರು ನಾನಾ ಕಡೆಯಿಂದ

> ಬಂದರು ಬಲು ಬಿಜ್ಜೆಯನಜೆವೊಲವಿಂದ
> ಸಿಂಧು ಮಾಳವದೇಶದರಸರ
> ನಂದನರ್ ಮಧುರ ಮಾಳವರೆಂಬ ಕುವರರು
> ಚಂದಿರವೊಳಲಿಗಂದಸಿಯಳ್ (೪/೩೮)

ಸಿಂಧು ಮಾಳವ ದೇಶದಿಂದ ಮಧುರ, ಮಾಳವರು ಸಸಿವೊಳಲಿಗೆ ಬಂದು ವಿಕ್ರಮನ ಜೊತೆಯಲ್ಲಿ ಸಕಲ ವಿದ್ಯೆಯನ್ನು ಕಲಿತು ಸಹೋದರರಾದರು. ಚದುರರು, ಪರಾಕ್ರಮಿಗಳು, ವೀರರು, ಮತಿವಂತರು, ಪಂಡಿತರು ಮುಂತಾದವರೆಲ್ಲರು ವಿಕ್ರಮನಿಗೆ ಹಿತೈಷಿಗಳಾದರು. ರೂಪ, ಪ್ರಾಯ, ಕುಲ, ಶೀಲ, ಗುಣಗಳಿಂದ ವಿಕ್ರಮ ಖ್ಯಾತಿ ಹೊಂದಿದ್ದನು. ಇಂತಹ ವಿಕ್ರಮಕುಮಾರನಿಗೆ ಬೇರೆ ಯಾರೂ ಸರಿಸಾಟಿಯಾಗಿರಲಿಲ್ಲ. ನಂದನ ವನದಲ್ಲಿ ಆಟ, ಊಟ, ವಿನೋದ, ಸರಸ ನಗೆ ನುಡಿಗಳಿಂದ ಅರಸುಕುಮಾರರನ್ನು ರಂಜಿಸುತ್ತಿದ್ದನು. ಬೇಟೆಯಲ್ಲಿ ವಿಶೇಷಾಸಕ್ತಿ ಹೊಂದಿದ್ದನು. ಗಂಧ, ಕರ್ಪೂರ, ವೀಳ್ಯೆಯಗಳನ್ನು ಸಖರಿಗೆ ನೀಡಿ ಸುಖಿಸುತ್ತಿದ್ದನು. ನಿತ್ಯವೂ ಹಾಡನ್ನು ಸವಿಯುವ, ಕಾವ್ಯವನ್ನು ರಚಿಸುವ, ನೃತ್ಯನೋಡುವ ಜೂಜುಗಳಲ್ಲಿ ಪಾಲ್ಗೊಳ್ಳುತ್ತ ವೈರಿಗಳಿಗೆ ವೈರಿಯಂತಿದ್ದು, ಗೆಳೆಯರಿಚ್ಚೆಗೆ ಸಂತಸವನ್ನು ನೀಡುತ್ತಾ ಜನಸಾಮಾನ್ಯರ ಬಾಳುವೆಗೆ ಹತ್ತಿರವಾಗಿದ್ದನು.

### ೫.೧.೨. ಕಂಜರೆಯ ವೃತ್ತಾಂತ

ಪ್ರಸ್ತುತ ಕಂಜರೆಯ ವೃತ್ತಾಂತವು ಸಂಧಿ ೫ರಿಂದ ೭ರವರೆಗೆ ಒಟ್ಟು ನೂರಾ ತೊಂಬತ್ತೊಂಬತ್ತು ಪದ್ಯಗಳಲ್ಲಿ ವರ್ಣಿಸಲಾಗಿದೆ. ರೋಷಭಾಸ್ಕರ ಮುನಿಯ ಶಾಪದ ಪರಿಣಾಮವಾಗಿ ಕಂಜರೆಯನ್ನು ರಾಕ್ಷಸನು ಅಪಹರಿಸುತ್ತಾನೆ. ವಿಕ್ರಮ ಮತ್ತು ಮಾಳವಕುಮಾರರು ಕಂಜರೆಯನ್ನು ರಾಕ್ಷಸನಿಂದ ಬಿಡಿಸಿಕೊಂಡು ಕಂಜರೆಯ ಇಚ್ಛೆಯಂತೆ ಮಾಳವನೊಂದಿಗೆ ಮದುವೆ ನೆರವೇರಿಸುವ ಪ್ರಸಂಗವಿದೆ.

ವಿಕ್ರಮ ವಿದ್ಯೆ ಕಲಿಯಲು ಬಂದಿದ್ದ ಮಧುರ, ಮಾಳವನೊಂದಿಗೆ ಆಟವಾಡುತ್ತಿದ್ದಾಗ ಆಕಾಶದಲ್ಲಿ ಹೆಣ್ಣಿನ ಆಕ್ರಂದನ ಧ್ವನಿಯನ್ನು ಕೇಳಿಸಿಕೊಳ್ಳುತ್ತಾನೆ. ತಕ್ಷಣವೇ ಆ ದಿಕ್ಕಿನ ಕಡೆಗೆ ನೋಡಿದಾಗ "ತಲೆಗಾಯಿರೆ ಕಾವರಿಲ್ಲೆಂದು ಎಳದೊಯಿವುತಿಹನೆ ರಕ್ಕಸ ಮೊಜೆಯೊ"(೫/೬) ಎಂಬ ಧ್ವನಿಯು ಈ ಕುಮಾರರಲ್ಲಿ ಆತಂಕವನ್ನು ಮೂಡಿಸಿತು. ಇದೊಂದು 'ಪೆಣ್ಬುಯಲು' ಇರಬೇಕೆಂದು ಮಾಳವ ಬಿಲ್ಲನ್ನು ಹಿಡಿದು ಹೋರಾಡಲು ಮುಂದಾದನು. "ನಿಲ್ಲೆಲೊ ಹುಲು ರಕ್ಕಸ ಹೆಂಗಳ್ಳ ಕಲಹಕೆ ಸರಿಸವಾಗಲ್ಲದಿರ್ದಡೆ ಬಿಡು ಲಲನೆಯನುತ ಮೂದಲಿಸಿದ (೫/೧೧) ರಾಕ್ಷಸ ಪ್ರತಿಯಾಗಿ ತಾನು ಮೂರು ಲೋಕದಲ್ಲಿ ಯಾರಿಗೂ ಅಂಜುವವನಲ್ಲ ಶಿವನ ಮೂರನೇ ಕಣ್ಣನ್ನು ತೊಡುವೆ, ಸಮುದ್ರ ಕುಡಿವೆ, ಮಾರಿಯ ಕೆಣಕಿ ವೀರನೊಬ್ಬ ಬಾಳಲು ಸಾಧ್ಯವೇ ನೀನು ಸಿಟ್ಟಾದರೆ ಸೂರ್ಯನಿಗೇನು ಆಗುವುದಿಲ್ಲ, ಭೂಚರರಿಗೆ ಖೇಚರರಲ್ಲಿ ಸೆಣಸಾಟ ಸಲ್ಲದು ಹೋಗೋ ಎಂದು ವ್ಯಂಗ್ಯವಾಗಿ ರಾಕ್ಷಸ ನಿಂದಿಸಿದನು. ರಾಕ್ಷಸನ ಚೂಪಾದ ಬಾಣಗಳು ಕಾರ್ಮುಗಿಲನ್ನು ಆವರಿಸಿ ಮಾಳವನಲ್ಲಿ ಧೈರ್ಯಗುಂದುವಂತೆ ಮಾಡಿದವು. ಆದರೂ ಮಾಳವ ಧೈರ್ಯದಿಂದ ಹೋರಾಡಲು ಮುಂದಾಗಿ ರಾಕ್ಷಸನನ್ನು ಕುರಿತು ನಾವು ಭೂಚರರು ನೀನು ಖೇಚರನೇ ಸರಿ "ಪರ್ಬಕ್ಕಾಗಸದಲ್ಲಿ ವಿಹರಿಸೆ ಸಿಂಗಕೆಣಿಯೆ" (೫/೧೪) ಎನ್ನುತ್ತ "ನೆನೆ ಗಣಿಗಳಿಗೆ ಜಿತೇಂದ್ರಿಯನೆನಿಸುವ ಮುನಿಯಳುಕುವನೆ"(೫/೧೭) ಎಂದು ಬಾಣಬಿಟ್ಟನು. 'ಬಾಗೂರ' ಎಂಬ ರಾಕ್ಷಸನು ಓಡಿಹೋಗುವುದೇ ಸರಿಯೆಂದು ಮುನ್ನುಗ್ಗಿದನು. ಮಾಳವ ಈ ರಾಕ್ಷಸನನ್ನು ಹಿಡಿಯಲು ಕಾಡು-ಮೇಡು, ಹಳ್ಳ-ಕೊಳ್ಳಗಳನ್ನು ಲೆಕ್ಕಿಸದೇ ಮುನ್ನುಗ್ಗಿದನು. ಹತ್ತಾರು ಗಾವುದ ದೂರ ಹೋದನು. ಇದೆಲ್ಲವನ್ನು ಗಮನಿಸುತ್ತಿದ್ದ ವಿಕ್ರಮ ಮಾಳವನ ಸಹಾಯಕ್ಕೆ ಹಿಂಬಾಲಿಸಿ ರಾಕ್ಷಸನ ಮೇಲೆ ಬಾಣಗಳನ್ನು ಹೂಡಿ ಮೂದಲಿಸಿ ಗದೆಯನ್ನು ಬೀಸಿದನು. ಬಾಣಗಳ ಹೊಡೆತದಿಂದ ಎಣ್ದೆಸೆಗಳಲ್ಲಿ ನಡುಕ ಹುಟ್ಟಿ ಬೆಚ್ಚಿಬಿದ್ದರು. ರಾಕ್ಷಸನು "ಎಲವೊ ನೀನಾರು ಮಾಳವಗೇನಹೆ ಹೇಳು ಕಲಹಗೊಡದೆ ತಲೆಗಾಯಿದರೆ ಬಳಿಯಲಿ ಬಂದೆ ಸದರವೆಯನ್ನಯ ಕೈಚಳಕವೆ ನಿಂದು ತೋಜುವೆನೆಂದ" (೫/೨೮) ವಿಕ್ರಮನನ್ನು ಕುರಿತು ತಿಳಿಯಲು ಕಾತರಿಸಿ ಯುದ್ಧಮಾಡಲು ಸಿದ್ಧವೆಂದನು. ವಿಕ್ರಮನು ಈ ಮಾತಿಗೆ ಹೆದರಿ ಓಡುವವನಲ್ಲ ನಿನ್ನ ಪ್ರಾಣವನ್ನು ಈಡಾಡುವೆನು ಎಂದು ಗದೆ ಬೀಸಿದನು. ನೆಲವೇ ನಡುಗಿ ಬೆಟ್ಟ ಸಿಡಿದವು. ಸಾಗರ ಆರ್ಭಟಿಸಿತು. ಶತ್ರುಗಳ ಬಾಣಗಳೇ ತಿರುಗಿ ಹಗೆತನವನ್ನು ಸಾಧಿಸಿದವು. ತಕ್ಷಣವೇ ರಾಕ್ಷಸನು ನೆಲಕ್ಕೆ ಉರುಳಿದ. ವಿಕ್ರಮ ಅನಿಲಶರವನ್ನು ಬಿಟ್ಟು ಬಾಲಕಿಗೆ ತೊಂದರೆ ಆಗದಂತೆ ಕೆಳಗೆ ಇಳಿಸಿದನು. ಅವಳು ಸಂತೋಷದಿಂದ ವಿಕ್ರಮನ ಪಾದಕ್ಕೆ ನಮಸ್ಕರಿಸಿದಳು. ಯಾರು

ನೀನು? ತಂದೆ ಯಾರು? ಅಪಹರಣಕ್ಕೆ ಏಕೆ ಒಳಗಾದೆ ಎಂದು ಪ್ರಶ್ನಿಸಿದನು. ಈ ಸಂದರ್ಭದಲ್ಲಿ ಕಂಜರೆ ತನ್ನ ವೃತ್ತಾಂತವನ್ನು ಕುರಿತು ವಿಕ್ರಮನಿಗೆ ಹೇಳುವಳು.

ಅರಸ ಕೇಳೆಮ್ಮಯ್ಯನು ಕಾಶ್ಮೀರ ಭೂ
ವರ ಸೌಂದರನೆಂಬ ಪೆಸರುಳ್ಳ
ಪಿರಿದೆನ್ನ ಪರಸಿ ಪಡೆದರೆನ್ನ ನಾಮಕಂ
ಜರೆಯೆಂದಳಾ ಕಂಜದಳ ನೇತ್ರ (೫/೩೭)

ಕಂಜರೆ ತನ್ನ ಪರಿಚಯವನ್ನು ವಿಕ್ರಮನಿಗೆ ಹೇಳುತ್ತಾ ಕಾಶ್ಮೀರ ದೇಶದ ಜಯವತಿ ಪಟ್ಟಣದಲ್ಲಿ ಸೌಂದರರಾಜ ಆಳ್ವಿಕೆ ಮಾಡುತ್ತಿದ್ದ. ಈತನ ಆಳ್ವಿಕೆಯು ಸಂಪತ್ತು, ಯಶಸ್ಸು, ಕೀರ್ತಿ, ಪರಾಕ್ರಮಗಳಿಗೆ ಬೇರೆ ಯಾರಿಗೂ ಕಡಿಮೆ ಇಲ್ಲದಂತೆ ಅರಸ ಪ್ರಸಿದ್ಧಿಯನ್ನು ಪಡೆದಿದ್ದನು. ಒಮ್ಮೆ ಅರಮನೆಯಲ್ಲಿ ಅರಸ ಸಭೆಯನ್ನು ನಡೆಸುತ್ತಿದ್ದಾಗ ಅಡವಿಯಿಂದ ಬೇಟೆಗಾರನೊಬ್ಬನು ಭಯದಿಂದ ಓಡಿಬಂದು ಬೇಡಿಕೊಳ್ಳುವ ದೃಶ್ಯ ಆತಂಕವನ್ನು ಮೂಡಿಸಿತು. ಆತ

ದೇವ ಚಿತ್ತೈಸು ಗಂಡಿಗಸಿಂಗವೊಂದೆಮ್ಮ
ಕಾವಲ ಹೊಲಕ್ಕೈತಂದುದು
ಭಾವಿಸೆ ನಿನ್ನ ಕೂರ್ಗಣೆಗುಣಿಸಾಗಲು
ಭೂವರ ತಕ್ಕುದೆಂದುಸುರಿದ (೫/೪೦)

ನಾವು ಕಾವಲಾಗಿದ್ದ ಹೊಲಕ್ಕೆ ಗಂಡು ಸಿಂಹವೊಂದು ನುಗ್ಗಿ ಬೆಳೆಯನ್ನೆಲ್ಲ ನಾಶಪಡಿಸಿ ತೊಂದರೆ ಕೊಡುತ್ತಿದೆ. ಈ ಕಷ್ಟದಿಂದ ನಮ್ಮನ್ನು ರಕ್ಷಿಸು ಎಂದು ಬೇಡಿದನು. ತಕ್ಷಣ ಸಭೆಯಿಂದ ಹೊರಬಂದ ರಾಜ ಕುದುರೆಯನ್ನೇರಿ ಸಿಂಹವಿದ್ದ ಅಡವಿಗೆ ಹೊರಡುತ್ತಾನೆ. ರಾಜ ಮತ್ತು ರಾಜನ ಪರಿವಾರವೂ ಬಲೆ ಬೀಸಿ ಬಿಲ್ಲು ಬಾಣಗಳನ್ನು ಹಿಡಿದು ಸಿಂಹವನ್ನು ಕೊಲ್ಲಲು ಮುನ್ನುಗ್ಗಿದ್ದರು. ರೊಚ್ಚಿಗೆದ್ದ ಸಿಂಹ ಎಣ್ಟೆಸೆಗಳೆಲ್ಲವೂ ನಡುಗುವಂತೆ ಗರ್ಜಿಸುತ್ತ ಅರಸನ ಪರಿವಾರವನ್ನು ಹಿಮ್ಮೆಟ್ಟಿಸುತ್ತ ಭಯಂಕರ ರೂಪವನ್ನು ತಾಳಿ ಸೈನಿಕರ ರಕ್ತವನ್ನು ಹೀರಿತು. ಆ ಕಾಡಿನಲ್ಲಿದ್ದ ಸಿಂಹದ ಭೀಕರ ದೃಶ್ಯದ ವರ್ಣನೆ ಇಂತಿದೆ.

ನಾಲಗೆಯೊ ಮಾರಿಯ ಕೈಗತ್ತಿಯೊ
ಆಲಿಯೊ ಸಿಡಿಲ ಕೆಂಗಿಡಿಗಳೊ
ಬಾಲವೊ ಜವನ ಪಳವಿಗೆಯೊ ಮೀಸೆಯೊ
ಕಾಲಾಗ್ನಿಯ ಕೆದರ್ದುರಿಗಳೊ (೫/೫೩)

ಎಂಬಂತೆ ಇತ್ತು. ಮಾರಿಯ ಆಯುಧದಂತೆ, ಸಿಡಿಲ ಕೆಂಗಿಡಿಗಳೊ ಯಮನೊ ಎಂಬಂತೆ ಇತ್ತು. ಆ ಸಿಂಹವು 'ರೋಷಭಾಸ್ಕರ'ನೆಂಬ ಮುನಿಯ ಆಶ್ರಮದ ಹತ್ತಿರಕ್ಕೆ ಬಂದಿತು. ಅಲ್ಲಿಯೇ ಅರಸ ಆ ಸಿಂಹವನ್ನು ಕತ್ತರಿಸಿದನು. ಖೇಚರರು ಇದೆಂತಹ ಕೈಚಳಕವೆಂದು ಪ್ರಶಂಸಿದರು. ಸೌಂದರ ಅರಸ ಅಲ್ಲೇ ಇದ್ದ ಮರದ ನೆರಳಿನಲ್ಲಿ ಕುದುರೆಯನ್ನು ನಿಲ್ಲಿಸಿ ದಣಿವಾರಿಸಿಕೊಂಡನು. ಪರಿವಾರದವರು ಸಿಂಹವನ್ನು ಹಿಂಬಾಲಿಸಿಕೊಂಡು ಬಂದು ಬಳಲಿದ್ದರು. ರೋಷಭಾಸ್ಕರ ಮುನಿಯ ಆಶ್ರಮದಲ್ಲಿದ್ದ ಫಲಭರಿತ ಹಣ್ಣು ಕಾಯಿಗಳನ್ನು ಕಿತ್ತು ತಿಂದರು. ನೀರಿನ ಕೊಳ, ಮರ, ಗಿಡ

ಬಳ್ಳಿಗಳೆಲ್ಲವನ್ನು ಕಿತ್ತು ತೂರಾಡಿ ಬನವನ್ನು ಬಯಲು ಮಾಡಿದರು ಹಸಿವಿನಿಂದ ಬಳಲಿದ್ದ ಆ ಸೈನ್ಯವು ಮುಂದಾಗುವ ಅಪಾಯವನ್ನು ಲಕ್ಷಿಸದೇ ಇತ್ತು. ಆಶ್ರಮದಲ್ಲಿದ್ದ ಎಳೆತಪಸ್ವಿಗಳು ಈ ರೀತಿ ಎಚ್ಚರಿಸಿದರು.

ಬೇಡಬೇಡೆಲೊ ರೋಷಭಾಸ್ಕರನೆಂದೆಂಬ
ಗಾಡಿಕಾಜಿನ ನಂದನವಿದು
ನಾಡಾಡಿ ಋಷಿಯಲ್ಲವೆಂದೆಳೆ ತಪಸಿಗ
ಳಾಡಿದರಂದು ಪುಲ್ಪಿಡಿದೆತ್ತಿ (೬/೧೧)

ರಾಜನ ಪರಿವಾರಕ್ಕೆ ಎಚ್ಚರಿಕೆಯನ್ನು ಕೊಟ್ಟರು. ಋಷಿಯು ಸಾಮಾನ್ಯನಲ್ಲ ವಿನಾಕಾರಣ ಜಗಳ ಮಾಡುವುದು ಒಳ್ಳೆಯದಲ್ಲವೆಂದು ಬುದ್ಧಿವಾದ ಹೇಳಿದರು. ರಾಜನ ಪರಿವಾರ ಮುನಿಕುಮಾರರ ಮೇಲೆಯೇ ದಾಳಿಯನ್ನು ಮಾಡುತ್ತಾ "ಎಲ್ಲಿಯ ರೋಷಭಾಸ್ಕರ ಹಸಿದೆಮ್ಮೊಡ ಲಲ್ಲಿದೆ ರೋಷಭಾಸ್ಕರನೆಂದು"(೬/೧೨) ಜರಿದರು. ಆ ಎಳೆಯ ವಟುಗಳನ್ನು ಹೊಡೆಬಡಿ ಎನ್ನುತ್ತ ಮಾನಸನೆಂಬ ಮುನಿಕುಮಾರನನ್ನು ಕಟ್ಟಿದರು. ಅಲ್ಲಿದ್ದ ಮುನೀಂದ್ರನು ಈ ಎಲ್ಲಾ ಸ್ಥಿತಿಯನ್ನು ನೋಡಿ ರಾಜನ ಪರಿವಾರ ಕರೆಯಿಸಿದನು. ಆ ಪರಿವಾರವು ಮುನಿಯ ಮುಂದೆ ಉದ್ಧಟತನದಿಂದ ವರ್ತಿಸಿತು. ಮುನಿಯು ಇವರು ಕೆಟ್ಟವರಿದ್ದಾರೆಂದು ನಿರ್ಧರಿಸಿ ಈ ಸೈನ್ಯ ಪರಿವಾರದ ನಾಯಕನಾರು, ಎಲ್ಲಿದ್ದಾನೆ ಎಂದು ಕೇಳಿದನು. ಮುನಿಕುಮಾರರು ಮುನೀಂದ್ರನಿಗೆ ನಮಸ್ಕರಿಸಿ ವನ ಹಾಳಾದ ಸುದ್ದಿಯನ್ನು ತಿಳಿಸಿದರು. ಮಾನಸಕುಮಾರನ ಜಡೆ ಕಿತ್ತು ಹಾಕಿದ್ದನ್ನು ನೋಡಿ ಕೆಣಕಿದನು. ರೋಷಭಾಸ್ಕರ ತನ್ನ ಕಿರುಜಡೆಯನ್ನು ಕಿತ್ತು ಸೌಂದರರಾಜನಿಗೆ ಶಾಪ ಹಾಕಿದ. ಈ ಕಿರುಜಡೆಯು

ಹಾ ಹಾ ಹಸಿದೆ ಹಸಿದೆ ನೀಡು ನೀಡೆನ
ಗಾಹುತಿಯೇನೆಂದು ಬೆಸಗೊಳ್ಳೆ
ನೀ ಹೋಗಿ ಮುಟೆದು ಮೊದಲಿಗೆ ಸೌಂದರ ಸಿರಿ
ಯಾಹುತಿ ಹೋಗೆಂದಟ್ಟಿದ ಮುನಿ (೬/೩೦)

ಸೌಂದರರಾಜನ ಪರಿವಾವು ಸೈನ್ಯ ಸಮೇತ ಮರಳಿ ಅರಮನೆಗೆ ತಲುಪಿ ಸಂಭ್ರಮದಲ್ಲಿತ್ತು. ಒಮ್ಮೆ ಆಕಾಶದಿಂದ ಧ್ವನಿಯೊಂದು ಈ ಪೂರ್ವದಲ್ಲಾದ ವೃತ್ತಾಂತವನ್ನು ಹೇಳಿತು. ಇದನ್ನಾಲಿಸಿದ ಸೌಂದರರಾಜ ಬೆಚ್ಚಿ ಬೆವರಿದನು. ಅರಮನೆಯ ಎಲ್ಲೆಡೆಯೂ ಧೂಮಕೇತುಗಳು ಕಾಣಿಸಿಕೊಂಡು ಭೂಮಿ ನಡುಗಿತು. ಕೆರೆ ತೊರೆಗಳು ಉಕ್ಕಿದವು. ರಕ್ತದ ಮಳೆ ಸುರಿಯಿತು. ಜನ ಕಂಗಾಲಾದರು. ನಿವಾರಣೆಗಾಗಿ ಶಾಂತಿ ಕರ್ಮಗಳನ್ನು ಮಾಡಿಸಿದರು. ಆ ಪುರದಲ್ಲಿ ಕೆಲವರು ಹರಕೆಗಟ್ಟಿದರು, ಕೆಲವರು ಬಲಿಗಳನ್ನು ನೀಡಿದರು, ಮತ್ತೆ ಕೆಲವರು ಇದೆಲ್ಲವನ್ನು ಕಂಡು ಮರುಗಿದರು. ಅರಸ ಚಿಂತೆಗೊಳಗಾಗಿ ಮುಖಂಡರೊಂದಿಗೆ ಮಂತ್ರಾಲೋಚನಗೈದನು. ಅಷ್ಟರಲ್ಲಿ ಭಯಂಕರವಾದ ರಾಕ್ಷಸಿಯ ರೂಪ ತೋರಿತು. ಆ ದೃಶ್ಯವು

ಬಳಲುಗಿವಿಯ ಕಾರೊಡಲಿನ ಕೆದಱಿದ
ತಲೆಯ ತಿರುಗುವ ಕೇಸುರಿಗಣ್ಣ
ನೆಲಕೆಳಲುವ ಕೈಗಳ ಭಯರೂಪೊಂದು
ಪೊಳಲ ನಡುವೆ ನಿಂದುದು ರಾಯ (೬/೩೮)

ಹೀಗೆ ದೈಹಿಕ ವಿಕಾರವನ್ನು ಹೊಂದಿ ಆ ದೃಶ್ಯವು ಭಯ ಮೂಡಿಸುವಂತಿದ್ದು ನಗರದ ಜನತೆಗೆ ಅಪಾಯವನ್ನು ತಂದೊಡ್ಡಿತು. ಮಂತ್ರಿಯೊಬ್ಬನು ಅರಸನಿಗೆ ರಾಕ್ಷಸಿಯ ಕುರಿತು ತಿಳಿಸಿದನು. ರಾಜ ಇದೆಲ್ಲವೂ ರೋಷಭಾಸ್ಕರ ಮುನಿಯ ಕುತಂತ್ರವೆಂದು ತಿಳಿದು ಅದಕ್ಕೆ ಬಲಿಯನ್ನು ಕೊಡಲು ಹೇಳಿದನು. ಜನರು ಕುರಿ, ಕೋಣ, ಅನ್ನವನ್ನು ತರಿಸಿ ಬಲಿಗೊಟ್ಟರು. ಮಾರಿಯು ಹಲ್ಲು ಕಿರಿಯುತ್ತ ನಾಲಗೆಯನ್ನು ಚಾಚಿದಳು. ಬಾಯೊಳಗೆ ಎಪ್ಪತ್ತೇಳು ಸಾವಿರದಷ್ಟು ಕುದುರೆ ಆನೆಗಳನ್ನು ನುಗ್ಗಿಸಿದರು. ಮತ್ತೆ ರಾಕ್ಷಸಿ ಹದಿನಾರು ಸಾವಿರ ಕುರಿಕೋಣಗಳನ್ನು ಬಲಿತೆಗೆದುಕೊಂಡಿತು. ಆದರೆ ಭಯಂಕರವಾದ ಆಕಾರವು ಕಾಲಭೈರವಿಯೊ, ಮೃತ್ಯುವಿನಧಿದೇವಿಯೋ ಎಂಬಂತೆ ಮೂರು ಲೋಕವನ್ನು ಅಪಾಯಕ್ಕೆ ತಂದೊಡ್ಡುವ ಸ್ಥಿತಿಗೆ ಬಂದಿತು. ಈ ರೂಪವು ಹಸಿವು ಹಸಿವು ಸವುಂದರಭೂಪಾಲನೇ ಸಂಪತ್ತನ್ನು ನೀಡು ಎಂದು ಆರ್ಭಟಿಸಿತು. ಮೃತ್ಯುವಿನ ಹೆಮ್ಮಾರಿಯಂತಿದ್ದ ಅದಕ್ಕೆ ಇಡೀ ವಂಶವೇ ಬಲಿಯಾಗಿ ನಾಶವಾದೀತೆಂದು ಭಾವಿಸಿ ಅರಸ ತನ್ನ ಮಕ್ಕಳನ್ನು ಕರೆದು ದೂರ ಉಳಿಯಲು ಆಜ್ಞೆಗೈದನು. 'ಹರಸಿ ಹಡದೆ ನಿನ್ನ ರಕ್ಕಸಗೀಯೆ ಫಲವೆ'(೬/೬೩) ಎಂದು ಕೊರಗುತ್ತ ಆಕಾಶದಲ್ಲಿ ಹೋಗಲು ಹೇಳಿ, ತಾನು ರಾಕ್ಷಸಿಗೆ ಆಹುತಿ ಆದನು. ಕಂಜರೆಯು ತನ್ನ ಅಣ್ಣನೊಂದಿಗೆ ಆಕಾಶದಲ್ಲಿ ಅಲೆದಾಡುತ್ತಿದ್ದಾಗ ಭೂಮಿಯಲ್ಲಿ ಇವರ ಸಂಪತ್ತು ಸಾಮ್ರಾಜ್ಯ, ಬಂಧುಬಳಗ, ತಂದೆ ತಾಯಿಗಳೆಲ್ಲರೂ ರೋಷಭಾಸ್ಕರನ ಕೋಪಕ್ಕೆ ಬಲಿಯಾಗಿ ದಿಕ್ಕು ದೆಸೆಯಿಲ್ಲದೆ ಅತಂತ್ರವಾದವು.

ಕಂಜರೆ ಮತ್ತು ಅವಳ ಅಣ್ಣ ಆಕಾಶದಲ್ಲಿ ಅಲೆದಾಡುತ್ತಿದ್ದಾಗ ರೋಷಭಾಸ್ಕರ ಮುನಿಯನ್ನು ಎದುರುಗೊಂಡು ಭಯಭೀತರಾಗಿ ಅಲ್ಲಿಂದ ದೂರ ಹೋಗುತ್ತಾರೆ. ಮುನಿ ತನ್ನ ತಪಸ್ವಿಕುಮಾರರನ್ನು ಕಳುಹಿಸಿ ತನ್ನಲ್ಲಿಗೆ ಬರಲು ಹೇಳಿದನು. ಅಣ್ಣತಂಗಿಯರಿಬ್ಬರೂ ಅಷ್ಟಕ್ಕೂ ಬರದಿದ್ದಾಗ ಶಾಪಕೊಡಲು ತಿಳಿಸಿದನು. ಮುನಿಯು ಸಮೀಪಿಸುತ್ತಿದ್ದಂತೆ ಬಹುದೂರ ಹೋದರು. ಮುನಿಯು "ಪೊಡವಿಗಿವಳನಿಳುಹಿದಡಾಗ ಖಚರಯಿಕ್ಕಡಿಯಾಂಗಲೆಲೊ ನಿನ್ನ ತಲೆಯೆಂದ"(೭/೨೫) ಅಂದರೆ ಅಡವಿಯಲ್ಲಿ ಕೆಳಗೆ ಇಳುಹಿದಾಗ ಖಚರನ ತಲೆ ಎರಡು ಹೋಳಾಗಲಿ ಎಂದು ಶಾಪವನ್ನು ಕೊಟ್ಟನು. ಕಂಜರೆಯು ತನ್ನ ಅಣ್ಣನಿಗೆ ನೀಡಿದ ಶಾಪ ಪರಿಹಾರವಾಗುವುದು ಯಾವಾಗ ಎಂದಳು. ಮುನಿಯು, ತಂಗಿ ಕೇಳು "ನೀ ಕೂಡಿದವನು ಸಂಗಡಿಸಿದಡುಳಿಯಲಿ ತಲೆ ಪಱಿದೊಡಲಿಂಗುಸುರಿರಲಿ ನೀ ಹೋಗೆಂದ"(೭/೨೯) ಕಂಜರೆಯನ್ನು ಮದುವೆಯಾದವನು ಅವಳ ಅಣ್ಣನೊಂದಿಗೆ ಸೇರಿದಾಗ ಅವನ ತಲೆ ಬೇರೆಯಾಗಿದ್ದರೂ ದೇಹದಲ್ಲಿ ಪ್ರಾಣವಿರುತ್ತದೆ ಎಂದು ಶಾಪಕ್ಕೆ ಪರಿಹಾರವನ್ನು ಮುನಿ ತಿಳಿಸಿದನು. ಇದರಿಂದ ಕಂಜರೆಯ ಸ್ಥಿತಿ "ನೆಲೆಗೆಟ್ಟರ ನೆಲ ಹೊಱದೆಂಬ ನಾಣ್ನುಡಿ"(೭/೩೫)ಯಂತೆ ಆಕಾಶದಲ್ಲೆ ಸುತ್ತಾಡುತ್ತಾ ಖಚರನೊಂದಿಗೆ ಹಣ್ಣು ಫಲಗಳನ್ನು ತಿನ್ನುತ್ತ ಇದ್ದಳು. ಆಗ ರಾಕ್ಷಸನೊಬ್ಬನು ಕಂಜರೆಯ ಸೌಂದರ್ಯಕ್ಕೆ

ಮನಸೋತು ಅವಳನ್ನು ತನಗೆ ಒಪ್ಪಿಸಬೇಕೆಂದು ಖಚರನನ್ನು ಬಲತ್ಕಾರ ಮಾಡಿದನು. ಆ ರಾಕ್ಷಸ ನಾನು ನಿನ್ನನ್ನು ಬೇಡಲು ಅವಕಾಶ ಕೊಡದೆ ನಿನ್ನ ಅಣ್ಣನೇ ನನಗೆ ತಲೆಯನ್ನು ಕೊಟ್ಟ ಮತ್ತೆ ಈಗ ನಿನ್ನನ್ನು ಕಾಯುವವರು ಯಾರು ಎನ್ನುತ್ತಾ ಕಂಜರೆಯನ್ನು ಅಪಹರಿಸಿ ಆಕಾಶದಲ್ಲಿ ಹೋಗುತ್ತಿದ್ದನು. ಕಂಜರೆಯು ತನ್ನ ರಕ್ಷಣೆಗಾಗಿ ಮೊರೆಯಿಡುತ್ತಾ ಇದ್ದಾಗ ವಿಕ್ರಮರಾಜನು ಆಕಾಶದೆಡೆಗೆ ನೋಡಿ ತನ್ನ ಸಹೋದರನಂತಿದ್ದ ಮಾಳವನಿಗೆ ಕಾಪಾಡಲು ಹೇಳುತ್ತಾನೆ. ಅವನಿಂದ ಕಾಪಾಡಲು ಆಗದಿದ್ದಾಗ ವಿಕ್ರಮನೇ ಕಂಜರೆಯನ್ನು ರಾಕ್ಷಸನಿಂದ ಕಾಪಾಡಿ ಉಳಿಸುತ್ತಾನೆ. ಕಂಜರೆಯ ಇಚ್ಛೆಯಂತೆ ಮಾಳವನನ್ನು ವರಿಸೆಂದು ಹೇಳಿ ಹರಸಿ ಇವರಿಬ್ಬರಿಗೂ ಧಾರೆಯೆರೆದು ಅವಳ ಅಣ್ಣನ ಪ್ರಾಣವನ್ನು ಉಳಿಸಿ ಅರಮನೆಗೆ ಬೀಳ್ಕೊಟ್ಟನು.

### ೫.೧.೩. ವಸಂತೆಯ ವೃತ್ತಾಂತ

ಸೊಬಗಿನ ಸೋನೆ ಕಾವ್ಯದಲ್ಲಿ ವಂಸತೆಯ ವೃತ್ತಾಂತವು ಸಂಧಿ ೮ರಿಂದ ೧೦ನೆಯ ಸಂಧಿಯವರೆಗೆ ಒಟ್ಟು ಎರಡು ನೂರು ಸೋನೆ ಸಾಂಗತ್ಯ ಪದ್ಯಗಳಲ್ಲಿ ವರ್ಣಿಸಲಾಗಿದೆ. ಇದು ಕಂಜರೆಯ ವೃತ್ತಾಂತದ ನಂತರ ಬರುತ್ತದೆ. ಕಂಜರೆಯನ್ನು ಮಾಳವನೊಂದಿಗೆ ಮದುವೆ ಮಾಡಿ ಹಾರೈಸಿ ವಿಕ್ರಮ ಅರಣ್ಯದಲ್ಲಿ ಸುತ್ತಾಡುತ್ತಿದ್ದಾಗ ಕಂಡ ಆಶ್ಚರ್ಯಕರವಾದ ಪ್ರಸಂಗ ಇಂತಿದೆ.

ಅರಣ್ಯದಲ್ಲಿ ಏಕಾಂತವಾಗಿ ಒಂದೆಡೆಯಲ್ಲಿ ಕುಳಿತಿದ್ದ ಸ್ತ್ರೀಯು 'ಸಸು ಮಾಸಿದ ಶಶಿಲೇಖೆಯಂತೆ' ಸುಂದರವಾಗಿದ್ದಳು. ಅವಳ ಮನಸ್ಸು ಯಾವುದೋ ಮಹಾನ್ ಕಾರ್ಯ ಮಾಡುವ ರೀತಿಯಲ್ಲಿತ್ತು. ಇವಳ ಆಸೆಯೇನಿರಬಹುದೆಂದು ವಿಕ್ರಮ ಹತ್ತಿರಕ್ಕೆ ಹೋದನು. ಇವಳು ಸಾಮಾನ್ಯಳಲ್ಲವೆಂದು ಬಗೆದನು. ಅವಳೂ ಸಹ ಎದುರಿಗಿದ್ದ ವ್ಯಕ್ತಿಯನ್ನು ಹೀಗೆ ಕಲ್ಪಿಸಿದಳು.

ಬಿಸಿಗದಿರ್ಗೆದಱದಿನನೊ ಮೈಗಣ್ಣಿಲ್ಲ
ದೆಸೆವಿಂದಿರನೊ ಕಂದನಾದ
ಸಸಿಯೊ ನೀನಾವರಸಿನ ಮಗನೆಂಬುದ
ನುಸುರೆಂದು ತುಳಿಲ್ಗೈದಳು ಕೇಳ (೮/೧೦)

ಸೂರ್ಯನೋ, ಇಂದ್ರನೋ, ಚಂದ್ರನೋ, ಅಥವಾ ಯಾವ ಅರಸನ ಮಗನೆಂಬುದನ್ನು ತಿಳಿಸು ಎಂದು ನಮಸ್ಕಾರ ಮಾಡಿದಳು. ಆತ ತನ್ನ ಹೆಸರು ವಿಕ್ರಮನೆಂದು ತಾನು ಜಯಶೇಖರರಾಯನ ಮಗನೆಂದು ಹೇಳುತ್ತಿದ್ದಂತೆಯೇ ನಿಮ್ಮ ಬಗ್ಗೆ ಈಗಾಗಲೇ ಕೇಳಿದ್ದೇನೆ. ನಿಮ್ಮ ಕೀರ್ತಿಯು ಭೂಮಿಯಲ್ಲಿ ಪ್ರಸಿದ್ಧಿಯನ್ನು ಪಡೆದಿದ್ದು 'ಜಪಗಂಪ'ನೆಂದು ಕರೆಯುತ್ತಾರೆ ಎಂಬ ಭಾವನೆಯಿಂದ ಅವನ ಪಾದಗಳಿಗೆ ವಂದಿಸಿದಳು. ಅವಳನ್ನು ವಿಕ್ರಮ ಪ್ರಶ್ನಿಸುವ ಪರಿ ಹಿತಕರವಾಗಿದೆ.

ಮದನನಸಿಯ ಬೆಳಗುವವೊಲು ಮೈಗೆ ಪೂ
ಸಿದೆಯೇಕೆ ಪೊಸಭಸಿತವ ನೀನು

ಚದುರೆ ಕೇಳ್ತನುಪಾಶದವೊಲು ಜಡೆಗ
ಟ್ಟದ ಕಾರಣವ ಪೇಳೆನಗೆಂದ (೮/೧೩)

ಮನ್ಮಥನ ಖಡ್ಗದ ಹಾಗೆ ಹೊಳೆಯುವ ನೀನು ವೈರಾಗ್ಯ ತಾಳಿದ ಹಿನ್ನೆಲೆ ಏನಿರಬಹುದು ನಿನ್ನಲ್ಲಿ ರೂಪ, ಜಾಣ್ಮೆ, ವಿನಯ ಚಿಕ್ಕಪ್ರಾಯವಿದೆ. ನಿನಗೆ ಬೇರೆ ಯಾರೂ ಸಾಟಿಯಿಲ್ಲ ಎಂದು ಮೆಚ್ಚುಗೆಯನ್ನು ವ್ಯಕ್ತಪಡಿಸಿದನು. ಅವಳು ಪ್ರತಿಯಾಗಿ ಉತ್ತರವನ್ನು ನೀಡುವ ರೀತಿ ಮುಖ್ಯವಾಗಿದೆ.

ಅವಧರಿಸೆಲೆ ವಿಕ್ರಮ ಶ್ರೀಧರಪುರ
ದವನಿಪ ಕುಹಳನೆಂಬಾತನ
ಕುವರಿ ವಸಂತೆಯೆಂಬಳ ಸಖಿ ಲಲಿತೆ ನಾ
ನವಳಿಗೋಸುಗಬಂದೆ ತಪಸಿಗೆ (೮/೧೫)

ಲಲಿತೆಯು ತನ್ನ ಪರಿಚಯವನ್ನು ವಿಕ್ರಮ ರಾಜನಿಗೆ ತಿಳಿಸುತ್ತ ತನ್ನ ತಪಸ್ಸಿನ ಕಾರಣವನ್ನು ವಿವರಿಸುವಳು. ವಸಂತೆಯು ಶ್ರೀಮದಪುರದ ಅರಸ ಕುಹಳ ಮತ್ತು ನಳಿನಿ ರಾಣಿಯ ಒಬ್ಬಳೇ ಮಗಳು. ಪ್ರೀತಿಯಿಂದ ಮುದ್ದು ಮಾಡಿ ಬೆಳೆಸಿದ್ದರು. ಅವಳ ತಂದೆ ಮಗಳಿಗೆ ಯಾವುದೇ ಕೊರತೆಗಳಾಗದಂತೆ ಎಚ್ಚರಿಕೆ ವಹಿಸಿದ್ದ. ಇವಳು ಬೆಳೆದಂತೆ ಅತಿ ಚೆಲುವಾಗಿ ಕಂಡಳು. ಅರಸ ಪತ್ನಿಯೊಂದಿಗೆ ವಿಚಾರಿಸಿ ಮದುವೆ ಮಾಡುವ ಪ್ರಸ್ತಾಪ ಮಾಡುತ್ತಾನೆ.

ನಳಿನಿ ಕೇಳ್ನಿನ್ನಣುಗಿಗೆ ವರನಾರೀ ನೆಲ
ದೊಳುಳ್ಳರಸು ಮಕ್ಕಳೊಳೆನೆ
ಮೊಳೆನಗೆ ಮಿನುಗೆ ಬಗ್ಗುಳ್ಳವ ನಿಮ್ಮೆರ್ದೆ
ಗಳವಟ್ಟನಾವನೆಂದಳು ಕೇಳ (೮/೨೦)

ಎಂದು ತಾನೂ ಸಹಿತ ಮಗಳು ವಸಂತೆಗೆ ಮುದ್ದಿನಿಂದ 'ನಿನ್ನಯ ಮನವೊಲಿದರಿಗೀವೆನು' ಎಂದನು. ದ್ರಾವಿಡ, ಕೊಂಕಣ, ಕಾಶ್ಮೀರ, ಖರ್ಪರ, ಕುರು, ಕಾಂಭೋಜ, ವಂಗ, ಗೌವಳ, ಪಾಂಡೆ, ಅಂಗ, ತುಳು, ಲಾಳ, ಮಗಧ, ಕುಂತಳ, ಮಳಯ, ಪಾಂಚಾಳ, ಕೇರಳ, ಸಿಂಧು, ಸಿಂಹಳ, ಮಾಳವ, ಕರ್ಣಾಟ ಮುಂತಾದ ಅರಸ ಮಕ್ಕಳಲ್ಲಿ ನೀ ಹೇಳಿದವರನ್ನೇ ಒಪ್ಪಿಸಿ ಕರೆತರುತ್ತೇನೆ. ನಿನ್ನ ಇಚ್ಛೆ ಏನೆಂಬುದು ಹೇಳಬೇಕೆಂದು ನಗುತ್ತಲೇ ತಿಳಿಸಿದ. ಈ ಮಾತಿಗೆ ವಸಂತೆ ಗಂಭೀರವಾಗಿ ಮೌನವಾದಳು. ತಂದೆ "ಮಗಳೆ ಮಾಕಾಳಿ ದೇವಿಯ ವರದಿಂದೆ ಮಗೊಗೆದೆ ಮಾಕಾಳಿ ಪೇಳ್ದವನಿಗೆ ಬಗೆ ನಮ್ಮ ಮಾತು ಲೆಕ್ಕವೆಯೆಂದು ನುಡಿದನು"(೮/೨೫) ಹೆಣ್ಣಿನ ಮನಸ್ಥಿತಿಯನ್ನು ತಿಳಿಯುವುದು ಬಲುಕಷ್ಟ, ಕಡಲ, ನೆಲದ, ಆಗಸದ ಸ್ಥಿತಿಯನ್ನು ತಿಳಿಯಬಹುದು, ಆದರೆ ಸ್ತ್ರೀಯರು ಕುಟಿಲ, ಕುಹಕ, ಅಟಮಟಗಳ ತಾಣವಾಗಿರುತ್ತಾರೆ. ಅದಕ್ಕಾಗಿ ಮಹಾಕಾಳಿ ದೇವಿಯ ಕೃಪೆಯಿಂದ ನನ್ನ ಆಸೆ ಈಡೇರಿಸುವೆ ಎಂದು ಮಗಳಿಗೆ ತಿಳಿಸಿದನು. ವಸಂತೆಯು "ಸವತಿ ಮಾತಿನ್ನುಂಟೆ ಚೀ ಸುಡೀ ಕಾಯವಳಿದೆದೇನೆಂದಳು"(೮/೨೯) ಹಡೆದವರ ಸಂಕಟ ಸಾಮಾನ್ಯವಲ್ಲ ಮಗಳಿಗೆ ಮೂರ್ಖಳಂತೆ ಮಾತನಾಡುವುದು ಸರಿಯಲ್ಲ ಎಂದು ತಂದೆ ಕುಹಳ ಮಗಳಿಗೆ ಹೇಳಿದನು. ತಾಯಿ ನಳಿನಿಯೂ ತಂದೆಯ ಮಾತನ್ನು ಉಲ್ಲಂಘಿಸದೆ ನಡೆಯಬೇಕೆಂದು ಬೇಡಿಕೊಂಡಳು. ವಸಂತೆಯು ತಾನು ತಂದೆ

ತಾಯಿಯರ ಮಾತನ್ನು ಮೀರುವಳಲ್ಲ. ಆದರೆ ಪ್ರೀತಿಯಿಂದ ಮಹಾಕಾಳಿ ದೇವಿಯು ಕೃಪೆಮಾಡಿದರೆ ಸವತಿಯಾಗಲು ಒಪ್ಪುವುದಿಲ್ಲ ಎಂದಳು. ಹೀಗೆ ತಂದೆ ಮಗಳ ವಾಗ್ವಾದವನ್ನು ಕವಿ ಸೊಗಸಾಗಿ ಚಿತ್ರಿಸಿದ್ದಾನೆ.

ಕುಹಳನೆಂಬ ಅರಸ ತನ್ನ ಮಗಳನ್ನು ಪಡೆದ ಹಿನ್ನೆಲೆ ಇಂತಿದೆ.

ಹಾ ಕುವರಿಯ ಪಡದೆನು ಪಬತಪವಿರ್ದು
ಮಾಕಾಳಿಯ ವರದಿಂ ನಿನ್ನ
ಸಾಕೆಲೆ ಮಗಳೆ ಹೆತ್ತೊಡಲಿಗೆ ತಂಪೀಯ
ದೇಕೆ ಸೋಕವನಾಗಿಪೆಯೆಂದ (೮/೩೩)

ಅರಸ ವಸಂತೆಯು ಮಹಾಕಾಳಿ ದೇವಿಯ ಕೃಪೆಯಿಂದ ಜನಿಸಿದ್ದು, ಹೆತ್ತವರ ಸಂಕಲ್ಪಕ್ಕೆ ಆತಂಕ ತರದೆ ಇರಬೇಕೆಂದನು. ಆದರೂ ಮಗಳು ಮಾತುಮೀರಿ ಹಠದಿಂದ ಹಾಸಿಗೆಯನ್ನು ಹಿಡಿದು ಮೌನವಾದಳು. ಅವಳ ಗೆಳತಿಯರೂ ಆಶ್ಚರ್ಯಪಟ್ಟರು. ಚಿಂತಿಸಿ ಕಣ್ಣೀರಿಟ್ಟರು. ಲಲಿತೆ ಮಾತ್ರ ಇವಳ ಮನದ ಇಚ್ಛೆಯನ್ನು ತಿಳಿದು ಪ್ರಶ್ನಿಸಿದಳು. ವಸಂತೆ ಕಂಡ ಕನಸು ಅದು

ಲಲಿತೆ ಕೇಳ್ಕನಸ ಪಾಳ್ಬಾವಿಯೊಳಾಂ ಪೋಗಿ
ತಲೆಕೆಳಾಗಾಗಿ ಬೀಳ್ವನ್ನೆಗ
ಬಲದೊಳ್ ಜಡೆದಾಳ್ದಳಂಜಬೇಡೆಂದೊಂ
ದಲರಿತ್ತು ತಡಿಗೆತ್ತಿ ತಂದಳು (೮/೪೦)

ಎಂದು ಕಂಡ ಕನಸು ತಿಳಿಸುತ್ತಿದ್ದಂತೆ ಲಲಿತೆ, ಒಳ್ಳೆಯ ಕನಸನ್ನು ಕಂಡಿದ್ದೀಯ "ಬಾವಿಯೊಳ್ ಬಿರ್ದುದಳಲುವ ವನಿತೆಯೊಲ್ ಜೆಡೆಗಟ್ಟಿ ತಪದಿಂದ ಜನನಿಕಾಳಿಯ ನುಡಿಸುವೆನಲರನೆ ನಲ್ಲನ ಛಲ ಗೆಲಿಪೆನಂಜದಿರೆಂದ" (೮/೪೧) ಎಂದು ಭರವಸೆ ನೀಡಿದಳು. ವಸಂತೆಯು ಲಲಿತೆಗೆ ನನ್ನ ಮನಸ್ಸನ್ನು ತಿಳಿದ ಗೆಳತಿಯಾದ ನೀನು ಜನ್ಮದಾತೆಗಿಂತಲೂ ಮೇಲು. ನನ್ನ ಹಠವನ್ನು ಗೆಲ್ಲಲು ನಿನ್ನಿಂದ ಮಾತ್ರ ಸಾಧ್ಯ ಎಂದಳು. ಆ ಕೂಡಲೆ ಲಲಿತೆ ವ್ರತವನ್ನು ಕೈಗೊಂಡು ವಸಂತೆಯನ್ನು ಮನೆಗೆ ಕಳುಹಿಸಿದಳು. ವಸಂತೆಯೂ ಗೆಳತಿಯನ್ನು ಬಿಟ್ಟು ಹೇಗೆ ಇರಲೆಂದು ಹಂಬಲಿಸಿದಳು. ಆ ಕೂಡಲೆ ಮಹಾಕಾಳಿಯ ವನಕ್ಕೆ ಬಂದು ಗೆಡ್ಡೆ ಗೆಣಸು ತಿನ್ನುತ್ತ ಆರು ತಿಂಗಳಿನಿಂದ ಇಲ್ಲಿಯವರೆಗೆ ಕಳೆದಿರುತ್ತೇನೆ. ದೇಹದಂಡಿಸಿ ಫಲವೇನು? ಗೆಳತಿಗೆ ಭರವಸೆ ನೀಡಿದ್ದೇನೆ. ಆ ಮುಗ್ಧಳಿಗೆ ಬರಿ ಮುಖ ಹೇಗೆ ತೋರಿಸುವುದು. ಕಾಳಿಯ ಕೃಪೆಯಿಲ್ಲದ ದೇಹ, ಮನಸ್ಸು ಆತಂಕದಲ್ಲಿದೆ. ವಿಕ್ರಮನ ದರ್ಶನದಿಂದ ಆತಂಕ ಕಡಿಮೆ ಆಗಿದೆ ಎಂದಳು. ವಸಂತೆಯ ಮನಸ್ಸು ಹಾಳಾಗುವ ಮುನ್ನವೇ ಕಾಳಿಕಾದೇವಿಯಿಂದ ವರವನ್ನು ಪಡೆದು ಅವಳ ಹರಕೆಯನ್ನು ಈಡೇರಿಸಲು ಬಂದು ಇಲ್ಲಿದ್ದೇನೆ. ಇನ್ನು ಎಂಟು ದಿನಗಳು ಮಾತ್ರ ಉಳಿದಿವೆ ಎಂದಳು. ವಿಕ್ರಮ ಲಲಿತೆಗೆ ಈ ಮಾತಿಗೆ ಭರವಸೆ ಇತ್ತು. ಇಂದಿಗೆ ನಾಲ್ಕು ದಿನಕ್ಕೆ ಸರಿಯಾಗಿ ನೀನು ಕುಮಾರಿ ವಸಂತೆ ತಾಯಿ ನಳಿನಿ ತಂದೆ ಕುಹಳ ಇವರ ಜೊತೆಯಲ್ಲಿ ಬಾಯೆಂದು ಹೇಳಿಕಳುಹಿಸಿದನು. ಲಲಿತೆ ಪುನಃ ಬಂದು ಈ ಕುಮಾರರು ಏನು ಮಾಡುವರು ಹೇಗೋ ಎನ್ನುತ್ತ ನೋಡಲೆಂದು ತಳಿರಪೊದೆಯಲ್ಲಿ ಅವಿತುಕೊಂಡಳು. ಆ ವನವೇ ವಿರಹ ಸ್ಥಿತಿಯಂತಿತ್ತು.

ವಿಕ್ರಮ ಮಧುರನನ್ನು ಮಹಾಕಾಳಿಯ ಪೂಜೆಗಾಗಿ ಕಮಲದ ಹೂಗಳನ್ನು ತರಲು ಕಳುಹಿಸಿದನು. ಮಹಾಕಾಳಿದೇವಿ ಇರುವ ಅರಣ್ಯ ಸ್ಮಶಾನದಿಂದ ಕೂಡಿತ್ತು. ಅಲ್ಲಿ ಉಗ್ರರೂಪದ ಭಯಾನಕ ಪ್ರಸಂಗಗಳು ಇದ್ದವು. ಸ್ಮಶಾನದಲ್ಲಿ ನರಿ, ಭೂತ, ಡಾಕಿಣಿಯರು, ಮರುಳುಗಳು, ಶಾಕಿನಿಯರು, ಮಹಾಸತಿಯರು, ಕಾಡು ಸಿದ್ದರು ಮುಂತಾದವರಿದ್ದು, ಭೀಕರವಾದ ಶಬ್ದವು ತುಂಬಿತ್ತು. ಇಂತಹ ಸ್ಮಶಾನದ ಮಧ್ಯಭಾಗದಲ್ಲಿ ಮಹಾಕಾಳಿ ದೇವಿಯ ಮಂದಿರವು ರತ್ನದ ಕಳಸದಂತೆ ಕಂಗೊಳಿಸುತ್ತಿತ್ತು. ಮಹಾಕಾಳಿಯು ನಾಲ್ಕು ತೋಳಿನ ತಲೆ ಚೆಲ್ಲುವರಿದ ಕೂದಲು, ಹುಬ್ಬು, ಗಂಟಿಕ್ಕಿದ ಮುಖ, ಕೆಂಗಣ್ಣು, ಕೊರಳಲ್ಲಿ ಕರಿನಾಗರ, ಎಲುಬುಗಳ ರುಂಡಮಾಲೆಗಳು, ರಕ್ತದ ತಿಲಕ ಅಲ್ಲಿ ಹೆಡೆ ಎತ್ತಿ ಆಡುವ ಸರ್ಪಗಳ ತೊಡಿಗೆ ಶೋಭಿಸುವಂತಿದ್ದವು. ವಿಕ್ರಮನು ಭಕ್ತಿಯ ಕಿಚ್ಚಿನಿಂದ ಏನನ್ನೂ ಹೇಳದೆ ಕಂಬನಿಯಿಂದ ಕಾಳಿಯ ಪಾದಕ್ಕೆ ಮಣಿದನು.

ವಿಕ್ರಮ ಮಹಾಕಾಳಿಯನ್ನು ಸ್ಮರಿಸುತ್ತ ಹೊಗಳುವ ಪರಿ ವಿಶೇಷವಾಗಿದೆ. "ಜಗದ ಒಡೆಯಳೆ, ವೇದದ ತಾಯೆ, ಭಕ್ತರ ಇಚ್ಚೆ ಪೂರೈಸುವಳೆ ರಾಕ್ಷಸರವೈರಿಯೆ, ಮಾತೆ, ಅಂಬಿಕೆ, ಸಾವಿತ್ರಿ ರಕ್ತರಣಪ್ರಿಯೆ, ವೀಣಾವತಿ, ಮಾಧವಿ, ಯಕ್ಷಿಣಿಯೆ, ಕಿನ್ನರಕುವರಿಯೆ, ಲಲಿತೆ, ಸುಮನೆ, ಸುರಸೇವಿತೆ, ಸಕಲ ಸೌದಾಮಿನಿ, ವಜ್ರೇಶ್ವರಿ, ವಾಣಿ, ಯೋಗಿಣಿ, ಸುಕ್ಷೇಮಾಮೃತೆ, ರಸಲಾವಣ್ಯ ಸೌಂದರಿ, ಕಮಲೆ, ಕಾಪಾಲಿನಿ, ಏಕಾಕ್ಷರಿ, ನಂದಿನಿ, ಚಂಡಿ, ಅದ್ರಿಜೆ, ರೌದ್ರೆ, ವರದೆ, ತ್ರಿಪುರಿ, ಪರಮೇಶ್ವರಿ, ಖಚರಿ, ಕಾಮಾಕ್ಷಿ, ಕ್ಷೇಮಂಕರಿ, ಶಂಕರಿ, ಶಾಂಭವಿ, ಶಬರಿ, ಜನನಿ, ಜಗನ್ಮೋಹಿನಿ, ಮಹಾಕಾತ್ಯಾಯಿನಿ, ದೇಪಭೂಪನದಾತಾರೆ, ಭೈರವಿ, ಭ್ರಮರಾಣಿ, ಭಾರ್ಗವಿ, ಮಂಗಳೆ ಮಹಾಕಾಳಿ" (೯/೩೯-೪೫) ಮುಂತಾದ ಹೆಸರಿನಿಂದ ಸ್ತುತಿಸುತ್ತಾ ಇದ್ದಾಗ ದೇವಲೋಕದಲ್ಲಿ ಅಮರರು ವಿಕ್ರಮನ ದೇವಿಸ್ತುತಿಯನ್ನು ಗಮನಿಸಿ ದಯೆಪಾಲಿಸುವಳೋ ಇಲ್ಲವೋ ಎಂಬ ಆತಂಕದಲ್ಲಿದ್ದರು. ದೇವಿ ಒಲಿಯದಿದ್ದಾಗ ಆತುರದಿಂದ ಆತ್ಮಾಹುತಿಯಾಗವ ದೃಶ್ಯ ಪವಾಡ ಸದೃಶ್ಯವಾಗಿದೆ.

> ಆ ನುಡಿಗತಿ ಹೆಚ್ಚಿ ಜಸಗಂಪ ಬಂದು ಸು
> ಮ್ಮಾನದಲರಿಗತ್ತರಿಗಿತ್ತ
> ಬಾನಡೆಯರು ನೋಳ್ಪಜ್ಜುಗದಿಂದ ವಿ
> ಮಾನದೊಳೈತಂದರಸಿಯಳೆ (೯/೪೭)

ಮಹಾಕಾಳಿಯ ಸನ್ನಿಧಿಯಲ್ಲಿ ವಿಕ್ರಮ ತಲೆಯನ್ನು ಅರಿಗತ್ತರಿಗೆ ಇಟ್ಟನು. ಆಗ ಅಮರರು ವಿಮಾನದಲ್ಲಿ ಅಲ್ಲಿಗೆ ಬಂದರು. ವಿಕ್ರಮನ ರುಂಡ ದೇವಿಯ ಪಾದಕ್ಕೆ ಬಿದ್ದು ನಿನ್ನನ್ನು ನಂಬಿ ವಸಂತೆಗೆ ವರಕೊಡುವ ಭರವಸೆಯಿತ್ತೆ. ಆದರೆ ನನ್ನ ಮಾತನ್ನು ಸುಳ್ಳಾಗಿಸುವುದು ನಿನಗೆ ಸರಿಯೆನ್ನಿಸುವುದೇ ಎನ್ನುತ್ತ ವಸಂತೆಯ ತಂದೆ ದೈವಸಂಕಲ್ಪದಂತೆ ಮದುವೆ ಮಾಡಲು ನಿರ್ಧರಿಸಿದ್ದ. ಆದರೆ ಈ ಮಾತು ತಪ್ಪಿತಲ್ಲ. ಈ ಬಗ್ಗೆ ವಸಂತೆಯ ಗೆಳತಿ ಲಲಿತೆ ಮಾಡಿದ್ದ ಪ್ರತಿಜ್ಞೆಯೂ ವ್ಯರ್ಥವಾಯಿತು. ಈ ಎಲ್ಲಾ ಕಾರಣಗಳಿಂದ ನಾನೊಬ್ಬನೇ ಪ್ರಾಣವನ್ನೇ ಅರ್ಪಿಸಿ ಬೇಡಿಕೊಳ್ಳುತ್ತಿದ್ದೇನೆ. ಈಗಲಾದರೂ ವಸಂತೆಯ ಮದುವೆ ಸಂಕಲ್ಪ ಪೂರೈಸಿ ನಮ್ಮೆಲ್ಲರನ್ನು ಕಾಪಾಡು ತಾಯೆ ಎಂದು ವಿಕ್ರಮ ಮಹಾಕಾಳಿಯ ಹತ್ತಿರ ಪರಿತಪಿಸುತ್ತಿದ್ದನು. ಇದೆಲ್ಲವನ್ನು ಗಮನಿಸಿದ ಲಲಿತೆ ದೇವಾಲಯದ ಹತ್ತಿರದಲ್ಲಿ ಮರೆಯಾಗಿ ನಿಂತು ಮೂರ್ಛೆ ಹೋದಳು.

ಇದೆಲ್ಲವನ್ನು ಗಮನಿಸುತ್ತಿದ್ದ ದೇವಿಯು ಕಂಪಿಸಿದಳು. ನಾನಾ ಪ್ರಾಣಗಳು ಬಲಿಯಾಗಿದ್ದು ಶೂಲವೆಣಗಳು ಹಾಡುವ, ಕುಣಿಯುವ, ಹೊಗಳುವ, ಆಲಿಸುವ ದೃಶ್ಯ ಆಶ್ಚರ್ಯವನ್ನು ಮೂಡಿಸುವಂತಿತ್ತು. ಮಧುರನೂ ಸಹಿತ ಉರಿಗಿಚ್ಚಿಗೆ ಎದುರಾದನು. ಮಧುರನು ವಸಂತೆ ಎತ್ತ, ಗೆಳತಿ ಲಲಿತೆ ಎತ್ತ. ಇವರಿಗಾಗಿ ಪ್ರಾಣತ್ಯಾಗ ಮಾಡಿದ ವಿಕ್ರಮನೆತ್ತ, ತಾನು ತನ್ನ ಪರಿವಾರ ತ್ಯಜಿಸಿ ಗೆಳೆಯನೊಂದಿಗೆ ಬಂದೆ. ಆದರೆ ಇವರೆಲ್ಲರನ್ನು ಅಗಲಿ ತಾನೇಕೆ ಬದುಕಬೇಕೆಂದು ದೇವಿಯ ಮುಂದೆ ಬೇಡಿಕೊಂಡನು.

ಇದೆಲ್ಲವನ್ನು ಅವಲೋಕಿಸುತ್ತಿದ್ದ ಮಹಾಕಾಳಿದೇವಿಯು ವಿಕ್ರಮನನ್ನು ಸ್ಪರ್ಶಿಸಿ ಬದುಕಿಸಿ ಆಶೀರ್ವದಿಸಿದಳು. ಅಲ್ಲೇ ಇದ್ದ ಶಾಕಿನಿಯರು, ಡಾಕಿನಿಯರು, ಮರುಳ್ಗಳು, ವೀರರು, ದೇವಿಯನ್ನು ಹೊಗಳಿದರು. ಅಮರರು ಹೂಮಳೆಗರೆದು ಶುಭಹಾರೈಸಿದರು. ಲಲಿತೆ ಆಶ್ಚರ್ಯಚಕಿತಳಾಗಿ ಸಂಭ್ರಮಿಸಿದಳು. ಮಹಾಕಾಳಿದೇವಿ ವಿಕ್ರಮನನ್ನು ನಿನ್ನ ಆಸೆ ಯಾವುದು ಎಂದಳು. ಮಧುರ ಮತ್ತು ವಸಂತೆಯರಿಬ್ಬರಲ್ಲಿ ಯಾರನ್ನು ಬದುಕಿಸಲಿ ಇಬ್ಬರಲ್ಲಿ ಒಬ್ಬನನ್ನು ಸೂಚಿಸಲು ಆಜ್ಞಾಪಿಸಿದಳು. ಕೂಡಲೇ ವಿಕ್ರಮ ವಸಂತೆಯ ಸಂಕಲ್ಪ ಈಡೇರಲೆಂದು ವಿನಂತಿಸಿದ. ದೇವಿಯು ಆಶೀರ್ವದಿಸಿದಳು. ವಿಕ್ರಮನ ಭಕ್ತಿಯ ಪರಾಕ್ರಮವನ್ನು ಅಮರರು ಪ್ರಶಂಸಿದರು. ದೇವಿಯು ಸಂಜೀವಿನಿಯಿಂದ ಮಧುರನನ್ನೂ ಬದುಕಿಸಿದಳು. ವಿಕ್ರಮ ಮಧುರರಿಬ್ಬರು ಸಂತೋಷದಿಂದ ದೇವಿಗೆ ನಮಸ್ಕರಿಸಿದರು. ಈ ಎಲ್ಲ ವಿಷಯವನ್ನು ಲಲಿತೆ ವರಸಂಕಲ್ಪ ಕೈಗೊಂಡಿದ್ದ ವಸಂತೆಗೆ ವಿವರಿಸಿದಳು. ವಸಂತೆಯು ತಂದೆ ತಾಯಿ, ಗೆಳತಿಯೊಂದಿಗೆ ದೇವಿಗೆ ನಮಸ್ಕರಿಸಿ ತಮಗಾಗಿ ಪ್ರಾಣತ್ಯಾಗ ಮಾಡಿ ದೇವಿಕೃಪೆಗೆ ಪಾತ್ರರಾದ ವಿಕ್ರಮ ಮಧುರಕುಮಾರರನ್ನು ಪ್ರಶಂಸಿದಳು. ಅಲ್ಲೇ ಇವರಿಬ್ಬರ ಪಾದಗಳಿಗೆ ವಸಂತೆಯ ಪರಿವಾರವೆಲ್ಲವೂ ವಂದಿಸುತ್ತ ಭಾವುಕರಾದರು. ವಿಕ್ರಮ ವಸಂತೆಯನ್ನು ಕುರಿತು ಹಿರಿಯರೊಂದಿಗೆ ಮೂರ್ಖರಂತೆ ನೀತಿಬಾಹಿರವಾಗಿ ವರ್ತಿಸಬಾರದು ಆದರೆ ಅದು

> ಗುರುವಿನೆಡೆಯ ಮಚ್ಚರ ಪತಿಯೆಡೆಯನಾ
> ದರ ಪಡದವರೆಡೆಯಲಿ ವಾಸಿ
> ತರುಣಿ ಕೇಳೊಡೆಯನೆಡೆಯಲಿ ಗರ್ವಕುಂಭೀ
> ನರಕವಿಹದ ಸುಖದಳಿವೆಂದ (೧೦/೫೨)

ಗುರು, ಪತಿ, ಹಡದವರಲ್ಲಿ ಕೈಗೊಂಡ ಪ್ರತಿಜ್ಞೆ ಒಳ್ಳೆಯದೇ ಆಗುತ್ತದೆ. ಇದು ಒಡೆಯನಲ್ಲಿ ಗರ್ವ ನಡೆಸಿದರೆ ನರಕ ಸೇರಿ ಸುಖ ತೆಗಳಿದಂತೆ ಆಗುತ್ತದೆ ಎಂದು ಮಾರ್ಮಿಕವಾಗಿ ಪತ್ನಿಗೆ ಹೇಳುತ್ತ "ಜಪತಪವ್ರತನೋಂಪಿ ದಯದಾನವೇನ ನೆಗಳ್ದಡೆ ಫಲವೇನು ನೀನಜೆ ಪತಿಯಾಜ್ಞ್ಮ ಪಿತೃವಚನವ ಮೀಜೆ ಜೇನುಂಡು ನೀರ್ಗುಡಿದವೊಲೆಂದ" (೧೦/೫೩)

ವಸಂತೆ ವಿಕ್ರಮನನ್ನು "ನಿನ್ನಸುವನು ಮೆಚ್ಚಿಸಿಯೆನ್ನ ಜೀವನವನ್ನಿತ್ತೆ ನಿನ್ನ ವಚನವಿಂದು ನನ್ನಿಯಾಯಿತು"(೧೦/೫೫) ಎಂದು ನಮಸ್ಕಾರ ಮಾಡಿದಳು. ವಿಕ್ರಮ ದೇವಿಗೆ ನಮಸ್ಕರಿಸಿ, ಎದ್ದು ನನ್ನ ಮನದ ಇಚ್ಛೆಯನ್ನು ಈಡೇರಿಸು ಎಂದನು. ಅದು "ಮಧುರನ ವರಿಸೆಂದು ಈ ತಳೋದರಿಗೆ ನೇಮಿಪುದೆನೆ"(೧೦/೬೦) ಈ ಮಾತಿಗೆ ದೇವಿ ಒಪ್ಪಿದಳು. ವಿಕ್ರಮ ಅವರ ವಿವಾಹ ನೆರವೇರಿಸಲು "ನಳಿನಿ ಕುಹಳ ಸಹಿತೊಲಿದು ವಿಕ್ರಮ ಸೇಸೆದಳಿದನಾ ಮಧುರ

ಬಸಂತೆಗೆ"(೧೦/೬೪) ಈ ಮದುಮಕ್ಕಳು ವಿಕ್ರಮನ ಕಾಲ್ಗೆರಗಿದರು. ವಿಕ್ರಮ ಅವರೆಲ್ಲರನ್ನು ಬೀಳ್ಕೊಟ್ಟು ವನದಲ್ಲಿ ಮುನ್ನಡೆದನು.

**೫.೧.೪. ಸುರಭಿಶೇಖರನ ವೃತ್ತಾಂತ**

ಸೊಬಗಿನ ಸೋನೆಯಲ್ಲಿ ೧೧ರಿಂದ ೧೩ನೇ ಸಂಧಿಯವರೆಗೆ ಒಟ್ಟು ೨೬೬ ಪದ್ಯಗಳಲ್ಲಿ ಈ ವೃತ್ತಾಂತವು ವಿಸ್ತರಿಸಲ್ಪಟ್ಟಿದೆ. ಕವಿ ಅರಣ್ಯದ ವರ್ಣನೆಯನ್ನು ಬಹು ವಿಸ್ತಾರವಾಗಿ ಚಿತ್ರಿಸಿದ್ದಾನೆ. ಬೇಡರು ವಿವಿಧ ಪ್ರಾಣಿಗಳನ್ನು ಬೇಟೆಯಾಡುತ್ತಾ ಹಂದಿಯನ್ನು ಹಿಂಬಾಲಿಸುತ್ತಾ ಆಯಾಸಗೊಂಡರು. ಹಂದಿಯು ಬೇಡರ ಪಡೆಗೆ ಭಯವನ್ನು ಉಂಟುಮಾಡುವಂತೆ ವರ್ತಿಸಿತು. ಅದು "ಸೊಕ್ಕಿದೆಕ್ಕಲ ಹರಪಾರ್ಥರ ಕದನದ ಮೂಕ ದಾನವನಿದು ಇದೆಯಲ್ತೆ ತೀವಿ ನಾಯ್ಗಳ ಹಾಸ ನಿಟ್ಟಗೊಂಡೊದಗೆಂದುಱುಬಿತು ಶಬರಬಲ"(೧೧/೬೨) ಹಂದಿಯ ಆರ್ಭಟಕ್ಕೆ ಅರಣ್ಯದಲ್ಲಿದ್ದ ಪ್ರಾಣಿಗಳು ದಿಕ್ಕಾಪಾಲಾಗಿ ಚದುರಿದವು. ಸೊಕ್ಕಿದ ಹಂದಿಯನ್ನು ವಿಕ್ರಮನು ಬಾಣದಿಂದ ಹೊಡೆದು ಉರುಳಿಸಿದನು. ಉರುಳಿದ ಹಂದಿಯ ಹೊಟ್ಟೆಯಿಂದ ವಿಶಿಷ್ಟವಾದ ಪುರುಷನು ಹೊರಬಂದನು. ಆ ವ್ಯಕ್ತಿಯು ಭಸ್ಮ, ರುದ್ರಾಕ್ಷಿ, ಕುಂಡಲ, ಜಡೆಗಳನ್ನು ಹೊಂದಿದ್ದು ಆಶ್ಚರ್ಯವನ್ನು ಉಂಟುಮಾಡುವಂತೆ ಕಂಗೊಳಿಸಿದನು. ಇಂತಹ ವ್ಯಕ್ತಿಯ ವೃತ್ತಾಂತ ತಿಳಿಯಲು ಜಸಗಂಪ (ವಿಕ್ರಮ)ನು ಕುತೂಹಲಭರಿತನಾದನು. ಆ ವ್ಯಕ್ತಿಗೆ ನಮಸ್ಕರಿಸಿ ನೀನಾರು ಎಂಬುದು ತಿಳಿಸು ಎಂದನು ಆತ ನಾನೊಬ್ಬ 'ವನಜ'ನೆಂದನು. ವಿಕ್ರಮ ಈ ಕಾಡಿನಲ್ಲಿ ಭೀಕರವಾದ ಹಂದಿಯ ಆಕಾರ ಏಕೆ ಬಂದಿತು. ಶಿವನ ಸೇವೆ ಏಕೆ ತಪ್ಪಿತು ತಿಳಿಸು ಎಂದನು.

ಸುರಭಿಶೇಖರ ತನ್ನ ವೃತ್ತಾಂತವನ್ನು ವಿಕ್ರಮನಿಗೆ ತಿಳಿಸುತ್ತಾ ಇದು ಸಾಮಾನ್ಯವಾದ ಕಥೆಯಲ್ಲ. ಹೊಟ್ಟೆಪಾಡಿಗಾಗಿ ಜೀವಿಸುವ ಬಡವರ ಹುಲುದೈವಗಥೆಯಲ್ಲ ಶಿವನ ಕಥೆಯನ್ನು ತಿಳಿಸುವೆ ಎಂದನು. ಮುನಿಶ್ರೇಷ್ಠರು, ವಿಷ್ಣು, ಬ್ರಹ್ಮ, ಇಂದ್ರ ಮುಂತಾದವರು ಮುಖ್ಯವೆಂದು ಪ್ರಶಂಸಿಸುವರು. ಆದರೆ ನನಗೆ ಪಾರ್ವತಿ, ಗಂಗೆ, ಶಿವ ಶ್ರೇಷ್ಠವೆಂದು ಹೇಗೆ ಬಣ್ಣಿಸಲಿ ಎನ್ನುತ್ತಾ ತಾನು ಕೈಲಾಸದಲ್ಲಿ ಹೂವಾಡಿಗನಾಗಿದ್ದು ಪಾರ್ವತಿಗಾಗಿ ಸುವಾಸನೆಯನ್ನು ಬೀರುವಂತಹ ಹಲವು ಫಲಗಳನ್ನು ನೀಡುವ ಮಂದಾರದ ಪುಷ್ಪಗಳನ್ನು ದಿನನಿತ್ಯವೂ ತಂದುಕೊಡುವ ಸೇವೆಯನ್ನು ಮಾಡುತ್ತಿದ್ದೆನು. ಹೊಸದಾದ ಹೂಗಳನ್ನೇ ಮೊದಮೊದಲು ನಿಷ್ಠೆಯಿಂದ ತರುತ್ತಿದ್ದೆ. ಅದಕ್ಕೆ ಶಿವ ನನ್ನನ್ನು 'ಸುರಭಿಶೇಖರ' ಎಂದು ಕರೆದ. ಪಾರ್ವತಿಯೂ ಈತನ ನಿಷ್ಠೆಯನ್ನು ಮೆಚ್ಚಿ ಶಿವನಿಗೆ ಹೇಳಿ ಪ್ರಮಥ ಪ್ರಭುಗಳಲ್ಲಿ ವಿಶಿಷ್ಟವಾದ ಪದವಿಯನ್ನು ಮಾಡಿಸಿದಳು. ಶಿವನೂ ಕೂಡ ಸುರಭಿಶೇಖರನಿಗೆ ಮೂರು ಲೋಕಗಳಲ್ಲಿಯೂ ಯಾವುದೇ ಕುಂದು ಕೊರತೆಯಾಗದಂತೆ ಪ್ರಸಿದ್ಧಿಗೆ ಬರುವಂತೆ ಕಾಪಾಡಿದ. ಒಮ್ಮೆ ಪಾರ್ವತಿಯು "ನೇಹಗಲಹದಿ ಕಜೆಗೊರಲನೊಳು ಮುನಿಯೆ"(೧೨/೩೧) ಸುರಭಿಶೇಖರ ಅವರ ಮನಸ್ಸನ್ನು ತಿಳಿದು ಒಳ್ಳೆಯವನಾಗಿದ್ದ. ಗಣಪ, ಷಣ್ಮುಖ, ವೀರಭದ್ರ ಮುಂತಾದವರ ಹಾಗೆ ನಾನು ಶಿವನಿಂದ ಒಳ್ಳೆಯವನೆನಿಸಿಕೊಂಡು ಇರುತ್ತಿದ್ದೆ. ಹೀಗಿರುವಾಗ ಒಂದು ಹಗಲು ಪ್ರತಿದಿನದಂತೆ ಪಾರ್ವತಿಗೆಂದು ಮಂದಾರದ ಹೂವುಗಳನ್ನು ತರುತ್ತಿರುವಾಗ ಗಂಗೆಯು ಕಂಡಳು. ಗಂಗೆ ತನ್ನ ಸಖಿ ತರಂಗೆ

ಎಂಬುವಳನ್ನು ಕಳುಹಿಸಿ ಸುರಭಿಶೇಖರನು ತರುತ್ತಿದ್ದ ಮಂದಾರದ ಅರಳನ್ನು ತರಲು ಹೇಳಿದಳು. ಪಾರ್ವತಿ ಮತ್ತು ಗಂಗೆಯರಿಬ್ಬರ ಮಧ್ಯೆ ಇಕ್ಕಟ್ಟಿಗೆ ಸಿಲುಕಿದ ಸುರಭಿಶೇಖರನ ಸ್ಥಿತಿಯು ಮಾನಸಿಕ ದ್ವಂದ್ವಕ್ಕೆ ಒಳಗಾಯಿತು. ನನ್ನ ಮನಸ್ಸು

> ಅಲ್ಲಹುದೆನಬಾರದು ಪೋಗಬಾರದು
> ನಿಲ್ಲಬಾರದು ಬರಬಾರದು
> ಬಿಲ್ಲಾಂತು ಬೇಡ ಮುಂದಿರೆ ಪಿಂತೆ ಪುಲಿಯಿರ್ದ
> ಪುಲ್ಲೆಯೊಲಾಂ ಕೂಳ್ಗುದಿಗೊಂಡೆ (೧೨/೩೭)

ನನ್ನ ಮನಸ್ಸು ಬಿಲ್ಲು ಹಿಡಿದ ಬೇಡನನ್ನು ಹುಲಿ ಬೆನ್ನಟ್ಟಿದ್ದ ಜಿಂಕೆಯಂತಾಯಿತು. ಗಂಗೆಯ ಮಾತಿಗೆ ಅಲ್ಲಿಗೆ ಹೋಗದಿದ್ದರೆ ವೈರತ್ವ ಬೆಳೆಯುತ್ತದೆ. ಇದು ಪಾರ್ವತಿಗೆ ತಿಳಿದರೆ ಕೋಪಿಸಿಕೊಳ್ಳುತ್ತಾಳೆ. ಹೀಗೆ ಹಲವು ತೆರನಾದ ಚಿಂತೆಯಲ್ಲಿದ್ದನು.

ಸುರಭಿಶೇಖರ ಗೊಂದಲದ ಮನಸ್ಥಿತಿಯಲ್ಲಿ ಮನಸ್ಸನ್ನು ಗಟ್ಟಿಮಾಡಿಕೊಂಡು ತರಂಗೆಗೆ ಹೇಳುತ್ತಾನೆ. "ಮಂದಾರದ ಪುಲ್ಲಾಳಿಯನಗಜೆಗೆ ಕೊಟ್ಟು ನಾನಲ್ಲಿ ನಿಲ್ಲದೆ ಬಹೆನೆಂದು"(೧೨/೩೯) ನುಡಿಯುತ್ತಾ "ಕೇಡಡಸುವ ಕಾಲಕೊದಗಿರ್ದ ಪರುಷ ಕಬ್ಬೊನ್ನಕ್ಕಮೃತರಸ ದೊರಕಿರೆ ವಿಷವಪ್ಪುದೀ"(೧೨/೪೦) ಎಂದು ಮಾರ್ಮಿಕವಾಗಿ ತರಂಗೆಗೆ ಹೇಳಿದನು. ತರಂಗೆಯು ಸುರಭಿಶೇಖರನನ್ನು ಗದರಿಸಿದಳು. ನಿನ್ನಿಂದಲೇ ಹೇಳಿಸಿ ಗಂಗೆ ಆ ಪ್ರೀತಿಯ ಮಂದಾರ ಹೂವನ್ನು ಶಿವನಿಂದ ಪಡೆಯಲೆಂದು ಹೇಳಿ ಕಳುಹಿಸಿದ್ದಾಳೆ ಅದಕ್ಕೆ ನೀನು ಬರದೆ ಗಂಗೆಗೆ ಬರೀ ಮುಖ ತೋರಿಸಲು ಬರುವೆಯಾ ಆ ಮಂದಾರದ ಅರಳನ್ನು ಪಾರ್ವತಿಗೆ ಕೊಟ್ಟು ಗಂಗೆಯನ್ನು ತಿರಸ್ಕರಿಸುವೆಯಾ, ಶಿವನ ಮುಡಿಯಲ್ಲಿ ಇರುವ ಗಂಗೆಗಿಂತ ತೊಡೆಯಲ್ಲಿರುವ ಪಾರ್ವತಿಯೇ ಅಧಿಕಳಾದಳೇ ಹೇಳು ಎಂದು ತರಂಗೆಯು ಒತ್ತಾಯಿಸಿದಳು.

ಸುರಭಿಶೇಖರ ಡೋಲಾಯಮನಸ್ಕನಾಗಿ ತರಂಗೆಗೆ ಹೇಳುತ್ತಾನೆ. ನೀನು ಹೇಳುವ ಮಾತು ನ್ಯಾಯವೆ. ನನ್ನಲ್ಲಿ ಅವರ ಬಗ್ಗೆ ಅಂತಹ ತಾರತಮ್ಯವಿಲ್ಲ. ಇವರಿಬ್ಬರೂ ತಾಯಿಯ ಸ್ಥಾನದಲ್ಲಿದ್ದಾರೆ. ಪಾರ್ವತಿಯ ಸಖಿಯರಿಗೆ ಎಲ್ಲಿ ಕಾಣಿಸುವೆನೊ ಎಂಬ ಭಯದಿಂದ ಸುತ್ತಲೂ ನೋಡುತ್ತ ಗಂಗೆಯು ಇದ್ದ ಅರಮನೆಗೆ ಬೆಚ್ಚುಮಿಗದಂತೆ ಹೊಕ್ಕನು. ಅಲ್ಲಿ ಗಂಗಾಮಾತೆಯ ಮಹಿಮೆಯನ್ನು ಕಂಡು ಸಂಭ್ರಮಿಸಿದನು. ಗಂಗೆಯನ್ನು ಪೂಜಿಸುವ ನಾರಿಯರು, ದಿಕ್‌ದೇವತೆಗಳು, ಶ್ರುತಿಗಳು, ತ್ರಿದಶರು, ನರನಾಗಮುನಿಗಳು, ವಿಮಳಾಂಗಿಯರು ಅಲ್ಲಿದ್ದರು. ಸುರಭಿಶೇಖರ ಗಂಗೆಗೆ ನಮಸ್ಕರಿಸಿ ಮಂದಾರದ ಪುಷ್ಪವನ್ನು ಕೊಟ್ಟನು. ಗಂಗೆಯು ಸಂತೋಷದಿಂದ ಸುರಭಿಶೇಖರನಿಗೆ ಉಡುಗೆ ತೊಡುಗೆಗಳನ್ನು ಕೊಟ್ಟು ಕಳುಹಿಸಿದಳು. ಗಂಗೆಯಿಂದ ಬೀಳ್ಕೊಂಡ ಸುರಭಿಶೇಖರ ಪಾರ್ವತಿಯನ್ನು ಕಾಣಲು ಹೋಗುತ್ತಾನೆ. ಪಾರ್ವತಿಯ ಹತ್ತಿರಕ್ಕೆ ಹೋಗುವಾಗ ಭಯ ಚಿಂತೆಯಿಂದ ಬಸವಳಿದಿದ್ದನು. ಪಾರ್ವತಿಯ ಸಖಿ ಕುಮುದೆ ಎಂಬುವಳನ್ನು ಮೊದಲು ಕಾಣುತ್ತಾನೆ. ಪಾರ್ವತಿ ಎಲ್ಲಿದ್ದಾಳೆ ಏನಾದರು ಸಮಾಚಾರವಿದೆಯೇ ಎಂದು ಪ್ರಶ್ನಿಸಿದನು. ಕುಮುದೆ ನೀನೆಲ್ಲಿಗೆ ಹೋಗುವೆ ಹೇಳು ಎಂದಾಗ ಸುರಭಿಶೇಖರ ಮಾತನಾಡದೇ ಆಯಾಸದಿಂದ ಕುಳಿತನು. ಪಾರ್ವತಿಯು ಮಕರಣಿ

ಎಂಬ ಮಾಲೆಗಾತಿಯನ್ನು ಕಳುಹಿಸಿ ಸುರಭಿಶೇಖರನನ್ನು ಕರೆಯಲು ಹೇಳಿದರೆ ಬಾರದಿದ್ದಕ್ಕಾಗಿ ಸಿಟ್ಟಾಗಿದ್ದಾಳೆ ಎಂದು ಕುಮುದೆಯು ಹೇಳಿದಳು.

ಗಿರಿಜೆಗಾಗಿ ಮೀಸಲಾಗಿ ತಂದಿದ್ದ ಮಂದಾರದ ಹೂವನ್ನು ಬೇರೆಯವರಿಗೆ ಏಕೆ ಕೊಟ್ಟೆ... ನೀನು ಯಾರು, ಎಲ್ಲಿಯ ಗಂಗೆ, ಹುಚ್ಚುತನದಿಂದ ವರ್ತಿಸಿದ್ದೀಯ ಎನ್ನುತ್ತಾ ಸುರಭಿಶೇಖರನಿಗೆ ಮಾತನಾಡಲು ಹೇಳಿದಳು. ಸುರಭಿಶೇಖರನ ಮನಸ್ಸು ಕುರಿತು ಕವಿಯ ವರ್ಣನೆ ಇಂತಿದೆ.

ಕರಗಿದೆನೊ ಕಟ್ಟನೆಯರೆಬೆಂದ ಮು
ಳ್ದೊರಡೊ ಸೊಡರ್ಗುಡಿಯಾದೆನೊ
ಸೊರಕಿತ್ತ ವೀಣೆಯೊ ಪಗಲ್ದಿಂಗಳೊವೊ
ಜ್ಜರ ವೆಟ್ಟಾದೆನೊ ಉಸುರ್ಗೆಟ್ಟೆನೊ (೧೨/೬೯)

ಕುಮುದೆಯು ಸುರಭಿಶೇಖರನಿಗೆ ಪಾರ್ವತಿಯನ್ನು ಕಡೆಗಣಿಸಿ ಗಂಗೆಗೆ ಮಂದಾರ ಹೂವನ್ನು ಕೊಟ್ಟಿದ್ದು ತಪ್ಪು. ಹಿಮವಂತನ ಮಗಳಾದ ಪಾರ್ವತಿ ದಯಾಹೀನಳಲ್ಲ. ಭಯಪಡದೆ ಹತ್ತಿರಕ್ಕೆ ಹೋಗಿ ಮಾತನಾಡು ಪಾರ್ವತಿಯ ಹತ್ತಿರ ತಾತ್ಸಾರದಿಂದ ವರ್ತಿಸಬೇಡ ಎಂದು ಉಪದೇಶವನ್ನು ಮಾಡಿದಳು. ಕುಮುದೆಯು ತಾನು ಭೇಟಿಯಾದ ವಿಷಯವನ್ನು ಪಾರ್ವತಿಗೆ ಹೇಳದಂತೆ ಇರಲು ಹೇಳಿದಳು. ಸುರಭಿಶೇಖರ ಪಾರ್ವತಿಯು ಇರುವ ಮಂದಿರಕ್ಕೆ ಹಸಿದ ಪ್ರಾಣಿಯಂತೆ ಹೊಕ್ಕನು. ಕವಿ ಈ ಪ್ರಸಂಗವನ್ನು "ದೇವಿಯ ಕೋಪಕ್ಕೆ ಪಕ್ಕಾಗಿರ್ದ ಮನೆಯನು ಲೆಕ್ಕಿಸಲ್ ಮುಂಕೂಪರು ಕೆಡೆಕೆಳೆ ಪಗೆಯಕ್ಕೆಂಬ ನಾಣ್ಣುಡಿ ಪುಸಿಯುಂಟೆ"(೧೨/೩೭) ಎಂದು ಪ್ರಶ್ನಿಸುತ್ತಾನೆ. ಇಲ್ಲಿ ರಾತ್ರಿ ಕಂಡ ಬಾವಿಗೆ ಹಗಲೇ ಬಿದ್ದರು ಎಂಬಂತೆ ಆಯಿತು. ಸುರಭಿಶೇಖರನು ಆತಂಕದಲ್ಲಿದ್ದಾಗ ಕೆಲವರು ಮುಖ ನೋಡುವರು, ನಗುವರು, ಕಣ್ಣೀರಿಡುವರು, ಹತ್ತಿರ ಬಂದು ಹೋಗುವರು, ಮನಸ್ಸನ್ನು ಕೆಡಿಸುವರು, ಮೆಲ್ಲಮೆಲ್ಲನೆ ಮಾತಾಡಿಕೊಳ್ಳುವರು ಹೀಗೆ ವಿಭಿನ್ನವಾದ ಪ್ರತಿಕ್ರಿಯೆಯನ್ನು ನೀಡುತ್ತಾರೆ. ಪಾರ್ವತಿದೇವಿಯ ಪಾದಕ್ಕೆ ನಮಸ್ಕರಿಸಿ ಹೊಸದಾದ ಬಿರಿವ ಪಾದರಿ, ಬಕುಳದ ಮೊಗ್ಗಿನ ಮಾಲೆಯನ್ನು ಕಾಣಿಕೆಯಾಗಿ ಕೊಟ್ಟನು. ಪಾರ್ವತಿಯು ವಿರಹಿಗಳಂತೆ ಹಾಸಿಗೆಯಲ್ಲಿದ್ದಳು. ಕೆಂಪನೆಯ ಅಶೋಕದ ಹೂ, ಸೇವಂತಿ, ಜಾಜಿ, ಮರುಗ ದವನ, ಮಕರಂದ, ಕಲ್ಹಾರ ಮುಂತಾದ ವಿವಿಧ ಜಾತಿಯ ಸುಗಂಧ ಸೂಸುವ ಮಾಲೆಗಳನ್ನು ಅರ್ಪಿಸಿದರೂ ಮನಸ್ಸು ಬದಲಿಸಲಿಲ್ಲ. ಮಕರಣಿಯು ಸುರಭಿಶೇಖರನಿಗೆ 'ಮಂದಾರದ' ಮಾಲೆಯನ್ನು ಕೊಟ್ಟು ತೃಪ್ತಿಪಡಿಸು ಎಂದಳು. ಆಗ ಸುರಭಿಶೇಖರ ತಲೆಬಾಗಿ ಮಾತನಾಡದೆ ನಿಂತಿದ್ದ. ಪಾರ್ವತಿದೇವಿ, ಕಡೆಗಣ್ಣಿನಿಂದ ಸುರಭಿಶೇಖರನನ್ನು ನೋಡುತ್ತ "ಮಕರಿಣಿ ಮುಂ ಕಿವಿಯೊಳ್ಬಿತ್ತಿ ಬೆಳಸಿದ ಪಿಸುಣೆಂಬೆಳೆವಳ್ಳಿ ಅಲರೇಜೆ ಫಲ ಬಲಿದುಲಿವಂತೆ"(೧೨/೯೫) ಆಯಿತು ಎಂದಳು. ಮತ್ತೆ ಮಂದಾರದ ಹೂವನ್ನು ಯಾರಿಗೆ ಕೊಟ್ಟೆ, ಕೊಡಲು ಹೇಳಿದವರಾರು? ಸುಳ್ಳನ್ನು ಹೇಳದೆ ಮಾತನಾಡಲು ಹೇಳಿದಳು. ಸುರಭಿಶೇಖರ ಮೂಕನಂತೆ, ಗ್ರಹಬಡಿದವರಂತೆ, ಅವಿವೇಕಿಗಳು, ಹುಚ್ಚರಂತೆ ಸುಮ್ಮನೆ ಇದ್ದನು. ಮತ್ತೆ ಪಾರ್ವತಿಯನ್ನು ಮನದಲ್ಲಿ ಧ್ಯಾನ ಮಾಡಿಕೊಂಡು ಮತಿವಿಕಳನಾಗಿ ಮಾತನಾಡಿದ್ದು ಹೀಗೆ

ಶಿವನ ಮೇಲಿಡೆ ತಪ್ಪುವುದಪರಾಧವಂ
ದವನಿಪ ಬಗೆದಗಜೆಗೆ ಪೇಳ್ದೆ
ಅವಧರಿಸಭವೆ ಶಂಭುವಿನ ನೇಮದಲಿ ಜಾ
ಹ್ನವಿಗಿತ್ತೆ ಸುರಕುಸುಮವೆನೆಂದೆ (೧೨/೯೯)

ಸುರಭಿಶೇಖರ ವಿಕ್ರಮರಾಜನಿಗೆ ತನ್ನ ತಪ್ಪಿನ ಕುರಿತು ಹೇಳುತ್ತಾನೆ. ಮಂದಾರದ ಪುಷ್ಪವನ್ನು ಶಿವನ ಮೇಲಿನ ಭಕ್ತಿಯಿಂದ ಗಂಗೆಗೆ ಕೊಟ್ಟೆನು. ಇದು ಅಪರಾಧವೆಂದು ತಿಳಿದು ಶಿವನ ಮೇಲೆ ತಪ್ಪನ್ನು ಹೊರಿಸಿತ್ತ ಪಾರ್ವತಿಗೆ ತಿಳಿಸಿದನು. ಪಾರ್ವತಿಯು ಸುರಭಿಶೇಖರನಿಗೆ ನಿನ್ನದೇನೂ ತಪ್ಪಿಲ್ಲ ಆದಿಶೇಷನಾಣೆಯಾಗಿಯೂ ನೀನು ಮಾತ್ರ ಈ ತಪ್ಪನ್ನು ಮಾಡಲು ಸಾಧ್ಯವಿಲ್ಲ. ಹಗರಣಿಗನು, ಹಾವಾಡಿಗನು ನಮ್ಮೊಂದಿಗೆ ಪ್ರಸಿದ್ಧಿಗೆ ಬಂದದ್ದು ನೋಡೆಂದು ಸಿಟ್ಟಾದಳು. ಆ ಗಂಗೆಯು ಮೋಹದಿಂದ ನಿನ್ನಿಂದ ಹೂವನ್ನು ತರಿಸಿಕೊಂಡಳು ಇದೆಂತ ವಿಚಿತ್ರ ಎಂದು ಸಿಟ್ಟಿಗೆದ್ದಳು. ಸುರಭಿಶೇಖರ ಶಿವಪಾರ್ವತಿಯರ ಮುನಿಸು ಕುರಿತು "ಬಿಸಿಲ್ಗೊಂಕಿಗು ಸುರ್ಪಿಡುವನು ಕಾಳ್ಗಿಚ್ಚುರ್ವಿ ಮುಸುಕಲುಳಿವೆನೆ ಮಾದೇವಿಯ ನಸುಗೋಪ ಕಳವಳಿದೆನು ಬಿಸಿಗಣ್ಣಕೋಪಿಸೆ ಬಾಳ್ವೆನೆಂತೆಂದು ಮಱುಗಿದೆ(೧೨/೧೦೩) ಮತ್ತೆ ಪಾರ್ವತಿಗೆ ಜಗನ್ಮಾತೆಯೇ ಗಂಗೆ ಬೇಡಿದಕ್ಕೆ ಆ ಮಂದಾರ ಹೂವನ್ನು ಕೊಟ್ಟಿದ್ದೇನೆ ಅಂದಕಾರಿಯೆಂದು ತಿಳಿದು ಒಮ್ಮೆಯಾದರು ಕಾಪಾಡು ಶಿವ ಇದನ್ನು ತಿಳಿಯದವನು ಎಂದು ನಮಸ್ಕರಿಸಿದನು. ಪಾರ್ವತಿಯು ಸುರಭಿಶೇಖರನಿಗೆ ಹೋಗೆಲೊ ಹುಳು ಹೂಮಾಡಿದೆ, ನೀನು ಮಾಡಿದ ತಪ್ಪನ್ನು ಮರೆಯಿಡಬೇಕು. ನಿನ್ನಲ್ಲಿ ಸಂಕಟ, ಪ್ರೀತಿ ಇದೆ ಎಂದು ಜರಿದಳು. ಪಾರ್ವತಿ ಅತಿಯಾದ ಕೋಪದಿಂದ ನಿಂತಲ್ಲಿ ನಿಲ್ಲದೆ ಚಿಂತೆಗೆ ಒಳಗಾದಳು, ಹಗಲಿನ ಶಶಿಲೇಖೆಯೊ ಚಿಂತಾಗ್ನಿಯ ಹೊಗೆಹೊಯ್ದ ಹೊಸ ಹೊನ್ನ ಪ್ರತುಮೆಯೊ, ಮುಗಿದಬ್ಜವೊ, ಮಾಸಿದ ಮಣಿಮುಕುರವೊ ಏನೆಂಬುದು ಮನಸ್ಸಿಗೆ ತಿಳಿಯದಂತ ಭಾವ ಆಗಿತ್ತು. ಆಭರಣಗಳನ್ನು ತೆಗೆದಿಟ್ಟು ವಿರಹದಿಂದ ಇದ್ದಳು. ಹೀಗಿರುವಾಗ ಹೂವಾಡಗಿತ್ತಿ ಮಕರಿಣಿಯು ಶಿವನಲ್ಲಿಗೆ ಹೋಗಿ ಪಿಸುಮಾತನ್ನು ಆಡಿದಳು. ಆ ಕೂಡಲೆ ಶಿವ ಪಾರ್ವತಿಯನ್ನು ನೋಡಿ ಬೆರಗಾದ. ಯಾರಿಂದ ಯಾವ ಕೆಲಸವೇನಾಗಿದೆ. ಇವಳ ಚಿಂತೆಗೆ ಕಾರಣವೇನು ಕುಹಕವನ್ನು ಯಾರು ಮಾಡಿದ್ದಾರೆ ಎಂದಾಗ ಹತ್ತಿರದಲ್ಲಿದ್ದ ಸಖಿಯರು ದೂರಸರಿದರು. ಪಾರ್ವತಿಯ ದುಗುಡವನ್ನು ಹೇಗೆ ಕಳೆಯುವುದು ಯಾವ ಕಾರಣದಿಂದ ಮಾತನಾಡಿಸುವುದು ಎಂದು ಧ್ಯಾನ ಮಾಡಿದನು. ತನ್ನಿಂದ ಆದ ಮುನಿಸೊ; ರಾಕ್ಷಸರಿಂದಾದ ದುಃಖವೋ. ಪರಿಜನರಿಂದ ಏನಾದರು ವ್ಯತ್ಯಾಸ ಆಗಿದೆಯೋ ಎಂದು ಚಿಂತಿಸಿದನು. ಹಲವಾರು ರೀತಿಯಲ್ಲಿ ಶಿವಪಾರ್ವತಿಯನ್ನು ಮಾತನಾಡಿಸಲು ಪ್ರಯತ್ನಿಸಿದನು. "ಪ್ರಿಯಳೆ ಪೇಳೇನಾಯಿತಿನಿತಕ್ಕೆ ನಿನ್ನಿಂದ ನೀನಜೆಯಾ ನಿನ್ನಾಣೆ ಅಜೆಯೆನಾಣೆಗಾನಾರೊ ನನ್ನಿಯುಳ್ಳನೆ ಪೇಳ"(೧೩/೧೧) ಎಂದು ಕೇಳಿಕೊಂಡನು. ಕಂಡುದ ಮಱೆಯಿಟ್ಟೆನೇ, ನಿನ್ನ ಸೊಲ್ಲನು ಉದ್ದಂಡಿಸಿದೆನೆ ಹಿಂದೆ ತೆಗಳಿ ಮಾತಾಡಿ, ಮುಂದೆ ಹೊಗಳಿ ಸಿಟ್ಟು ತರಿಸಿದ್ದೇನೆ. ಇದೆಲ್ಲವನ್ನು ಮರೆತು ಮಾತಾಡು. ನನ್ನೊಂದಿಗೆ ಇಂತಹ ಸಿಟ್ಟೇಕೆ ಎಂದು ಮಾತಾಡಲು ಪ್ರೇರೇಪಿಸಿದನು. ನಿನ್ನ ಮನದಲ್ಲಿ ಎಲ್ಲಿಯ ಹೂ

ಯಾರಿಗೆ ಕೊಟ್ಟೆ ಎಲ್ಲಿಯ ಮಾತು ಏನೆಂಬುದು ತಿಳಿಸು ನಿನ್ನ ಚಿಂತೆಗೆ ಕಾರಣವೇನು ತಿಳಿಸಿ ಎಂದು ಶಿವ ಪಾರ್ವತಿಗೆ ಹೇಳಿದನು.

ಅಱೆವೆ ಹೇಳೆಂತಕ್ಕಟ ಮುಗುದರು ತಮ್ಮ
ಕೊಱತೆಯ ಪೊಱಗಿಡುವವರುಂಟೆ
ತೊಱೆವೆಣ್ಣಿಗೆನ್ನ ಮೀಸಲ ಪೊವನಿತ್ತುದ
ಮಱವೆನೆಂತಕಟ ಮರುಳ್ಜೋಗಿ (೧೩/೨೦)

ಮುಗ್ಧನಾದ ಸುರಭಿಶೇಖರ ತನ್ನ ತಪ್ಪನ್ನು ಹೇಳಲು ಭಯಪಡುತ್ತಾನೆ. ಗಂಗೆಗೆ ಮೀಸಲಿಟ್ಟ ಹೂವನ್ನು ಕೊಟ್ಟಿದ್ದಾನೆ. ಅದನ್ನು ಮರೆಯಲಿಕ್ಕಾಗುತ್ತೇ ಹುಚ್ಚುತನಬೇಡ. ಚಾಡಿಕೋರರು ತಮ್ಮ ಮಾತಿನಿಂದ "ರವಿಯನು ತಣ್ಣನೆ ಮಾಡಿ ಶಶಿಯನು ಬಿಸಿಮಾಡುವರು"(೧೨/೨೧) ಪೆತ್ತವರೆಡೆಗೆ ಪಗೆಯಿಡುವರ್ ಕಿಚ್ಚಿಲ್ಲದೆ ಪೊತ್ತಿಕ್ಕಿ ಪೊಗಸಲೆಣಿಸುವರು ಬಿತ್ತುವರ್ ಕಿವಿಯಲ್ಲಿ, ಬೆಳೆಸುವರೆದೆಯೊಳು ಬಿತ್ತರವೇನೂ ಪಿಸುಣವಿದ್ಯೆ (೧೩/೨೪) ಒಲಿದವರನ್ನು ಅಗಲಿಸಿ ಹಾಲಿನಲ್ಲಿ ಹುಳಿ ಹಿಂಡುವರು, ಚಾಡಿಕೋರರು ಹೀಗೆ ಕೊಲ್ಲಲು ಮುಂದಾದರೆ ಭೂಮಂಡಲದಲ್ಲಿ ರಕ್ಷಿಸುವವರು ಇರುವುದಿಲ್ಲವೋ, ಅದಕ್ಕಾಗಿ ಚಾಡಿಕೋರರನ್ನು ನಂಬಬೇಡ ಎಂದನು. ಈ ಮಾತಿಗೆ ಪಾರ್ವತಿಯು ನಿನ್ನ ಹಾಗೆ ಸ್ಮಶಾನದಲ್ಲಿ ತಿಂದುಂಡು ಹೆಣದ ಬೂದಿಯನ್ನು ಹಚ್ಚಿಕೊಂಡು ಜೀವಿಸುವಳಲ್ಲ. ಚಾಡಿ ಮಾತು ಕೇಳಿ ಮುನಿಯುವಳಲ್ಲ ನೀನೆ ನಮ್ಮಿಬ್ಬರಲ್ಲಿ ಕೀಳು-ಮೇಲು ಆಗಿ ಮಾಡಿದ್ದನ್ನು ತಿಳಿಯದವಳಲ್ಲ. ಇದು ಮೂರು ಲೋಕಕ್ಕೇ ತಿಳಿದಿದೆ ಎಂದಳು. ಮತ್ತೆ ಮಕರಿಣಿಯನ್ನು ಕರೆದು ಸುರಭಿಶೇಖರ ಮಂದಾರದ ಹೂವಿನ ಬಗ್ಗೆ ಹೇಳಿದ ಮಾತನ್ನು ಶಿವನಿಗೆ ಹೇಳು ಎಂದಳು ಆಗ ಮಕರಿಣಿಯು ಮಾತಾಡದೆ ಇದ್ದಳು, ಸುರಭಿಶೇಖರ ಆತಂಕದಿಂದ ಹೀಗೆ ಹೇಳಿದನು.

ತರುತಿರ್ದ ಗಡ ಮಂದಾರದರಳನೀವು
ಕರದಿದಾರ್ಗೆಂದು ಕೇಳಿದಿರಿ ಗಡ
ಗಿರಿಜೆಗೆಂದಡೆ ಬೇಡ ಜಾಹ್ನವಿಗೀಯಂ
ದಿರಿ ಗಡ ವನಜನೊಳೆಲೆ ದೇವ (೧೩/೩೬)

ಎನ್ನುತ್ತಾ ಸುರಭಿಶೇಖರನೇ ಶಿವನ ಮುಂದೆ ಮಾಲೆಗಾತಿ ಮಕರಿಣಿಯ ಚಾಡಿಮಾತುಗಳನ್ನು ನೆನಪಿಸಿ ಖಚಿತಪಡಿಸಿದನು. ತನಗೊದಗಿಬಂದ ಕಂಟಕ ತಪ್ಪಿತೆಂದು, ತಾನು ಕಳ್ಳನಲ್ಲ ಎಂದು ಸಮಾಧಾನಪಟ್ಟುಕೊಂಡನು. ಚಾಡಿಕೋರಳು "ಕಂಡನೆ ನಿನ್ನನೆಲವೊ ಪೊಸಗಂಪಿನ ಬಂಡುಳ್ಳ ಮಂದಾರದರಳಿನ ದಂಡೆಯ ತೊಱೆವೆಣ್ಗೆ ಕೊಡವೇಳೆನೆ ಪೇಳು"(೧೩/೪೦) ಎಂದು ಮಾರುತ್ತರವಿತ್ತಳು. ಸುರಭಿಶೇಖರ ಶಿವಪಾರ್ವತಿಯರ ಮುಂದೆ ತನ್ನ ತಪ್ಪನ್ನು ಏನಂತಿಸಿದ್ದು ಹೀಗೆ.

ಮತಿಗುಂದಿ ಮಱದು ನುಡಿದೆ ಮುಂಗಾಣದೆ
ಗತಿಗೆಟ್ಟು ಕಕ್ಕುಲಿತೆಯೊಳಾನು
ಪತಿಕರಿಸಯ್ಯ ನೀನುಸುರದು ಸುರಪಾ
ರ್ವತಿಗೆಂದ ತಪ್ಪನೆಂದೆಱಗಿದೆ (೧೩/೪೨)

ಪತಿಕರಿಸಿದೆ ಪಿಡಿದೆತ್ತಿದೆ ತೃಣವ ಪ
ರ್ವತ ಮಾಡಿದೆ ಪ್ರಮಥರೊಳೆನ್ನ
ಅತಿಶಯನನೆನಿಸಿದೆ ಯಾಭಾಸಗೆ ಪೆ
ರ್ಗತಿಯಿಲ್ಲ ತಪ್ಪೊಂದ ಕಾಯೆಂದೆ (೧೩/೪೩)

ಗಂಗೆ ಪಾರ್ವತಿಯರ ಮಧ್ಯೆ ಕಕ್ಕುಲತೆಗೆ ಸಿಕ್ಕು ಮತಿಗುಂದಿ ಮರೆತು ಮುಂದೆ ದಿಕ್ಕುಗಾಣದೆ ತಪ್ಪನ್ನು ಮಾಡಿದ್ದೇನೆ. ದೇವಿಯೇ ಶಿವನಿಂದ ಒಳ್ಳೆಯ ಸ್ಥಾನಮಾನವನ್ನು ನೀಡಿದ್ದಾಳೆ. ಅದಕ್ಕೆ ಈ ತಪ್ಪನ್ನು ಮನ್ನಿಸಿ ಕಾಯು ಎಂದನು. ಶಿವನೇ ಸುರಭಿಶೇಖರನಿಗೆ ಕೊಟ್ಟ ಶಾಪ ಇಂತಿದೆ.

ಮಾಡಿದುದಕ್ಕೆ ಮಾಡಿದೆ ಸಾಕೇಳೆಲೊ
ಮೂಢ ಮೂರ್ಖರ ಕುಲದೈವವೆ
ಕೋಡಾಗಿ ಪೋಗು ಮಾಕಾಳವನದೊಳು
ಕ್ರೋಡನಾಗೆಂದೆನ್ನ ಶಪಿಸಿದ (೧೩/೪೪)

ಹೀಗೆ ಸುರಭಿಶೇಖರ ಕೈಲಾಸದಲ್ಲಿ ಮಾಡಿದ ತಪ್ಪಿನಿಂದ ಭೂಲೋಕದಲ್ಲಿ ಮಹಾಕಾಳಿಯ ವನದಲ್ಲಿ ಶಾಪವನ್ನು ಪಡೆದು ಹಂದಿಯ ಹೊಟ್ಟೆಯಲ್ಲಿ ಜೀವಿಸುತ್ತಿದ್ದೆ ಎಂಬ ವೃತ್ತಾಂತವನ್ನು ವಿಕ್ರಮನಿಗೆ ವಿವರಿಸಿದನು. ಮತ್ತೆ "ನೀನೆ ಗುರು, ನೀನೇ ದೈವ, ಗತಿ ಮತಿ ನೀನೇ ಮಾತೆಪಿತನು ನೀನೆ ನೀನಲ್ಲದೆ ಪೆಜರಿಲ್ಲ"(೧೩/೪೭) ಎನ್ನುತ್ತ ನನ್ನನ್ನು ರಕ್ಷಿಸು ಎಂದು ಬೇಡಿಕೊಂಡನು. ಸುರಭಿಶೇಖರ ವಿಕ್ರಮನ ಕುರಿತು ಪ್ರಶಂಸಿಸುವ ಪರಿ

ಆಕೆಯ ಮುಡಿಯಲಜಿಂದೊಗೆದವಗಲ್ಲ
ದೀಕಳೆಯೀಯಧಟೀ ಜಸ
ಈ ಕುಲವೀಗುಣವೀ ಶೀಲವೆಲ್ಲ
ಗೇ‌ಕಹುದೆಂದವ ಪೊಗಳ್ದನು (೧೩/೬೨)

ವಿಕ್ರಮನು ಪಾರ್ವತಿಯ ಮುಡಿಯಲ್ಲಿದ್ದ ಮಂದಾರದ ಅರಳಿನ ಕೃಪೆಯಿಂದ ಜನ್ಮತಾಳಿದವನು. ಅದಕ್ಕಾಗಿ ವಿಕ್ರಮನಲ್ಲಿ ಕಳೆ, ಧೈರ್ಯ, ಕೀರ್ತಿ, ಕುಲ, ಗುಣ, ಶೀಲ ಎಲ್ಲವೂ ಹೊಂದಿರುವ ಶಿವನ ಸ್ವರೂಪಿಯೇ ಆಗಿದ್ದಾನೆ ಎಂದು ಹೊಗಳಿದನು. ಅದಕ್ಕೆ ವಿಕ್ರಮ ಶಿವನ ಸೇವೆಯನ್ನು ತಪ್ಪದೇ ಮಾಡುತ್ತಿರು ಎಂದು ಹೇಳಿ ಬೀಳ್ಕೊಟ್ಟನು.

### ೫.೧.೫. ನಾಗರಿಕ ಪಕ್ಷಿಯ ವೃತ್ತಾಂತ

ಸುರಭಿಶೇಖರನ ವೃತ್ತಾಂತದ ನಂತರ ನಾಗರಿಕ ಪಕ್ಷಿಯ ವೃತ್ತಾಂತ ಬರುತ್ತದೆ. ಸಂಧಿ ೧೪ ರಿಂದ ೧೭ರವರೆಗೆ ಒಟ್ಟು ೩೬೭ ಪದ್ಯಗಳಲ್ಲಿ ಕತೆ ವಿಸ್ತಾರಗೊಂಡಿದೆ. ವಿಕ್ರಮಕುಮಾರನಿಗೆ ಬೇಡರಿಂದ ಕಾಣಿಕೆಯಾಗಿ ಕೊಟ್ಟ ಪಕ್ಷಿಯು ಇದಾಗಿದ್ದು ಖಗಕುಲದಲ್ಲೇ ಆಶ್ಚರ್ಯವೆನಿಸುವಂತಹ ರೀತಿಯಲ್ಲಿ ವರ್ತಿಸುತ್ತದೆ. ಇದು ಶಿವಸಾಗರೇಶ್ವರನ ಸೇವೆಯನ್ನು ಮಾಡುತ್ತಿದ್ದಾಗ ಬೇಡನಿಂದ ಬಂದಿತವಾಗಿರುವ ಪಕ್ಷಿಯು ತನ್ನ ದೈವ, ತಂದೆ, ತಾಯಿ ಮುಂತಾದ ಪೂರ್ವ ವೃತ್ತಾಂತವನ್ನು ವಿವರಿಸುತ್ತದೆ. ಇಂತಹ ನಾಗರಿಕ ಪಕ್ಷಿಯ ಕುರಿತು ಕವಿ ಕಲ್ಪನೆ ಇಂತಿದೆ.

ನಾಗಲೋಕದಿನೊಗೆದುದೊ ಮೇಣಿಳೆಗಿಂ
ದಾಗಸದಿಂದೆಳ್ತಂದುದೊ
ಸಾಗರ ದ್ವೀಪಾಂತರದಿ ಬಂದುದೊ ನೋಡೆಂ
ದಾಗ ಮುಂದಿರಿಸಿ ಕೆಲಕೆ ಸಾರ್ದ (೧೪/೧೬)

ಈ ಪಕ್ಷಿ ನಾಗಲೋಕದಿಂದ ಭೂಮಿಗೆ ಬಂದಿದೆಯೋ, ಇಲ್ಲವೆ ಸಾಗರದ್ವೀಪಾಂತರದಿಂದ ಬಂದುದೋ ಇಲ್ಲವೆ ಆಕಾಶದಿಂದ ಇಳಿದು ಬಂದಿದೆಯೋ ಎಂಬಂತೆ ವಿಶೇಷವಾಗಿತ್ತು. ಇದರ ಆಕಾರವು

ಕುಲಿಶದುಟಿಯ ಕೆಂದಳಿರ್ಪಚ್ಚೆವಣ್ಣದ
ತಲೆ ಕಾಲ ಪೊಂಬಣ್ಣದೆಱಕೆಯ
ಪಳುಕುವಣ್ಣದ ಕೊರಳೆಸಕ ವಿಂದಿರುವಿಲ್ಲಿ
ನೊಳುವಣ್ಣದೊಡಲೊಳೊಪ್ಪಿತು ಪಕ್ಕಿ (೧೪/೧೭)

ಕೊಕ್ಕು ವಜ್ರಾಯುಧದಂತೆ, ತಲೆಕಾಲು ಕೆಂದಳಿರ್ಪಚ್ಚೆಬಣ್ಣದ್ದು, ರೆಕ್ಕೆಯು ಹೊಂಬಣ್ಣದ್ದು, ಕೊರಳು ಪಳುಕಬಣ್ಣದ್ದು ಇದೆಲ್ಲವೂ ಇದರ ದೇಹಕ್ಕೆ ಒಪ್ಪುವಂತಹ ಬಣ್ಣದಿಂದ ಶೋಭಿಸುತ್ತಿತ್ತು, ಇಂತಹ ಪಕ್ಷಿಯು ಗರುಡ ಕುಲದಲ್ಲಿ ಶೋಭಿಸುವಂತದ್ದೋ, ಹಲವು ಬಣ್ಣವಿಲ್ಲದಂತಹ ರೂಪಾದುದೋ ಎಂದು ವಿಕ್ರಮನಿಗೆ ಆಶ್ಚರ್ಯವುಂಟಾಗುವಂತೆ ಶಬರನು ಮಂಡಿಸಿದನು. ವಿಕ್ರಮನು ಆ ಹಕ್ಕಿಯನ್ನು ಕುರಿತು

"ಕಾರಣ ಖಗ ನೀನಾರು ನಿನ್ನಯ ಕುಲ
ಕಾರು ಕಾರಣ ಪಕ್ಕಿ ಪೇಳೆಂದು"(೧೪/೧೯) ನುಡಿದನು.

ನಾಗರಿಕ ಪಕ್ಷಿಯು ತನ್ನ ವೃತ್ತಾಂತವನ್ನು ಹೇಳುವ ಮುನ್ನ ತನ್ನನ್ನು ಉಪಚರಿಸುವಂತೆ ಬೇಡಿಕೊಂಡಿತು.

ಉಡಿದಪವೆಱಕೆ ಕಾಲ್ಗಳ ಸಂದು ನೊಂದು ಜು
ಮ್ಮಿಡುತಿವೆ ಕೇಳುಸುರ್ಗುಬ್ಬಸ
ಅಡಸುತಲಿದೆ ಕಟ್ಟನು ಬಿಟ್ಟು ಕಾಯಿಯ
ನ್ನೊಡೆಯ ವಿಕ್ರಮಯಂದುದಾ ಪಕ್ಕಿ (೧೪/೨೧)

ಬಿದ್ದಿದ್ದ ರೆಕ್ಕೆ, ಕಾಲುಗಳ ಸಂದಿನ ನೋವು ಜುಮ್ಮೆನ್ನುತ್ತಿದೆ. ಉಸಿರು ಉಬ್ಬಸವಾಗುತ್ತಿದೆ. ಬಂಧಿಸಿದ ಕಟ್ಟನ್ನು ಬಿಚ್ಚಿ ಸಡಿಲಿಸು ಎಂದು ಬೇಡಿಕೊಂಡಿತು. ಇಂತಹ ಮಾತುಗಳಿಂದ ಪ್ರೇರಿತನಾದ ವಿಕ್ರಮನು

"ಈಶನ ಪದಸೇವೆಯಿಂ ಭವಬಂಧದ
ಪಾಶವ ಪಱುದಿಕ್ಕುವವೊಲು" (೧೪/೨೩)

ನಾಗರಿಕ ಪಕ್ಷಿಯನ್ನು ಉಪಚರಿಸಿದನು. ರಸತುಂಬಿದ ಸಿಹಿಯಾದ ಹಲವು ತೆರನಾದ ಹಣ್ಣುಗಳನ್ನು, ನಿರ್ಮಲವಾದ ನೀರಿನಲ್ಲಿ ಹೂಕಂಪಿನಿಂದ ಶೋಭಿಸುವಂತ ಪರಿಕರಗಳನ್ನು ನೀಡಿ ವಿಚಾರಿಸುವನು.

"ಇನಿದಾದವೆ ಪಣ್ಗಳು, ನೋವು ತಗ್ಗಿತೆ,
ಘನ ಬಳಲ್ಕೆಗೆ ಕಡೆಯಾದುದೆ
ತನುವಿಗೆ ಸುಖವುಣ್ಮಿತೆ ಪಕ್ಕಿ ಪೇಳೆಂ
ದನು ವಿಕ್ರಮ ವಿನಯದಲಂದು" (೧೪/೨೫)

ವಿಕ್ರಮರಾಜನು ಸಂಕಟದಲ್ಲಿದ್ದವರನ್ನು ಪರಿಹರಿಸುವುದನ್ನು ಕುರಿತು ತಿಳಿಸುತ್ತದೆ. ಇದು ಸಂದರ್ಭ ಬಂದಾಗ ಕಷ್ಟದಲ್ಲಿದ್ದವರಿಗೆ ಸಾಂತ್ವನ ನೀಡುವ ಹೃದಯಸಂಪನ್ನನೆಂಬುದನ್ನು ಸಾರುತ್ತಾನೆ. ಬೇಡನಿಂದ ಬಂಧಿತನಾದ ತಾನು ವಿಕ್ರಮನ ದರ್ಶನದಿಂದ ಆದ ಅನುಭವದ ಕುರಿತು ಈ ರೀತಿ ಹೇಳಿದೆ.

"ತಂದೆ ತಾಯಿಗಳನಗಲಿದ ದುಃಖ ಬೇಡರು
ಕೊಂದಹರೆಂಬ ಕಾತರದೇಳ್ಗೆ
ಇಂದು ನಿನ್ನಯ ದರುಶನಮಾತ್ರದೊಳೆನ್ನ
ಹಿಂದಾದಳಲು ಮಱಸಿತು ಭೂಪ" (೧೪/೨೯)

ನಿನ್ನ ಉಪಚಾರದಿಂದ ವಿಕ್ರಮನೇ ನಾನು ಸಂತೃಪ್ತನಾಗಿದ್ದೇನೆ. ನನ್ನ ವೃತ್ತಾಂತವನ್ನು ನೀನು ತದೇಕ ಚಿತ್ತದಿಂದ ಆಲಿಸು ಎಂದು ಬೇಡಿಕೊಳ್ಳುತ್ತದೆ. ಇದನ್ನು ಗಮನಿಸಿದ ವಿಕ್ರಮ ನಾಗರಿಕ ಪಕ್ಷಿಯ ಮಾತನ್ನು ಕೇಳಿ ಆಶ್ಚರ್ಯಗೊಂಡನು. ಇದು ಸಾಮಾನ್ಯ ಪಕ್ಷಿಯಲ್ಲ. ಇದರ ಮಾತಿನಲ್ಲಿ ಹೊಸತನವಿದೆ ಎಂದನು.

ಈ ನಾಗರಿಕ ಪಕ್ಷಿಯ ಹಿರಿಯರು 'ರತ್ನಮೇಖಲೆಯೆಂಬ' ಪರ್ವತದಲ್ಲಿ ವಾಸವಾಗಿದ್ದರು. ಈ ಪರ್ವತವು ಪೂರ್ವದಿಕ್ಕಿನಲ್ಲಿದೆ. ಅಲ್ಲಿ ಸಮುದ್ರದ ತೀರವಿದೆ. ಆ ಬೆಟ್ಟವು ಮಂದರ, ಗೋವರ್ಧನ, ಮೇರುವೈನಾಕ, ವಿಂಧ್ಯಪರ್ವತಗಳನ್ನು ಹೋಲುವಂತಹ ಆಕರ್ಷಣೀಯವಾಗಿತ್ತು. ಇಂತಹ ಪರ್ವತವನ್ನು ಜನ ನೋಡಿ ಸಂತೋಷಪಡಲೆಂದೇ ಇಲ್ಲವೆ ಸ್ವರ್ಗ, ಭೂಮಿಯನ್ನು ಅಳೆಯುವ ಮಾನದಂಡವೋ ಎಂಬಂತೆ ಕಣ್ಣಿಗೆ ಶೋಭಿಸುವಂತಿತ್ತು. ಬೆಟ್ಟದಲ್ಲಿ ಕಮ್ಮರಿ (ಸಜೆ) ಜಜೆ, ತಪ್ಪಲು, ಪಡಿವಾಸಜೆ, ಇಕ್ಕಟ್ಟಾದ ಸ್ಥಳ, ಗುಹೆಗಳು, ಕೊಡಕಲ್ಲುಗಳು ಅಲ್ಲಿದ್ದವು. ವಜ್ರವೈಢೂರ್ಯಗಳ ತಳಶಿಲೆ, ಮುತ್ತುರತ್ನಗಳ ಮಾಣಿಕ್ಯಗಳ ತವರೂರಾಗಿತ್ತು. ಮಾವು, ಅಡಿಕೆ, ಖರ್ಜೂರ, ತೆಂಗು, ಹಲಸು, ಬಕುಳ, ಪಾದರಿ, ಜಂಬು, ಕರ್ಪುರಬಾಳೆ ಮುಂತಾದ ಮರಗಳಿದ್ದವು. ಸಂಪಗೆ, ಸಿರಿಖಂಡ, ಇಮ್ಮಾವಿನ ಪರಿಮಳ ಮುಂತಾದ ಹೂಗಳು ಅರಳಿದ್ದವು. ಸರೋವರ, ತೊಜೆ, ಕೆರೆ, ಮಡುಗಳು ರತ್ನಮೇಖಲೆಯ ಪರ್ವತದಲ್ಲಿ ಶೋಭಿಸಿದವು. ಹಂಸ, ನವಿಲು, ದುಂಬಿ, ಜೋಡಿಹಕ್ಕಿಗಳು ಪುಲಕವನ್ನುಂಟುಮಾಡುತ್ತಿದ್ದವು. ಕಪಿಗಳು ಚೇಷ್ಟೆಯನ್ನು ಮಾಡುತ್ತಿದ್ದರಿಂದ ಅಲ್ಲಿಯ ಜನ ನಕ್ಕು ಸ್ವರ್ಗ ಸುಖವನ್ನು ಪಡೆಯುತ್ತಿದ್ದರು. ಕೆಲ ಕಪಿಗಳು ಇಂದಿರನನ್ನು ಮತ್ತೆ ಕೆಲವು ಇಂದ್ರನ ಪಟ್ಟದ ಅರಸಿ ಶಚಿಯನ್ನು ಮಾಡಿ ಹೊಗಳುತ್ತಿದ್ದವು. ಮುದಿಕಪಿಗಳು ಮುನಿಕುಮಾರರಿಗೆ ಬೆಟ್ಟದ ಕತೆಯನ್ನು ವರ್ಣಿಸುತ್ತಾ ಕಾಯಿ ಹಣ್ಣುಗಳನ್ನು ತಿನ್ನುತ್ತಿದ್ದವು.

ಗಿಳಿಗಳು ವೇದ, ಪುರಾಣ, ಆಗಮ, ತರ್ಕ, ಭರತ ಮೊದಲಾದ ಶಾಸ್ತ್ರಗಳೆಲ್ಲವನ್ನು ಮುನಿಯ ಮಕ್ಕಳಿಗೆ ಓದಿಸುತ್ತಿದ್ದವು. ಮರಗಳು ಬೇಡಿದವರಿಗೆ ಹೂವು, ಮೊಗ್ಗು, ಕಾಯಿ,

ಹಣ್ಣುಗಳನ್ನು ಬಿಟ್ಟು ಮೃಗ ಸಂಕುಲಕ್ಕೆ ಚಿಕಿತ್ಸಕವನ್ನು ಮಾಡುವಂತಿದ್ದವು. ಮುನಿಗಳು ಶಿವನನ್ನು ಕುರಿತು ವರ್ಣಿಸುತ್ತಿದ್ದರು. ಹಿಮಾಲಯ, ಮಂದರ, ವಿಂಧ್ಯ ಮೊದಲಾದ ಶ್ರೇಷ್ಟ ಪರ್ವತಗಳಲ್ಲಿ ಆಶ್ರಮಗಳಿದ್ದು ಅಲ್ಲಿ ಭೂಲೋಕದ, ದೇವಲೋಕದ ಮುನಿಗಳು ಶಾಸ್ತ್ರ ಕಲಿಯಲು ಬಂದಿದ್ದರು. ಆ ಬೆಟ್ಟದ ತಪ್ಪಲಿನಲ್ಲಿ ಸಿಂಹ, ಆನೆಗಳು, ಬಿಡುಮುತ್ತನ್ನು ಸೂಸುತ್ತಿದ್ದವು. ಕಿನ್ನರಿಯರು ವೀಣೆಯ ಸ್ವರದೊಂದಿಗೆ ಶಿವನನ್ನು ಹಾಡಿಹೊಗಳುತ್ತಿದ್ದರು. ಗವಿಗವಿಗಳಲ್ಲಿ ಪ್ರಿಯತಮೆಯರ ವಿರಹದಿಂದ ಇದ್ದ ವಿದ್ಯಾಧರ ಸ್ತ್ರೀಯರ ಮನಸ್ಸಿಗೆ ಮೃಗಗಳು ಇಂಪಾದ ಧ್ವನಿಯಿಂದ ಉಲ್ಲಾಸವನ್ನು ನೀಡುತ್ತಿದ್ದವು. ಬೇಡರು ಪ್ರಾಣಿ ಪಕ್ಷಿಗಳ ವ್ಯಸನದಿಂದ ಅಡವಿಯಲ್ಲಿ ಸುತ್ತಾಡಿ ಎಳೆಮಿಗಗಣ್ಣ ಪೆಂಡಿರ್ಗೆ ತೊಡೆಯಿತ್ತು. ಮುಂದೆ ಪ್ರಿಯತಮೆಯರನ್ನು ಒಂದು ಕ್ಷಣವೂ ಬಿಟ್ಟು ಇರಲಾರದೆ ಇದ್ದರು. ಶಬರಿಯರು ಕಾಗೆಯ ಜೊತೆ ಸುವ್ವಿಪಕ್ಷಿಯೊಂದಿಗೆ ರಾಗವನ್ನು ಹಾಡಿಸುತ್ತಿದ್ದರು.

ಭೋಗಿ ವಿನೋದ ವಿಭ್ರಮನಾಗಿ ನೇಮವ್ರ
ತಾಗಮವಾಂತ ತಾಪಸರಮ್ಯ
ರಾಗಿಯೆನಿಸಿ ಮಂತ್ರಾಕ್ಷಿಮಾಲಾ
ತ್ಯಾಗಿಯೆನಿಸಿ ಲುಬ್ಧಾಶ್ರಯ (೧೪/೬೭)

ಬೇಡರು ಅಲ್ಲಿ ಆಶ್ರಯವನ್ನು ಪಡೆದಿದ್ದರು. ಅವರು ಜಿಪುಣರಾಗಿದ್ದು ಭೋಗಿ, ವಿನೋದ, ವಿಭ್ರಮರಾಗಿ ನಿಯಮವ್ರತಗಳನ್ನು ಪಾಲಿಸುತ್ತಿದ್ದು, ಮಂತ್ರಾಕ್ಷಿಮಾಲಾತ್ಯಾಗಿಯೆನಿಸಿದ್ದರು. ಆ ಬೆಟ್ಟವೇ ಶಿವನ ರೂಪವನ್ನು ಬಿಂಬಿಸುವಂತಿತ್ತು ಎಂದು ನಾಗರಿಕ ಪಕ್ಷಿಯು ವಿಕ್ರಮ ರಾಜನಿಗೆ ರತ್ನಗಿರಿಯ ವರ್ಣನೆಯನ್ನು ಮಾಡಿತು. ಮುಂದುವರೆದು

ಪಲವಾತಿನ್ನೇತಕೆ ಮೂಜಗವೆಲ್ಲ
ವಳಿಯೆ ತಾವರೆಗಂದನೊಲವಿಂದ
ಬಳಿಕ ಸಮಸ್ತ ವಸ್ತುವ ಪುಟ್ಟಿಸುವ ಬೀಜ
ಸ್ಥಳವೆನಲಾ ಬೆಟ್ಟೆಸೆವುದು (೧೪/೬೯)

ಬೆಟ್ಟದ ಬಗ್ಗೆ ಹಲವು ಮಾತುಗಳು ಬೇಡ ಒಟ್ಟಿನಲ್ಲಿ ಹೇಳುವುದಾದರೆ ಮೂರು ಲೋಕವೂ ನಾಶವಾದರೂ ತಾವರೆಗಂಧನೊಲವಿಂದ ಸಮಸ್ತ ವಸ್ತುಗಳನ್ನು ಹುಟ್ಟಿಸುವ ಬೀಜಸ್ಥಳವೆಂಬಂತೆ ಆ ಗಿರಿರತ್ನ ಮೇಖಲೆಯು ಇತ್ತು.

ವಿಸ್ತರಿಸಲೆ ವಿಹಂಗಮ ನಿನ್ನ ಪಿತನು
ವಾಸ್ತವಾದುದ ನಿನ್ನ ತೆಜಿನನು
ಸ್ವಸ್ತತೆಯಿಂ ನಿನ್ನಯ ತಾಯುಳಿದ ಸ
ಮಸ್ತ ವೃತ್ತಾಂತವನೆನಗೆಂದ (೧೫/೫)

ವಿಕ್ರಮನು ನಾಗರಿಕ ಪಕ್ಷಿಗೆ ನಿನ್ನ ತಂದೆಯು ನಿನ್ನಿಂದ ದೂರವಾದ ಪ್ರಸಂಗ, ನಿನ್ನ ತಾಯಿಯ ಕುರಿತ ವಿಷಯವನ್ನು ವಿಸ್ತರಿಸು ಎನ್ನುತ್ತಾನೆ, ಈ ನಾಗರಿಕ ಪಕ್ಷಿಯು ತನ್ನ ವೃತ್ತಾಂತವನ್ನು ಕುರಿತು.

ಇರುತಿರ್ದೆನಾ ರತ್ನಗಿರಿಯ ಗಹ್ವರದಲ್ಲಿ
ಹರುಷದಿ ತಂದೆತಾಯಿಗಳ್ಗೂಡಿ
ಧರೆಯೊಳೆಮ್ಮಯ ಕುಲಪಕ್ಕಿಗಳಿಗೆ ನಾ
ಗರಿಕನೆಂಬುದು ಪೆಸರ್ಜಸಗಂಪಾ (೧೫/೭)

ರತ್ನಗಿರಿಯ ಗಹ್ವರದಲ್ಲಿ ತಂದೆತಾಯಿಗಳ ಜೊತೆಯಲ್ಲಿ ಸುಖಸಂತೋಷದಿಂದ ಇದ್ದೆನು. ಪಕ್ಷಿ ಜಾತಿಗಳಲ್ಲೆಲ್ಲ ಶ್ರೇಷ್ಟವಾದ ಕುಲ ನಮ್ಮದು, ಇಂತಹ ಕುಲಪಕ್ಷಿಗಳಿಗೆ 'ನಾಗರಿಕ' ಎಂಬ ಹೆಸರಿದೆ. ತಾಯಿಯ ಜೊತೆಯಲ್ಲಿದ್ದಾಗ ತಂದೆ ಪ್ರೀತಿಯಿಂದ ತಂದಂತ ಹಣ್ಣುಗಳನ್ನು ತಿಂದು ಶುಕ್ಲಪಕ್ಷದ ಚಂದಿರನ ಹಾಗೆ ಬೆಳೆದೆನು. ಗಚಿ ಬಲಿತು ನಿಧಾನವಾಗಿ ಬಾಲ್ಯದ ಸುಖಸಂಪತ್ತು ಕಳೆದ ನಂತರ ಗೆಳೆಯರೊಂದಿಗೆ ಹೋಗಿ ಆಹಾರ ಸಂಗ್ರಹಣೆಯ ರೀತಿಯನ್ನು ದಿನದಿನವೂ ತಿಳಿದುಕೊಂಡೆನು. ಶ್ರೇಷ್ಟ ಶಿಷ್ಯನು ಗುರುವಿನ ಕೃಪೆಯಿಂದ ಸಮಸ್ತವಸ್ತುಗಳ ಬಗ್ಗೆ ತಿಳಿವನ್ನು ಪಡೆಯುವ ಹಾಗೆ ನಾನು ತಂದೆಯೊಂದಿಗೆ ಇದ್ದುದರಿಂದ ಮತಿಯು ಅಂಕುರಿಸಿತು. ತಂದೆ–ತಾಯಿಗಳಿಬ್ಬರು ಸಮಾನವಾದ ಪ್ರೀತಿಯಿಂದ ಸಲಹಿದರು.

ಜಗದೊಳು ಸುತನೇಹವೆ ನೇಹಗಳಿಗೆ
ಮಿಗಿಲೆಂಬರದಚೆಂದಲವರಿಗೆ
ಮಗ ನಾನೋರ್ವನಾದುದಜೆಂದಲೊಂದಿನಿ
ಸಗಲಲುಸುರ್ವಿಡಿಯರು ಕೇಳ (೧೫/೧೩)

ನಾಗರಿಕ ಪಕ್ಷಿಯು ತಂದೆ–ತಾಯಿಗಳಿಗೆ ನಾನೊಬ್ಬನೇ ಮಗನಾದ್ದರಿಂದ ಗೆಳೆಯನ ಹಾಗೆ ಬಿಟ್ಟು ಬಿಡದೇ ನನ್ನೊಂದಿಗೆ ಇರುತ್ತಿದ್ದರು. ಅವರಿಗೆ ಪ್ರಾಣಪ್ರಿಯನಾಗಿದ್ದೆನು. ಹೊರೆಯಿಲ್ಲದೆ ವಧುವಿನೊಳು ಉದಿಸಿದ ಅಮರ್ದಿನ ರಸದಂತೆ ತಂದೆ ತಾಯಿಯರ ಇಚ್ಛೆಗೆ ತಕ್ಕಹಾಗೆ ಹೊಂದಿಕೊಳ್ಳುತ್ತ ದಿನದಿನಕೆ ಅತಿಯಾದ ಸ್ನೇಹದಿಂದ ಇದ್ದೆನು.

ತಂದೆಯು ಪ್ರತಿನಿತ್ಯವೂ ಎಲ್ಲಿಗೆ ಹೋಗುತ್ತಾನೆ, ಏನು ಮಾಡುತ್ತಾನೆ ಎಂಬುದನ್ನು ತಿಳಿಯಲು ಕುತೂಹಲದಿಂದ ಇದ್ದೆನು. ಒಮ್ಮೆ ತಂದೆಯನ್ನು ಅಪ್ಪಿಕೊಂಡು ದಿನಾಲು ಹೋಗಿಬರುವ ವಿಷಯವನ್ನು ತಿಳಿಸು ಎಂದೆನು. ಅದಕ್ಕೆ ತಂದೆಯು ನನಗೆ ನೀನು ಚಿಕ್ಕವನಿದ್ದೀಯ, ಈಗಲೇ ಆ ವಿಚಾರ ಬೇಡ ಎಂದನು. ಏನೇ ಆದರು ತಂದೆ ಮಕ್ಕಳಿಗೆ ತಮ್ಮ ಕೆಲಸದ ವಿಷಯವನ್ನು ತಿಳಿಸುವುದರಿಂದ ತಮಗೆ ಸಂತೋಷವಾಗುವುದಿಲ್ಲವೆ. ಆ ವೃತ್ತಾಂತವನ್ನು ನನಗೆ ತಿಳಿಸು ಎಂದು ತಂದೆಯೊಂದಿಗೆ ಪೂರ್ವದಿಕ್ಕಿನ ಸಮುದ್ರದ ಕಡೆಗೆ ಹೊರಟೆನು ಸಮುದ್ರದ ದಡದಲ್ಲಿ ಸುರಕ್ಷಿತವಾದ ತಣ್ಣನೆಯ ಸ್ಥಳದಲ್ಲಿ ನನ್ನನ್ನು ಇರಿಸಿ ತಾನು ಸಮುದ್ರದ ಮಧ್ಯಭಾಗಕ್ಕೆ ಹೋದನು. "...... ಮಕರಾಕರದೊಳು ಪಗಲಾಣ್ಮರ ಪಜ್ಜಳವನು ಮಿಗುವಂಗದ ಶಿವಸಾಗರೇಶ್ವರನೆಂಬ ಸೊಗಸುವೆಸರ ತಾಳ್ದಸೆವನು"(೧೫/೪೧)

ಸಮುದ್ರ ವರ್ಣನೆಯನ್ನು ಮಾಡುತ್ತಾ ಅಲ್ಲಿ ವಿಶೇಷಕರವಾದ ದೈವವನ್ನು ಪರಿಚಯಿಸಿತು. ಅದು 'ಶಿವಸಾಗರೇಶ್ವರ' ಎಂಬ ಸೊಗಸಾದ ಹೆಸರನ್ನು ಹೊಂದಿದ್ದು ಮನ್ಮಥನಂತೆ ಸುಂದರನೂ, ಸೂರ್ಯಪ್ರಕಾಶಮಾನದಂತಹ ಬೆಳಕನ್ನು, ಕಾಂತಿಯನ್ನು ಪಡೆದಿತ್ತು. ಈ ದೈವಕ್ಕೆ ಸಂಕುಳನೆಂಬ

ಏಳು ಹೆಡೆಯ ಸರ್ಪವು ಸುತ್ತುಹಾಕಿ ಕೊಡೆಯಂತೆ ರಕ್ಷಣೆಯಾಗಿತ್ತು. ಅಲ್ಲಿಗೆ ಸುರರೂ, ಧನುಜರೂ, ಬಂದು ಸೇರಿದ್ದರು. ಮುನಿಗಳು ವೇದಘೋಷ ಮಾಡುತ್ತಿದ್ದರೆ ಕಿನ್ನರರು ಗಾಯನ ಮಾಡುತ್ತಿದ್ದರು. ಸಾಗರೇಶ್ವರನು ಶಿವನ ನಿಜರೂಪವನ್ನು ತಾಳಿದಂತೆ ಇದ್ದನು. ಆ ಸ್ಥಳವು ಪರುಷದ ಕಣೆಯಾಗಿತ್ತು. ಅಲ್ಲಿ ಹಾಡುವ, ಹೊಗಳುವ ಭಕ್ತಿ ಸಮರ್ಪಿಸುವ ಸಂಭ್ರಮವು ವಿಶೇಷವಾಗಿತ್ತು. ತಂದೆಯು "..... ಕಂದಕೇಳಾಂ ಭಕ್ತಿಯೊಳಾ ದೇವನನೊಂದಿ ಮೈಯಿಕ್ಕಿ ಸಂತಸದಿಂದ ಮುಂದಿರ್ದು ಕಾಣಿಕೆಯಾಗುಗುಳ್ವೆನು ಕುರುವಿಂದವ ದಿನಚರಿಯೊಂದೊಂದ"(೧೫/೫೨) ಎಂದು ಪ್ರತಿನಿತ್ಯವೂ ಭಕ್ತಿಯಿಂದ, ಸಂಭ್ರಮದಿಂದ ಅಲ್ಲಿ ಹೋಗಿ ಕಾಣಿಕೆಯಾಗಿ ರತ್ನವನ್ನು ಉಗುಳಿಬರುತ್ತಿದ್ದೆ ಎನ್ನುವಷ್ಟರಲ್ಲಿ ಈ ಎಲ್ಲ ವಿಷಯವನ್ನು ಆಲಿಸುತ್ತಿದ್ದ ಲುಬ್ಧಕನೊಬ್ಬನು ಅಂದರೆ ಬೇಡನು ಹುಲ್ಲಿನ ಪೊದೆಯಿಂದ ಎದ್ದು ಮುಂದೆ ಬಂದು ಭೀತಿಯನ್ನು ಉಂಟುಮಾಡಿದನು. ಅವನನ್ನು ನೆನಸಿಕೊಂಡರೆ ಈಗಲೂ ಭಯವಾಗುತ್ತದೆ. ತಂದೆಯು ಅವನನ್ನು ಕುರಿತು ಎಚ್ಚರಿಕೆಯಿಂದಿರಬೇಕು. ಅವನಿಂದ ಜೀವಕ್ಕೆ ಕುತ್ತು ತರುವ ಪ್ರಸಂಗ ಬರಬಹುದು. ಗೆಳೆಯರೊಂದಿಗೆ ಇರು. ಒಂಟಿಯಾಗಿ ಎಲ್ಲಿಯೂ ಹೋಗಬೇಡ. ನನ್ನ ಈ ಸತ್ಯದ ಮಾತುಗಳನ್ನು ಮರೆಯಬೇಡ, ತಿರಸ್ಕರಿಸಬೇಡ ಎಂದಿತು. ಅಂದು ತಂದೆಯೊಂದಿಗೆ ಮನೆಗೆ ಬಂದು ತಾಯಿಯೊಂದಿಗೆ ಸುರಕ್ಷಿತವಾಗಿದ್ದೆನು. ಸಂಜೆಯಾಯಿತು. ಮರುದಿನ ಬೆಳಗ್ಗೆ ಸಾಗರೇಶ್ವರನ ಮಹಿಮೆಯನ್ನು ನೆನೆದು ತಂದೆಯೊಂದಿಗೆ ಹೊರಟೆನು. ಆಗ ಒದಗಿದ ಅಪಾಯ ಕುರಿತು ಹೇಳಿತು. "...... ತೊಡರ್ದರ್ಪೊಡ್ಡಿದುರುಳ್ಗಳು ಮುಂ ದುಃಕರ್ಮತೊಡರ್ಪಂತೆ"(೧೫/೬೧) ಬೆಳಗ್ಗೆ ಸೂರ್ಯೋದಯದ ಮುಂಚೆ ಅಪಾಯವನ್ನು ತರುವಂತ ಉರುಳ್ಗಳು ತಂದೆಯನ್ನು ಬಿಗಿದವು. ಇಂತಹ ಆಪತ್ತನ್ನು ಲೆಕ್ಕಿಸದೇ ತನ್ನ ಮಗನ ಮೇಲಿನ ಸ್ನೇಹ ಪ್ರೀತಿಯಿಂದಾಗಿ ನನ್ನಿಂದ ದೂರ ಹೋಗು ಎಂದು ಕೂಗಿದನು. ತಾನು ಎಂತಹ ಸಂಕಟಕ್ಕೆ ಒಳಗಾದೆನಲ್ಲ. ನನ್ನ ಸಂಸಾರವನ್ನು ದುಃಖಕ್ಕೆ ತಳ್ಳಿದನ್ನಲ್ಲ ಎನ್ನುತ್ತಾ ನನಗೆ ಧೈರ್ಯವನ್ನು ಹೇಳಿದನು. ಹೀಗಾಗುತ್ತದೆ ಎಂದು ಈ ಹಿಂದೆಯೇ ಭವಿಷ್ಯ ನುಡಿದಿದ್ದೆ ಅದು ಇಂದು ಸತ್ಯವಾಗಿದೆ.

"..... ಬೊಪ್ಪ ವಿಧಿಲಿಖಿತವ ಮೀಱುವನ್ನಾವನೀರೇಳುಜಗದೊಳು"(೧೫/೬೭) ತಂದೆಯ ವಿಧಿಯ ಬರಹವನ್ನು ಬದಲಾಯಿಸಲು ಯಾರಿಂದಲೂ ಸಾಧ್ಯವಿಲ್ಲ. ಬಂದ ಸ್ಥಿತಿಯನ್ನು ಎದುರಿಸದೇ ಬೇರೆ ಗತಿಯಿಲ್ಲ ಎಂದು ತಿಳಿಸಿತು. ನನ್ನ ತಂದೆಯು ನನಗೆ ಕೊರಗಬೇಡ, ಆಲಸ್ಯಮಾಡಬೇಡ ಬಾ ಎಂದು ಮುದ್ದಿಸಿ ತನ್ನ ಕೊಕ್ಕಿನಿಂದ ರತ್ನವನ್ನು ನನ್ನ ಬಾಯಿಗೆ ಇಟ್ಟಿತು. ಅದು "..... ಎಮ್ಮಯ ವಂಶಾಗತದಿಂದಲಿ ಬೀಜಮಾಮಣಿಯಿದು...."(೧೫/೬೯) ಅಂದರೆ ಪೂರ್ವಜರಿಂದ ಬಂದಂತಹ ರತ್ನ ಇದು ಇದನ್ನು ನೀನು ಪ್ರೀತಿಯಿಂದ ಭಕ್ತಿಯಿಂದ ಸಾಗರೇಶ್ವರನ ಸಭೆಗೆ ಹೋಗಿ ದಿನಂಪ್ರತಿ ಒಂದೊಂದು ಕಾಣಿಕೆಯಾಗಿ ಉಗುಳಿ ಆತನ ಕೃಪೆಗೆ ಪಾತ್ರನಾಗಿ ಸುಖವಾಗಿ ಬಾಳು ಎಂದು ಹೇಳಿದನು. ನನ್ನನ್ನು ನೆನಸಿಕೊಂಡು ದುಃಖಿಸಬೇಡ ಏನಾದನೊ, ಎಲ್ಲಿದ್ದಾನೊ ಏನು ತಿಳಿಯದಂತಾಗಿ ದಿಕ್ಕೆಟ್ಟು ಹಾಳಾಗಬೇಡ ಎಂದು ಬುದ್ಧಿವಾದವನ್ನು ಹೇಳಿದನು. ಮತ್ತೆ "...... ನಿನ್ನ ತಾಯೊಳು ಕಂದು ಕುಂದಿನಿಸ ನೆಕಾಣೆ..."(೧೫/೭೪)ತಾಯಿಯನ್ನು ಸಂತೈಯಿಸಲು ಹೇಳಿದನು. ಅವಳೊಂದಿಗೆ ಸುಖವಾಗಿರು. ನಾನಿಲ್ಲದ ದುಃಖ ಅವಳನ್ನು

ಆವರಿಸದಂತೆ ನೋಡಿಕೋ. ದುಃಖಿಸದೆ ತಾಯಿಯೊಂದಿಗೆ ಹಸನ್ಮುಖಿಯಾಗಿರು. ಆದರೆ ರತ್ನದ ಬಗ್ಗೆ ಕಾಳಜಿ ವಹಿಸಲು ಹೀಗೆ ಹೇಳಿದೆ.

"ನಾಣುಗೆಟ್ಟೊಡಲಾಸೆಗೋಸುಗ ಮಾಣದೆ
ಸ್ಥಾಣುವ ಸೇವೆಗೆ ತಳರ್ಕಂದ
ಕಾಣಿಗೆ ಕಡವರವನು ಪೊಡೆಗಾಜಿಗೆ
ಮಾಣಿಕವನು ಮಾಜದಿರೆಂದ"(೧೫/೭೮)

ಶಿವನ ಸೇವೆಗಾಗಿ ಈ ರತ್ನವನ್ನು ಮೀಸಲಿರಿಸಬೇಕು. ಅದು ಬಿಟ್ಟು ಆಸೆಯಿಂದ ದೈಹಿಕ ಸುಖಕ್ಕಾಗಿ ಮಾರಿದರೆ ಅದು ನಾಲ್ಕಾಣೆಗೆ ಬಂಗಾರವನ್ನು, ಪೊಡೆಗಾಜಿಗೆ ಮಾಣಿಕ್ಯವನ್ನು ಮಾರಿದಂತಾಗುತ್ತದೆ ಎಂದು ಹೋಲಿಕೆ ನೀಡಿ ಬುದ್ಧಿಯನ್ನು ಹೇಳಿತು.

ತಂದೆಯು ಹೇಳಿದ ನಿರ್ದಶನದ ಮಾತುಗಳನ್ನು ಮನದಲ್ಲಿಟ್ಟುಕೊಂಡು ಮರುಕಪಡುತ್ತಾ ಸಾಗರೇಶ್ವರನನ್ನು ದರ್ಶಿಸಿ ಬೇಗನೆ ಕಾಣೆಯಾದ ತಂದೆಯನ್ನು ಕಾಣುವ ತವಕದಿಂದ ಸಾಗರೇಶ್ವರನ ಸಭೆಗೆ ಹೋದೆ ಅಲ್ಲಿ ಆಗಲೇ ಸಭೆ ಮುಗಿದಿತ್ತು. ಅಲ್ಲಿ ಜನರಾರು ನನ್ನನ್ನು ಗುರುತಿಸಲಿಲ್ಲ. ಏಕೆಂದರೆ ನಾನು ಯಾವತ್ತೂ ತಂದೆಯೊಂದಿಗೆ ಹೋಗಿ ಪರಿಚಿತನಾಗಿರಲಿಲ್ಲ, ಸಾಗರೇಶ್ವರನ ಕೃಪೆಗೆ ಪಾತ್ರನಾಗಿರಲಿಲ್ಲ. ಹೀಗಾಗಿ ನನ್ನ ಸ್ಥಿತಿಯು "..... ತುಪ್ಪವೊಕ್ಕಣಲ್‌ಬೆಂದವೊಲಾಯ್ತು"(೧೫/೮೪) ಎಂದು ಮರುಗಿದೆನು.

ಅಲ್ಲಿಂದ ತಂದೆ ಬಂಧನಕ್ಕೆ ಒಳಗಾದ ಸ್ಥಳಕ್ಕೆ ಬಂದು ನಾಲ್ಕು ದಿಕ್ಕಿಗೂ ನೋಡಿ ಕಾಣದೆ ಹಂಬಲಿಸಿ ತಂದೆ, ತಾಯಿ ಬಗ್ಗೆ ಸಂಕಟವನ್ನು ಹೀಗೆ ವ್ಯಕ್ತಪಡಿಸಿತು. ನನ್ನನ್ನು ಸಾಗರೇಶ್ವರನ ಸಭೆಗೆ ಕಳುಹಿಸಿ ನೀನು ಎಲ್ಲಿ ಅಡಗಿದ್ದೀಯಾ, ತಾಯಿ ನನ್ನನ್ನು ಕೇಳಿದರೆ ಏನೆಂದು ಹೇಳಲಿ, ಆನಂತರ ಬರುತ್ತಾನೆ ಎನ್ನಲೇ, ಮುಂದೊಂದು ದಿನ ಬರುವನೆಂದು ಹೇಳಲೇ, ನೊಂದನೆಂದು ಹೇಳಲೇ ಎಂದೆನು. ಹೀಗೆ ದುಃಖಿಸುತ್ತಾ ಮನೆಗೆ ಹೋಗಿ ತಾಯಿಯನ್ನು ಕಂಡೆನು. ತಾಯಿಯೂ ಮನಸ್ಸಿನಲ್ಲೇ ಮಗ ಮತ್ತು ಗಂಡ ಇಬ್ಬರೂ ಬಾರದಿದ್ದುದಕ್ಕಾಗಿ ಕಾದು ಬಳಲಿ ಬೆಂಡಾಗಿದ್ದಳು. ಅವಳು ಮತಿಭ್ರಮೆಗೊಳಗಾಗಿ ಹಲವಾರು ಯೋಚನೆಯಲ್ಲಿ ತೊಡಗಿದ್ದಳು. ತಾಯಿ ತಮ್ಮ ವಂಶದ ಬಗ್ಗೆ ಹೀಗೆ ಹೇಳಿದಳು.

ಈ ಗುಣವೀ ಸೌಂದರವೀಯಕ್ಕಱು
ಯೀಗರುವಿಕೆಯಿ ನಡವಳಿ
ನಾಗರಿಕಾನ್ವಯದೊಳು ನಿಮಗಲ್ಲದಿ
ನ್ನಾಗದು ಪೆಱರ್ಗೆಂದಳಲ್ಲಳು (೧೫/೧೦೦)

ನಾಗರಿಕ ಪಕ್ಷಿಯ ವಂಶವು ವಿಶೇಷವಾದದ್ದು ಅದು ಗುಣ, ಸೌಂದರ್ಯ, ಪ್ರೀತಿ, ಕರುಣೆ ಈ ಲಕ್ಷಣಗಳು ವಂಶಪಾರಂಪರ್ಯವಾಗಿ ಬಂದಿವೆ. ಇದು ಬೇರಾರಿಗೂ ಇರಲು ಸಾಧ್ಯವಿಲ್ಲ ಎಂದು ತಾಯಿ ಪಕ್ಷಿಯು ತಿಳಿಸಿತು. ಆದರೆ ಇಂತಹ ದುರ್ಗತಿ ಬಂದೊದಗಬೇಕಾದರೆ ಗಂಡ, ಮಗ, ನನ್ನದೇನಾದರು ತಪ್ಪಿದೆಯೇ, ಇಲ್ಲವಲ್ಲ ನಾವೆಲ್ಲರೂ ಅನ್ಯೋನ್ಯವಾಗಿ ಪ್ರೀತಿ, ಸ್ನೇಹದಿಂದಲೇ

ಬಾಳುತ್ತಿದ್ದೆವು. ನಮ್ಮನ್ನು ಏಕೆ ಹೀಗೆ ದೂರಮಾಡಿದ್ದೀಯಾ. ಹೆಣ್ಣಾದ ನಾನು ಗಂಡ, ಮಗ ಇಲ್ಲದೇ ಒಂಟಿಯಾಗಿ ಬದುಕುವುದಾದರೂ ಹೇಗೆ, ಎಂದು ಮರುಗುತ್ತಾ, ತಾನೇ ಪಾಪಿ ಎಂದು ನಿಂದಿಸಿಕೊಳ್ಳುವಳು. ಮಗನನ್ನು ಕುರಿತು ನನ್ನನ್ನು ಸ್ವರ್ಗಕ್ಕೆ ಕಳುಹಿಸಿ ತಂದೆಗೂ ನನಗೂ ನೀನು ಒಮ್ಮೆಯೇ ಅಳುವ ಮೂಲಕ ಇಬ್ಬರ ಋಣ ತೀರಿಸು ಎಂದಳು.

ನಾಗರಿಕ ಮರಿಪಕ್ಷಿಯು ತಾಯಿಯನ್ನು ಕುರಿತು ಬಾಲ್ಯದಲ್ಲಿ ನನ್ನನ್ನು ಸುಖವಾಗಿ ಇಟ್ಟಿದ್ದೀರಿ ಆದರೆ ನೀವು ನನ್ನನ್ನು ಶೋಕಾನ್ವಿತನಾಗೆಂದು ಪಡೆದಿದ್ದಿರೋ ಏನೋ ತಿಳಿಯದು. ಏನೇ ಆದರೂ ವಂಶಗತವಾಗಿ ಬಂದ ರತ್ನವನ್ನು ತಂದೆ, ತಾತ ನಿನಗೆ ಕೊಟ್ಟಿದ್ದಾರಲ್ಲ ಅದನ್ನೇ ನೀನು ಮುಂದುವರಿಸುತ್ತಾ ಬಂದ ಸಂಕಟವನ್ನು ಪಾರುಮಾಡು ಎಂದಳು.

ತಾಯಿ ಮತ್ತು ಮಗ ಪಕ್ಷಿಗಳಿಬ್ಬರು ಸಾಗರೇಶ್ವರನ ಸಭೆಗೆ ಹೋಗಿ ಭಕ್ತಿಯಿಂದ ಸೇವೆ ಮಾಡಿ ಬಂಧನಕ್ಕೊಳಗಾದ ತಂದೆ ಪಕ್ಷಿಯನ್ನು ಕಾಣಬಹುದೆಂಬ ಆಸೆಯಿಂದ ಇದ್ದೆವು. ನನ್ನ ತಾಯಿಯ ವಿವೇಕದ, ಅನುನಯದ, ಶೋಕದ ಮಾತುಗಳನ್ನು ಕೇಳಿ ನಾನು ಸಾಗರೇಶ್ವರನಲ್ಲಿ ಧ್ಯಾನಾಸಕ್ತನಾದೆನು. ತಾಯಿ ಜೊತೆ ಸಾಗರೇಶ್ವರನ ಸಭೆಗೆ ಮುಂಚಿತವಾಗಿಯೆ ಹೋದೆನು. ಆ ಸ್ಥಳವು ಪ್ರಕಾಶಮಾನವಾಗಿದ್ದು ಮುಕ್ತಿಯನ್ನು ನೀಡುವಂತೆ ಇತ್ತು. ಅಲ್ಲಿ ಸುರರು, ಧನುಜರು, ಸಿದ್ಧರು, ಗರುಡರು, ಗಂಧರ್ವರು, ಸಾಗರನಾಥನನ್ನು ಸುತ್ತುವರೆದಿದ್ದರು. ಶಿವಸಾಗರೇಶ್ವರನು ಪಾರ್ವತಿ, ಗಂಗೆಯರೊಂದಿಗೆ ಸಂಕುಳ ಎಂಬ ಸರ್ಪದ ಹಾಸಿಗೆಯ ಮೇಲೆ ಕುಳಿತಿರುವುದನ್ನು ಕಂಡು ಆತನ ಕೃಪೆಗೆ ಪಾತ್ರನಾದೆ. ತೇಜೋನಿಧಿಯಂತೆ ಇರುವ ದೇವರಿಗೆ ಹೊಳೆಯುವಂತಹ ರತ್ನವನ್ನು ಉಗುಳಿ ತಂದೆಯ ಕುರಿತು ಬೇಡಿಕೊಂಡು ತಾಯಿಯ ಸಂಕಟವನ್ನು ತಿಳಿಸಿದೆನು. ಆಗ ದೈವವು ಧೈರ್ಯವನ್ನು ನೀಡಿ ನಿನ್ನ ತಂದೆಯನ್ನು ತೋರಿಸುವೆನು ಅದಕ್ಕೆ ನೀನು ವಿಕ್ರಮನನ್ನು ಕಾಣಲು ಹೇಳಿ ಕಳುಹಿಸಿತು.

ವಿಕ್ರಮನ ಪೂರ್ವ ವೃತ್ತಾಂತ ಕುರಿತು ಈ ರೀತಿ ಇದೆ.

ಇನಕುಲಜನು ಜಯಶೇಖರರಾಯನ
ತನಯನುಮೆ ಮುಡಿಯಲರಿಂದ
ಜನಿತನು ಶಶಿವೊಳಲಾಣ್ಮನು ವಿಕ್ರಮ
ನೆನಿಪೊರ್ವನುಂಟೆಂದವನೀಶ (೧೬/೫೧)

ಸಾಗರೇಶ್ವರ ದೈವ ಶಶಿವೊಳಲನ್ನು ಆಳುವ ರಾಜ ಜಯಶೇಖರನು ಸೂರ್ಯವಂಶ ಶ್ರೇಷ್ಟನಾಗಿದ್ದು, ವಿಕ್ರಮನೆಂಬ ಮಗನನ್ನು ಪಾರ್ವತಿಯ ಮುಡಿಯ ಮಂದಾರ ಹೂವಿನಿಂದ ಜನ್ಮ ಪಡೆದು 'ಜಸಗಂಪ' ಎಂದು ಪ್ರಖ್ಯಾತಿಯನ್ನು ಪಡೆದ ನನ್ನ ಭಕ್ತನಾಗಿದ್ದಾನೆ ಎಂದು ವಿವರಿಸಿದೆ.

ಮರಿನಾಗರಿಕ ಪಕ್ಷಿಯು ತಾಯಿಯ ಹತ್ತಿರ ಒಪ್ಪಿಗೆ ಪಡೆದು ತಂದೆಯನ್ನು ಕಾಣುವ ಹಂಬಲದಿಂದ ಹೊರಟು ಛಪ್ಪನ್ನ ದೇಶಗಳನ್ನು ಸುತ್ತಿ ಅಲ್ಲೆಲ್ಲಿಯೂ ವಿಕ್ರಮನನ್ನು ಕಾಣದೆ ವಿಶ್ರಾಂತಿಗೆಂದು ಅರಣ್ಯಕ್ಕೆ ಬಂದು ಅಲ್ಲಿ ಶಬರರ ಕೈಗೆ ಸಿಕ್ಕಿಕೊಂಡಿತು. ಬೇಡರು ನಾಗರಿಕ

ಪಕ್ಷಿಯನ್ನು ವಿಕ್ರಮರಾಜನಿಗೆ ಕಾಣಿಕೆಯಾಗಿ ಅರ್ಪಿಸಿದರು. ಹಾಗಾಗಿ ಪಕ್ಷಿ ಸಾಗರೇಶ್ವರನ ಹೇಳಿಕೆಯಂತೆ ವಿಕ್ರಮನನ್ನು ಸೇರಿತು. ಪಕ್ಷಿಯೂ ತನ್ನದೂ ಸೇವೆಯೆಂದು ತಿಳಿದು ರತ್ನವನ್ನು ವಿಕ್ರಮನಿಗೆ ಉಗುಳಿತು. ವಿಕ್ರಮನು ನಾಗರಿಕ ಪಕ್ಷಿಯನ್ನು ಹಾರೈಸಿ ಅದರ ಕತೆಯನ್ನು ಆಲಿಸುತ್ತಿದ್ದನು.

ಹೀಗೆ ನಾಗರಿಕ ಪಕ್ಷಿಯು ತನ್ನ ಪೂರ್ವವೃತ್ತಾಂತವನ್ನು ವಿಕ್ರಮರಾಜನಿಗೆ ಪರಿಚಯಿಸುತ್ತಾ ರತ್ನಮೇಖಲೆ ಎಂಬ ಪರ್ವತ, ಸಮುದ್ರ, ಸಾಗರೇಶ್ವರನ ಮಹಿಮೆ, ತಂದೆ-ತಾಯಿ, ಮಕ್ಕಳ ಬಾಂಧವ್ಯ, ಸತಿ-ಪತಿ,ವಿರಹ ಕುರಿತಾದ ವರ್ಣನೆಯನ್ನು ಮಾಡಿತು.

### ೫.೧.೬. ಬರಗೆಯ ಚಿತ್ರಣ

ಬರಗೆಯು ಶಬರನ ಪತ್ನಿ. ಇವಳು ನಾಗರಿಕ ಪಕ್ಷಿಯ ಸ್ನೇಹ ಬೆಳೆಸಿಕೊಂಡು ಅದರ ಪ್ರಾಣ ರಕ್ಷಿಸಿ ತನ್ನ ಸ್ವಾರ್ಥಕ್ಕಾಗಿ ಉಪಯೋಗಿಸಿಕೊಂಡು ತನ್ನ (ಶಬರ) ಪತಿಯನ್ನು ತಪ್ಪಿತಸ್ಥನನ್ನಾಗಿ ಮಾಡಿ ಕೊಲ್ಲಿಸುವ ಪ್ರಸಂಗ ದುರಂತವೆಂಬಂತೆ ಮೂಡಿಬಂದಿದೆ. ನಾಗರಿಕ ಪಕ್ಷಿಯ ಚಾಣಾಕ್ಷ ಬುದ್ಧಿಯಿಂದ ಮಾದಲನೊಂದಿಗೆ ಬರಗೆ ಸೇರುವುದು ಸಾಧ್ಯವಾಗುತ್ತದೆ. ಮಾದಲನು ಕಾವಲಾಗಿದ್ದ ಉದ್ಯಾನವನಕ್ಕೆ ಪತ್ರಿಣಿಯನ್ನು ಕರೆಯಿಸಿ ಬರಗೆಯನ್ನು ತನ್ನೊಂದಿಗೆ ಬದುಕುವಂತೆ ವ್ಯವಸ್ಥೆ ಮಾಡುವುದನ್ನು ಕಾಣುತ್ತೇವೆ.

ಸೊಬಗಿನ ಸೋನೆ ಕಾವ್ಯದಲ್ಲಿ ಸಂಧಿ ೧೮ರಿಂದ ೨೧ರವರೆಗೆ ಒಟ್ಟು ೩೨೩ ಪದ್ಯಗಳಲ್ಲಿ ಬರಗೆಯ ಕುರಿತು ವರ್ಣಿಸಲ್ಪಟ್ಟಿದೆ. ಬೇಡರಿಂದ ಕಾಣಿಕೆಯಾಗಿ ಬಂದ ನಾಗರಿಕಪಕ್ಷಿಯು ವಿಕ್ರಮನ ಕೈ ಸೇರಿದಾಗ ಪಕ್ಷಿಯು ತನ್ನ ವೃತ್ತಾಂತವನ್ನು ವಿವರಿಸಿದ ನಂತರ ಅಲ್ಲಿಗೆ ಮತ್ತೊಂದು ಪಕ್ಷಿ ಅದು ನಾಗರಿಕ ಪಕ್ಷಿ ಸಾದೃಶ್ಯವಾದ ರೀತಿಯಲ್ಲಿತ್ತು. ಈ ಪಕ್ಷಿಯು ನಾಗರಿಕ ಪಕ್ಷಿಯ ತಂದೆಯಾಗಿತ್ತು. ಬಂಧನಕ್ಕೆ ಒಳಗಾದಾಗ ಬೇಡನ ಮನೆಯನ್ನು ಸೇರಿ ಸಂದರ್ಭದ ಲಾಭವನ್ನು ಪಡೆದು ಪ್ರಾಣ ಉಳಿಸಿಕೊಂಡು ಬರಗೆಯ ನೀಚತನದ ಕೆಲಸಕ್ಕೆ ಸಹಕರಿಸುವ ಪರಿಸ್ಥಿತಿಯನ್ನು ತಂದುಕೊಳ್ಳುತ್ತದೆ.

ವಿಕ್ರಮಕುಮಾರನು ಬಂಧನಕ್ಕೆ ಒಳಗಾಗಿದ್ದ ನಾಗರಿಕ ಪಕ್ಷಿಯ ತಂದೆಪಕ್ಷಿಯ ಮನದಾಳದ ಮಾತನ್ನು ಆಲಿಸುತ್ತಾನೆ. ಬಂಧನದಲ್ಲಿದ್ದಾಗ ಬೇಡರು ಕಿರುಗತ್ತಿಯನ್ನು ತಿವಿದು ಪ್ರಾಣ ತೆಗೆಯಲು ಮುಂದಾಗಿದ್ದರು ಅವರು

"ದಿನಚರಿ ಸಾಗರೇಶನ ಮುಂದೆ ರನ್ನಗ
ಳನು ನೀನುಗುಳ್ದನೆಂದೊಲವಿಂದ
ತನಯಗೆ ನೀನಾಗಲುಸುರಿದೆ ನಿನ್ನೊಡ
ಲನು ಸೀಳಿ ತೆಗೆವೆ ಮಾಮಣಿಗಳ" (೧೪/೪೧)

ಎನ್ನುತ್ತ ಜೀವ ಬೆದರಿಕೆಯನ್ನು ಹಾಕಿದರು.

ರತ್ನಮಾಣಿಕ್ಯದ ಆಸೆಗಾಗಿ ನಾಗರಿಕ ಪಕ್ಷಿಯ ಪ್ರಾಣ ತೆಗೆಯಲು ಆತುರದಲ್ಲಿದ್ದ ಶಬರಪತಿಯನ್ನು ನಾಗರಿಕ ತಂದೆ ಪಕ್ಷಿ ವಿನಂತಿಸಿಕೊಳ್ಳುವ ದೃಶ್ಯವಿದೆ.

ತಂದೆ ಕೇಳೇಳೆಂಟುದಿನ ಮುಟ್ಟ ನೀ ನಿಜ
ಮಂದಿರ ಕೊಯ್ದಿನಿದುಣಿಸನು
ತಂದೂಡು ಮೇಲ್ನೀನು ದಣಿವನ್ನಬರಕುರು
ವಿಂದವನುಗುಳ್ವೆನೆಂದುಸರ್ದನು (೧೭/೪೬)

ಬೇಡನಿಂದ ಉಪಚಾರವನ್ನು ಬಯಸುತ್ತ ಏಳೆಂಟು ದಿನಗಳ ಸಮಯಾವಕಾಶವನ್ನು ಕೇಳಿಕೊಂಡಿತು. ಆನಂತರ ಅಮೂಲ್ಯವಾದ ರತ್ನವನ್ನು ಒತ್ತಾಯ ಪಡಿಸಿದರೆ ಕೊಡಲು ಆಗುವುದಿಲ್ಲವೆಂದು ಪಕ್ಷಿಯು ತಿಳಿಸಿತು. ಪಕ್ಷಿಯ ಮಾತಿನಂತೆ ಶಬರಪತಿಯು ತನ್ನ ಮನೆಗೆ ಕರೆದುಕೊಂಡು ಹೋದನು.

ಬೇಡನ ಜೊತೆಯಲ್ಲಿ ವಿನಯವಾಗಿ ಮಾತನಾಡುತ್ತಾ ಆತನನ್ನು ಪಕ್ಷಿಯು ಹೊಗಳಿತು. ಶಬರನಿದ್ದ ಪಟ್ಟಣದ ವೈಭವವನ್ನು ಕೊಂಡಾಡಿತು. ಸಂತೋಷದಿಂದ ಶಬರನು ಪರಿಚಯಿಸಿತು. 'ರತ್ನಗಿರಿ' ಎಂಬ ಪಟ್ಟಣ, ಇದನ್ನಾಳುವ ರಾಜನನ್ನು ಕುರಿತು

ಮಾತುಳನೆಂದು ಮಕರಶೇಖರನೆಂ
ದೀತಗೆ ಪೆಸರೆರಡೆಸವವು
ಪೀತಾನನೆಯೆಂಬಳು ರಾಣಿ ಕುವರಿ ವಿ
ಖ್ಯಾತೆ ಪತ್ರಿಣಿಯೆಂಬಳು ಕೇಳ (೧೭/೭೦)

ಅಂದರೆ ಮಾತುಳ ಅಥವ ಮಕರಶೇಖರನೆಂಬ ಎರಡು ಹೆಸರಿದೆ. ಪೀತಾನನೆ ಎಂಬ ರಾಣಿ ಇವರ ಮಗಳು ರೂಪವತಿ, ಗುಣವತಿಯಾದ 'ಪತ್ರಿಣಿ' ಎಂಬುವಳಿದ್ದಾಳೆ ಎಂದು ಹೇಳಿದನು. ಆ ಪಟ್ಟಣದಲ್ಲಿ ತನ್ನ ಮನೆಯನ್ನು ಪರಿಚಯಿಸುತ್ತಾ ಇದ್ದಾಗ ತನ್ನ ಪತ್ನಿ ಬೇಡತಿಯನ್ನು ಕರೆದು ಹೇಳಿದನು. ಅವಳು ಪಕ್ಷಿ ಬಗ್ಗೆ ತನ್ನ ಪತಿಯನ್ನು ಕೇಳಿದಳು.

ಶಬರೇಶ್ವರ ಕೇಳೀ ನವರತ್ನ
ಪ್ರಭನು ವಿಚಿತ್ರ ವಿಭ್ರಮಗಿದು
ತ್ರಿಭುವನಕತ್ಯಾಶ್ಚರಿಯಹ ವಿಹಂಗಮ
ವಿಭು ಸಿಕ್ಕಿತೆಂದು ಕೇಳ್ದಳು (೧೮/೪೭)

ಅಂದರೆ ಮೂರು ಲೋಕದಲ್ಲಿ ಅತಿ ಆಶ್ಚರ್ಯಕರವಾದಂತಹ ಪಕ್ಷಿ ಇದು, ಇದು ನವರತ್ನವನ್ನು ಹೊಂದಿರುವ ವಿಚಿತ್ರವಾದ ಪಕ್ಷಿ ಎಲ್ಲಿ ಸಿಕ್ಕಿತೆಂದು ಆಶ್ಚರ್ಯಪಟ್ಟಳು. ಕುತೂಹಲದಿಂದ ಪಕ್ಷಿ ಕುರಿತು ನೀನು "ಪುಟ್ಟಿದ ನೆಲನಾವುದು ನಿನ್ನ ಪೆಸರೇನು" ಎಂದು ಪ್ರಶ್ನಿಸಿದಳು. ಪಕ್ಷಿಯು ತನ್ನನ್ನು ಕುರಿತು

ಪುಟ್ಟಿದೆ ರತ್ನಮೇಖಲೆಯೊಳಲ್ಲಿಯೆಯಿಲ್ಲಿ
ಮುಟ್ಟಿದೆ ಸಾಗರವೆಸರಾಂತು
ಕಟ್ಟಿತು ನಿನ್ನಿನಿಯನ ಪಾಶ ಬಳಿಕೀ
ಬಟ್ಟೆಗೆ ಬಂದೆ ಹೇಳುವೆನೇನ (೧೮/೫೪)

'ರತ್ನಮೇಖಲೆ' ಎಂಬ ಪರ್ವತದಲ್ಲಿ ಹುಟ್ಟಿ ಸಾಗರೇಶ್ವರನ ಸೇವೆ ಮಾಡುತ್ತಿದ್ದಾಗ ದಾರಿಯಲ್ಲಿ

ನಿನ್ನ ಪ್ರಿಯತಮನಿಂದ ಬಂಧನಕ್ಕೆ ಒಳಗಾಗಿ ಇಲ್ಲಿಗೆ ಬಂದಿದ್ದೇನೆ. ಇನ್ನು ಎಂಟು ದಿನಗಳೊಳಗಾಗಿ ರತ್ನವನ್ನುಗುಳದಿದ್ದರೆ ನಿನ್ನ ಪತಿ ನನ್ನನ್ನು ಕೊಲ್ಲುತ್ತಾನೆ ಅದಕ್ಕೆ ನೀನು ಮರುಜನ್ಮ ಕೊಡಬೇಕೆಂದು ಬೇಡಿಕೊಂಡೆನು. ಇಬ್ಬರಲ್ಲಿ ಆತ್ಮೀಯತೆ ಉಂಟಾಯಿತು. ಶಬರಿಯು ಜಾರೆಯೆಂದು ಅವಳ ಇಚ್ಛೆಯಂತೆ ನಡೆಯದೇ ಬೇರೆ ದಾರಿಯಿಲ್ಲವೆಂದು ಮನದಲ್ಲಿ ಬಗೆದು "...ಸಲೆ ಕಾರ್ಯಾಂತಕೆ ವಸುದೇವ ಕತ್ತೆ ಕಾಲ್ಪಳದನೆಂದೆಂಬ ನಾಣ್ಣುಡಿಯಂತೆ"(೧೮/೬೨) ಇಬ್ಬಂದಿತನಕ್ಕೆ ಒಳಗಾದೆ. ಅಂದು ರಾತ್ರಿ ಶಬರಿಯು ಯಾರಿಗೂ ಗೊತ್ತಾಗದಂತೆ ಹೊರಹೋಗಿ ಮತ್ತೆ ಮರಳಿ ಬಂದು ಮತ್ತೆ ತನ್ನ ಗಂಡನಿಗೆ ಗೊತ್ತಾಗದಂತೆ ಮಲಗಿದಳು. ಇವಳು ನಲ್ಲನೆ ಹಾಹಾ ಎಂದು ತೋರಿಕೆಗಾಗಿ ನಡೆದುಕೊಂಡು ಬೆದರಿದಳು. ಶಬರನು ಏಕೆ ಹೆದರಿದೆ ಎಂದಾಗ ಆಕೆಯು ತನ್ನ ಕನಸಿನಲ್ಲಿ ಒಬ್ಬಾತನು ಬಂದು ನನ್ನಲ್ಲಿ ಕಣ್ಣಿಟ್ಟು ಮೆಲ್ಲನೆ ಬಂದು ಹೋಗೆಂದನು ಅದಕ್ಕಾಗಿ ಅಂಜಿದೆ ಎಂದು ಹೇಳಿದಳು. ಶಬರನು ಹೆದರಬೇಡ ಎಂದು ಅವಳನ್ನು ಅಪ್ಪಿದನು. ಅಂದು ಬೆಳಗ್ಗೆ ಶಬರನಿಲ್ಲದಾಗ ರಾತ್ರಿ ಒಬ್ಬಳೇ ಎಲ್ಲಿಗೆ ಹೋಗಿದ್ದೆ ಎಂದು ಪಕ್ಷಿ ಕೇಳಿತು. ಅದಕ್ಕೆ ಶಬರಿಬರಗೆಯು ನಾಚಿಕೆಯನ್ನು ಬಿಟ್ಟು ಹೇಳಿದಳು.

> ಪಕ್ಕಿ ಕೇಳ್ಮಜೆಯೇತಕೆ ಪತ್ರಿಣಿಯಳ್ತಿ
> ಗಿಕ್ಕೆಯೆನಿಪ ನಂದನವನು
> ರಕ್ಕಿಪ ಮಾದಲನೆಂಬೋರ್ವನೆನ್ನಜೀ
> ವಕ್ಕೆಜೆಯನು ಅಲ್ಲಿಗೆಯ್ದಿರ್ದೆ (೧೯/೧೫)

ಪತ್ರಿಣಿಯ ನಂದನವನ್ನು ರಕ್ಷಿಸುವ ಮಾದಲನೆಂಬುವನಲ್ಲಿಗೆ ಹೋಗಿಬಂದೆ ಅವನೇ ನನಗೆ ಪ್ರೀತಿಪಾತ್ರನೆಂದೂ ಅದಕ್ಕೆ ನನ್ನ ಇಚ್ಛೆಯನ್ನು ಪೂರೈಸಬೇಕೆಂದು ನಿನ್ನನ್ನು ಸೆರೆಯಿಂದ ಬಿಡುಸುವೆ ಎಂದು ಆಸೆ ತೋರಿಸಿದಳು. ಪಕ್ಷಿ ಅವಳ ಮಾತಿಗೆ ಒಪ್ಪಿಗೆಯನ್ನು ನೀಡಿ ತನ್ನನ್ನು ಮಾದಲನಿಗೆ ಮಾರಲು ಹೇಳಿತು. ರಾತ್ರಿಯ ಹೊತ್ತಿಗೆ ಶಬರ ಯಾವ ಬೇಟೆಯೂ ಸಿಗದೇ ಬರಿಗೈಯಲ್ಲಿ ಮನೆಗೆ ಬಂದನು. ನೀನು ಹೇಳಿದ ಹಾಗೆ ಎಂಟು ದಿನಗಳು ಕಳೆದಿವೆ. ರತ್ನವನ್ನು ಉಗಳದಿದ್ದರೆ ಜೀವ ತೆಗೆಯುವೆ ಎಂದು ಕೈಯಲ್ಲಿ ಹಿಡಿದನು. ಪಕ್ಷಿಯ ಪ್ರಾಣ ಸಂಕಟಕ್ಕೆ ಬರಗೆ ಸಹಾಯಕ್ಕೆ ಬಂದಳು. ಇದನ್ನು ಕೊಂದರೂ ಒಂದು ಹೊತ್ತಿಗೆ ಆಹಾರ ಆಗುವುದಿಲ್ಲ ಮಾರುವುದೇ ಸರಿ ಎಂದಳು. ಈ ಹಿಂದೆಯೂ ಏಳುನೂರು ಹೊನ್ನುಗಳಿಸಿ ಮಾರಲು ಒಪ್ಪಿದಾಗ ನೀನು ಬೇಡವೆಂದು ಹೇಳಿದ್ದೆ. ಈಗಲಾದರೂ ಮಾರಲು ಮತ್ತೆ ಹೇಳಿದನು. ಬರಗೆಯು ತನ್ನಲ್ಲಿದ್ದ ಅಪದ್ಧನದ ಏಳುನೂರು ಹೊನ್ನುಗಳನ್ನು ತೆಗೆದು ಪತಿಗೆ ಕೊಟ್ಟು ಪಕ್ಷಿಯನ್ನು ಮಾದನಲ್ಲಿಗೆ ಕಳುಹಿಸಿದಳು. ಮಾದಲನು ಪಕ್ಷಿಗೆ ಬಿಲ್ಲನ ಬಲೆಗೆ ಹೇಗೆ ಸಿಲುಕಿದೆ ತಿಳಿಸು ಎಂದನು. ಪಕ್ಷಿಯು ಅದು 'ವಿಧಿಯ ಬರಹವನ್ನು ಮೀರಲು ಯಾರಿಗೂ ಸಾಧ್ಯವಿಲ್ಲ, ನಾನು ಬಿಯದನ ಬಲೆಗೆ ಬಿದ್ದುದು ವಿಧಿಬರಹವೇ ಆಗಿದೆ. ಆದರೆ ಮಾದಲನಿಗೆ "ನಾಕೊಟ್ಟ ಭಾಷೆ ಬೆಟ್ಟಿತುಯನ್ನಮಾತೆ ನಿರಾಕರಿಸದಿರಕ್ಕನೊಲಿವರೆ"(೧೯/೭೩) ಎಂದು ತನ್ನ ಮಾತಿನ ಬಗ್ಗೆ ನಂಬಿಕೆ ಮೂಡಿಸಿತು. ಮಾದಲನೂ ಕೂಡ "....ಚೆನ್ನೆ ಬರಗೆ ಬಂದೆಡೆ ಸಾಕು ನೀ ಬೇಡಿತನ್ನೀವೆ ನುಡಿ ನಾಗರಿಕಯೆಂದ"(೧೯/೭೬) ತನ್ನ ಮನಸ್ಸಿನ ಆಸೆಯುಳ್ಳ ಬರಗೆ ಒಲಿಯುವಂತೆ ನೀನು

ಮಾಡಿದರೆ ಸಾಕು ಬೇಕಾದುದನ್ನು ತಂದುಕೊಡುವೆ ಎಂದು ನಾಗರಿಕ ಪಕ್ಷಿಗೆ ಭರವಸೆಯನ್ನು ನೀಡಿದನು. ಅದಕ್ಕೆ ಹಕ್ಕಿಯು ರಾಜಕುಮಾರಿ ಪತ್ರಿಣಿಯು ಸದಾ ತೊಡುವ ಪದಕವನ್ನು ತಂದುಕೊಂಡುವಂತೆ ಹೇಳಿತು. ಮಾದಲನು ರಹಸ್ಯವಾಗಿ ಪತ್ರಿಣಿಯ ಪದಕವನ್ನು ತಂದು, ಹಕ್ಕಿಯೊಂದಿಗೆ ಶಬರನ ಮನೆಗೆ ಮಧ್ಯರಾತ್ರಿಯಲ್ಲಿ ಹೋಗಿ ಬರಗೆಗೆ ಆ ಪದಕವನ್ನು ಕೊಟ್ಟು ಮರಳಿದನು.

ಅತ್ತ ಮಾತುಳನ ಅರಮನೆಯಲ್ಲಿ ಪತ್ರಿಣಿಯ ಪದಕದ ಕಳುವಿನ ಸುದ್ಧಿಯನ್ನು ತಳವಾರರು ಬಹಿರಂಗ ಪಡಿಸಿದರು. ಡಂಗುರ ಹೊಡೆದು ಸಾರಿದರು. ಕಳಬಳನೆಂಬ ತಳವಾರ ಶಬರನ ಮನೆಗೆ ಬಂದು ಪದಕವನ್ನು ಶೋಧಿಸಿದನು. ಬರಗೆಯು ತಮ್ಮ ಮನೆಯ ಪೆಟ್ಟಿಗೆಯಿಂದ ಆ ಪದಕವನ್ನು ತೆಗೆದುಕೊಟ್ಟು ತನ್ನ ಪತಿಯು ಅಪರಾಧವನ್ನು ಮಾಡಿದ್ದಾನೆ. ಅವನನ್ನು ಮನ್ನಿಸಬೇಕೆಂದು ಬೇಡಿಕೊಂಡಳು. ಕಳಬಳ ಎಂಬ ತಳವಾರ "ಪಜ್ಜೆಯಿರಲು ಪರಿಕಿಸಲೇಕೆಯೆಂದೆಂಬ ಸಜ್ಜನಿಕೆಯ ಸಾರ್ಚುವುದೊಂದು ಉಜ್ಜುಗವನು ನೋಡೆನುತಲಿ"(೨೦/೫೧) ಎಂದು ಸಿಟ್ಟಿಗೆದ್ದನು.

ಬರಗೆಯು ದುಷ್ಟಬೇಡನೊಂದಿಗೆ "ಬುಟ್ಟಿಯೊಳಗಿದ್ದ ಹಾವಿನಂತೆ" ಇದ್ದಳು. ಇವಳನ್ನು ಕುರಿತು ಕಾಳ್ಬೇಡತಿ ಎಂದು ತಳವಾರ ಗದರಿಸಿದನು. ಇವಳ ಇಬ್ಬಂದಿತನವನ್ನು ಕವಿ ಬಹು ಸೂಕ್ಷ್ಮವಾಗಿ ವ್ಯಕ್ತಪಡಿಸಿದ್ದಾನೆ. ಹೆಣ್ಣಿನ ಕುಟಿಲ ಕೃತ್ಯವ ಯಾರಿಂದಲೂ ಅರಿಯಲು ಸಾಧ್ಯವಿಲ್ಲ. ಇನ್ನು ಗೆಲ್ಲುವುದು ಅಸಾಧ್ಯವೆನ್ನುತ್ತ ಹೆಣ್ಣುಮಾರಿಯಂತೆ ಪ್ರಾಣ ತೆಗೆಯುವುದನ್ನು ತಿಳಿಯುವುದಾದರೂ ಹೇಗೆ ಅಂಜನದಿಂದ ಅರಿವನ್ನು, ನಿಧಿಯಿರುವುದನ್ನು ದೀವಿಗೆಯಿಂದ ತಿಳಿಯುತ್ತೇವೆ ಆದರೆ ಸ್ತ್ರೀ ಅಂತರಂಗವನ್ನು ಯಾರಿಂದಲೂ ತಿಳಿಯಲು ಸಾಧ್ಯವಿಲ್ಲ ಎಂದು ಕವಿ ಅನುಭವದಿಂದ ಹೇಳಿದ್ದಾನೆ.

ಕಳಬಳನೆಂಬ ತಳವಾರನ ಆಳುಗಳು ಬೇಡನನ್ನು ಪಟ್ಟಣದಲ್ಲಿ ಮೆರವಣಿಗೆ ಮಾಡಿಕೊಳ್ಳುತ್ತ ಊರ ಹೊರವಲಯಕ್ಕೆ ತಂದು ತಲೆಕತ್ತರಿಸಿದರು. ಬೇಡನ ಮನೆಯಲ್ಲಿದ್ದ ಉತ್ತಮ ಖಗ ಮೃಗ ಸಂಕುಲಗಳನ್ನು ತಂದು ಪತ್ರಿಣಿಗಿಡುತ್ತಾ ನಾಗರಿಕ ಪಕ್ಷಿಯನ್ನು ಬರಗೆಯ ಜೊತೆಗೆ ತಂದು ಒಪ್ಪಿಸಿದರು. ನಾಗರಿಕ ಪಕ್ಷಿಯು ಮಾದಲನಿಗೆ ಚಿಂತಿಸಬೇಡ ನೀನು ಕಾವಲಾಗಿರುವ ಉದ್ಯಾನವನ್ನು ಶೃಂಗಾರ ಮಾಡಿ ಪತ್ರಿಣಿಯನ್ನು ಅಲ್ಲಿಗೆ ಬರುವಂತೆ ಮಾಡುವೆ ಎಂದು ಹೇಳಿತು. ಈ ಮಾತನ್ನು ಮಾದಲ ಮನಸ್ಸಿನಲ್ಲಿಡುತ್ತ ವಿರಹದ ಸ್ಥಿತಿಯಲ್ಲಿಯೇ ಬರಗೆಯನ್ನು ಕೂಡುವ ಚಿಂತೆಯಲ್ಲಿದ್ದನು.

ಮಾದಲ ತನ್ನ ಉಪವನವನ್ನು ಶೃಂಗರಿಸಿದನು. ನಾಗರಿಕ ಹಕ್ಕಿಯು ಪತ್ರಿಣಿಯನ್ನು ಉಪವನಕ್ಕೆ ಬರಲು ಆಹ್ವಾನವನ್ನು ನೀಡಿತು. ಮಾದಲ ಪತ್ರಿಣಿಗೆ ನಮಸ್ಕರಿಸಿ ಆಹ್ವಾನ ನೀಡುತ್ತಾನೆ. ಸಖಿಯರೊಂದಿಗೆ ಪತ್ರಿಣಿಯು ಉಪವನಕ್ಕೆ ಬಂದಳು. ಅಲ್ಲಿದ್ದ ಹೂ, ಪ್ರಕೃತಿ ಸೌಂದರ್ಯವನ್ನು ಕಂಡು ಹರ್ಷಗೊಂಡಳು. ಉಪವನದ ಗಿಳಿ, ಹಂಸ, ಕೋಗಿಲೆ, ನವಿಲು ಮುಂತಾದ ಪಕ್ಷಿಗಳ ಮಧ್ಯದಲ್ಲಿ ನಾಗರಿಕ ಪಕ್ಷಿಯು ಆಕರ್ಷಕವಾಗಿತ್ತು. ನಾಗರಿಕ ಪಕ್ಷಿಯ ಬಗ್ಗೆ ತಿಳಿಯಲು ವನಪಾಲಕ ಮಾದಲನನ್ನೆ ಕೇಳಿದಳು. ಆತ ತನಗೆ ಗೊತ್ತಿಲ್ಲವೆಂದು ಪಕ್ಷಿ ಬಗ್ಗೆ ತಿಳಿದ ಬರಗೆಯನ್ನು ಕೇಳಲು ವಿನಂತಿಸಿದನು.

ಪತ್ರಿಣಿ ಬರಗೆಯನ್ನು ಪ್ರಶ್ನಿಸಿ ನಾಗರಿಕ ಪಕ್ಷಿಯ ಬಗ್ಗೆ ತಿಳಿಯಲು ಮುಂದಾದಳು ಇದು "ನಗರತ್ನ ಮೇಖಲೆಯಲ್ಲಿವು ಬಗೆವಡೆ ಕೇಳ್ಲಾಗರ ಜಾತಿಯ ವರ ಖಗವಿದು"(೨೧/೩೪) ಎಂದು ಹಕ್ಕಿಯ ಕುರಿತು ಬರಗೆ ತಿಳಿಸಿದಳು. ಮತ್ತೆ "ಎನ್ನ ಜಾತಿಯ ಪೊಡವಿಪಸುತೆ ಪತ್ರಿಣಿಯಿವೆಳೆಂ ಜಾಣ ಮಡದಿಯೊ"(೨೧/೩೮) ಎಂದಳು. ಪತ್ರಿಣಿ ಬರಗೆಯು ನಾಗರಿಕ ಪಕ್ಷಿ ಬಗ್ಗೆ ತಿಳಿದ ವಿಚಾರಕ್ಕೆ ಮೆಚ್ಚಿದಳು. ನಿನ್ನ ಇಚ್ಚೆಯಂತೆ ಅವಕಾಶ ಮಾಡುವೆ ಎಂದಳು. ಬರಗೆ ಪತ್ರಿಣಿಯ ಪಾದವನ್ನು ಸೇರಿದ ಮೇಲೆ ಮತ್ತೇನೂ ತನಗೇನೂ ಬೇಡವೆಂದಳು. ಆದರೆ ಹಕ್ಕಿಯ ಇಚ್ಚೆಯಂತೆ ಮಾಡುವುದು ಎಂದಳು. ಹಕ್ಕಿಯು ಪತ್ರಿಣಿಗೆ "ಅರಸುಗಳತಿಮೂರ್ಖರು ಛಲಿಗಳು ಕಾತರರು ಜಡರು ದಯಹೀನರು ಪರಕಿಸರುಚಿತವಚನವನುಸುರ್ದುಬಾಹಿರರು ಆಗುವರು"(೨೧/೪೪) "ಗರ್ವದ ಮರ್ಬಿನಿಂದ, ದುರ್ಬೋಧೆಯ ಉರ್ಬಿನಿಂದ ಸಿರಿಯೆ ಪೆರ್ಗರದಿಂದ ಅವರು ಸರಿಯಾಗಿ ಮಾತನಾಡಲಾರರು"(೨೧/೪೭) "ಹಿತವನ್ನು ನುಡಿಯಲು ಹಿಂಜರಿಯುವರು, ಕುಹಕೋಕ್ತಿಗಳನ್ನಾಡಿ ಮರುಳುಗೊಳಿಸುವವರನ್ನು ಮನ್ನಿಸುವರು"(೨೧/೪೮) ಇದು 'ಕ್ಷಿತಿಪತಿಕುಲಜಾತರ ಶೀಲ' ಎನ್ನುತ್ತ ಪತ್ರಿಣಿಯ ಅಭಿಪ್ರಾಯವೇನೆಂದು ಕೇಳಿತು. ಪತ್ತಿಣಿ ಕುಮಾರಿ ಇದು ಸಾಮಾನ್ಯ ಪಕ್ಷಿಯಲ್ಲ ಎಂದಳು. ತಾನು ಆ ಹಕ್ಕಿಯ ಮಾತನ್ನು ಈಡೇರಿಸುವುದಾಗಿ ಭರವಸೆಕೊಟ್ಟು ಯೌವ್ವನದ ವನಚರಿಯನ್ನು ವನಪಾಲಕನಾದ ಮಾದಲನಿಗೆ ಕೊಡುವುದು ಸರಿಯೆಂದು ಹೇಳಿತು. ಅವಳು ತನಿವಣ್ಣುಗಳನ್ನು ತರಿಸಿ ನಾಗರಿಕ ಪಕ್ಷಿಗಿತ್ತು ಅರಮನೆಗೆ ಹಿಂತಿರುಗಿದಳು. ಇತ್ತ ಬರಗೆ ಮಾದಲ ಜೊತೆಗೂಡಿ ನಲಿದರು. ಪಕ್ಷಿಗೂ ಸುಖವಾಗಿ ಬಾಳೆಂದು ಹರಸಿ ಬೀಳ್ಕೊಟ್ಟರು.

ನಾಗರಿಕ ಪಕ್ಷಿಯು ಮೂಲ ಸ್ಥಳವಾದ ರತ್ನ ಮೇಖಲೆಗೆ ಹಿಂದಿರುಗಿ ಸಂಚರಿಸುತ್ತಿದ್ದಾಗ ತನ್ನ ಸತಿ ಕಾತುರದಿಂದ ಕಾಯುತ್ತಿದ್ದದನ್ನು ಭೇಟಿ ಮಾಡಿತು. ಆ ಹೆಣ್ಣು ಹಕ್ಕಿಯು ಹಲವು ದಿನಗಳಿಂದ ಪತಿಯ ಆಗಮನಕ್ಕೆ ಕಾಯುತ್ತಿದ್ದು ಕಂಡಕೂಡಲೇ ಕಾಲ್ಗೆರಗಿ ದುಃಖಿಸಿತು. ನಾಗರಿಕ ಗಂಡು ಪಕ್ಷಿಯು ಸತಿಯನ್ನು ಸಂತೈಸಿ ಇಬ್ಬರೂ ಒಂದಾಗಿ ಮೈಮರೆತವು.

### ೩.೧.೭. ಪತ್ರಿಣಿಯ ಚಿತ್ರಣ

ಸೊಬಗಿನ ಸೋನೆ ಕಾವ್ಯದಲ್ಲಿ ೨೨ ರಿಂದ ೨೬ನೇ ಸಂಧಿಯವರೆಗೆ ಒಟ್ಟು ೪೧೭ ಪದ್ಯಗಳಲ್ಲಿ ಪತ್ರಿಣಿಯ ಕುರಿತು ವರ್ಣಿಸಲ್ಪಟ್ಟಿದೆ. ವಿಕ್ರಮಕುಮಾರ ನಾಗರಿಕಪಕ್ಷಿಯ ಮೂಲಕ ಪತ್ರಿಣಿಯನ್ನು ಭೇಟಿಯಾಗುತ್ತಾನೆ. ಪತ್ರಿಣಿ-ವಿಕ್ರಮರಿಬ್ಬರಲ್ಲಿ ಅನ್ಯೋನ್ಯವಾದ ಪ್ರೀತಿಪ್ರೇಮ ಬೆಳೆದು ಒಂದೆಡೆಯಲ್ಲಿ ಸೇರಿ ಅಗಲುತ್ತಾರೆ.

ಪತ್ರಿಣಿಯು ರತ್ನಗಿರಿಯ ಅರಸ ಮಾತುಳ ಅಥವಾ ಮಕರಶೇಖರ ಎಂಬುವನ ಮಗಳು. ಈತನ ರಾಣಿ ಪೀತಾನನೆ. ರತ್ನಗಿರಿ ಪಟ್ಟಣದಲ್ಲಿ ಶಬರರಾಜನು ಇದ್ದನು. ಶಬರರಾಜನ ಪತ್ನಿ ಬರಗೆ. ಇವಳು ನಾಗರಿಕ ಪಕ್ಷಿಯ ಸಹಾಯದಿಂದ ತನ್ನ ಪತಿಯನ್ನು ವಂಚಿಸಿ, ಕೊಲ್ಲಿಸಿ, ಅರಮನೆ ಸೇರುತ್ತಾಳೆ. ನಾಗರಿಕ ಪಕ್ಷಿಯು ತನ್ನ ಚಾಣಾಕ್ಷ ಬುದ್ಧಿಯಿಂದ ವನಪಾಲಕ ಮೊದಲ

ಬರಗೆಯನ್ನು ಸೇರಿಸುವುದು ನಂತರ ಪತ್ರಿಣಿ ವಿಕ್ರಮರ ಸಮಾಗಮಕ್ಕೆ ಮಧ್ಯವರ್ತಿಯಾಗಿ ನಿಲ್ಲುವುದು ಪ್ರಮುಖವಾಗಿ ಮೂಡಿಬಂದಿದೆ.

ನಾಗರಿಕ ಪಕ್ಷಿಯು ಪತ್ರಿಣಿಯ ರೂಪವನ್ನು ವರ್ಣಿಸಿತು. ಅವಳು ಅಂಗಜನ ಪಾಶದಂತೆ, ಸರಸಿಗೆ ಅಂಬುಜ, ಬನಕ್ಕೆ ಅರಳ್ತೀವಿದ ಕೋಮಲವಾದ ಬಳ್ಳಿ, ಶರಧಿಗೆ ವಿದ್ರುಮ ಶೋಭಿಸುವಂತೆ ಇದ್ದಳು. ಅವಳ ಜಘನಗಳು ಕಾಮನ ಲಾವಣ್ಯರಸದಿಂದ ಸೃಷ್ಟಿಸಿದ ರಸಾಯನದಂತಿವೆ. ಪೊಂಗಳಶಗಳನ್ನು ಹೋಲುವ ಆಕೆಯ ಕುಚದ್ವಯಗಳು ಅಂಗಜನ ತಾಪಹರಕ್ಕೆ ಆಶ್ರಯವಾಗಿವೆ. ಉದ್ದವಾದ ಕೇಶರಾಶಿ ಕಾರ್ಮುಗಿಲಂತೆ ಮರೆಯುತ್ತಿವೆ. ಹುಬ್ಬುಗಳು ಬೇವಿನ ಎಸಳಂತೆ, ಮುಖ ಚಂದ್ರನ ಕಾಂತಿಯಂತೆ, ರನ್ನಗನ್ನಡಿಯಂತೆ ಆಕರ್ಷಕವಾಗಿತ್ತು. ಇವಳ ಸೌಂದರ್ಯಕ್ಕೆ ಮತ್ತೊಬ್ಬರಾರು ಸರಿಸಮವಿಲ್ಲವೆಂಬಂತೆ ಶೋಭಿಸುತ್ತಿದ್ದಳು. ಇದೆಲ್ಲವನ್ನು ಕೇಳುತ್ತಿದ್ದ ವಿಕ್ರಮನ ಮನಸ್ಸು ಪತ್ರಿಣಿಯನ್ನು ಕಾಣುವ ತವಕ ಹೆಚ್ಚಾಯಿತು. ಧೃತಿಗೆಟ್ಟು ಚಿಂತೆಗೀಡಾದನು. ರನ್ನವೊಳಲಿಗೆ ಹೋಗಲು ಹಾದಿ ಯಾವುದೆಂದು, ಅವಳನ್ನು ವಶಮಾಡಿಕೊಳ್ಳುವ ಪರಿ ಹೇಗೆಂದು ಪಕ್ಷಿಯನ್ನು ಕೇಳಿದನು. ನಾಗರಿಕ ಪಕ್ಷಿಯು (ತಂದೆ) ವಿಕ್ರಮ ಕುಮಾರನಿಗೆ "ಮಾತುಳನಗರವೆ ಪೊಪಡೇಳು ಕೊಂಡೊಯ್ವನು"(೨೨/೬೦) ಎಂದು ಭರವಸೆ ನೀಡಿತು. ತಾನು ವಿಕ್ರಮನನ್ನು ಹೆಗಲಲ್ಲಿ ಹೊತ್ತು ರನ್ನವೊಳಲಿಗೆ ತಂದಿತು. ಮಾತುಳನ ಪುರದ ಪೊಂಗೋಂಟೆ, ಕರುಮಾಡ, ಕಳಶೋಜ್ವಲವಿದು ಎಂದು ಪಕ್ಷಿ ಹೇಳುತ್ತ ಅರಮನೆಯ ಹೊರಗಿನ ಉದ್ಯಾನವನಕ್ಕೆ ಕರೆತಂದಿತು. ಸಂಜೆಯಾಗುತ್ತಿದ್ದಂತೆ ಪಕ್ಷಿಗಳು ಗೂಡು ಸೇರುತ್ತಿದ್ದವು. ಜನಸಂಚಾರ ಅಡಗಿತು, ರಾತ್ರಿಯು ಬೆಳದಿಂಗಳು ಹಗಲಂತೆ ಶೋಭಿಸಿತು. ವಿಕ್ರಮ ಪತ್ರಿಣಿಕುವರಿಯನ್ನು ನೋಡುವೆ ಅಲ್ಲಿಗೆ ನಡೆ ಎಂದನು. ಪಕ್ಷಿ ವಿಕ್ರಮರಾಯನನ್ನು ಹೊತ್ತು ರನ್ನವೊಳಲ ಕೋಟೆಯನ್ನು ದಾಟಿ ಪುರದೊಳಗೆ ತಂದಿತು. ಅದು "ಸುರನಗರವೊ, ಖೇಚರರ ಪಟ್ಟಣವೊ, ಕಿನ್ನರರ ರಾಜಧಾನಿಯೊ, ಗಂಧರ್ವಪುರವೊ, ಗುಹ್ಯಕ, ಜನಪದವೊ, ಮಾತುಳಪೊಳಲೊ"(೨೩/೧೫) ಏನೆಂಬುದು ತಿಳಿಯದಂತೆ ಶೋಭಿಸುತ್ತಿತ್ತು. ಜಗತ್ತಿನಲ್ಲಿ ಶಶಿವೊಳಲಿಗೆ ಸಮನಾದ ಮತ್ತೊಂದು ಪುರವಿಲ್ಲವೆಂಬಂತೆ ಇತ್ತು ಆದರೆ ಈ ಪುರಕ್ಕಿಂತ ಎರಡು, ಮೂರು, ನಾಲ್ಕರಷ್ಟು ಸೌಂದರ್ಯವುಳ್ಳದ್ದು ರನ್ನವೊಳಲೆಂದು ವಿಕ್ರಮನಿಗೆ ಅನ್ನಿಸಿತು.

ವಿಕ್ರಮ ಅಲ್ಲಿ "ವಣಿಜರ, ವರ್ಮಜ್ಞರ, ವಾಗುರಿಗರ, ಮಣಿಗಾರರ, ಕುದುರೆಗಳನ್ನು ನೋಡಿಕೊಳ್ಳುವವರ, ಗಣಿಕೆಯರ, ಶಿಲ್ಪಿಗರ, ಪ್ರೇಕ್ಷಕರ ಮುಂತಾದ ಗೃಹಬೀದಿಗಳನ್ನು ಕಂಡನು."(೨೩/೧೭) ಮತ್ತೊಂದೆಡೆಯಲ್ಲಿ "ವೇದ, ಶಾಸ್ತ್ರ, ಕಾವ್ಯ, ಕುಶಲರು, ನರ್ತಕಿಯರು ಕುಶಲಕರ್ಮಿಗಳು ಮುಂತಾದವರ ಕೇರಿಗಳನ್ನು ಕಂಡನು."(೨೩/೧೮) ಅಲ್ಲಿಯ ಮನೆಗಳು "ನೀಲದ ನೆಲಗಟ್ಟಿನಿಂದ, ಕುಲಿಶದ ಗೋಡೆಗಳಿಂದ, ಮುತ್ತು ರತ್ನಗಳಿಂದ ಮಿರುಗುತ್ತಿದ್ದವು."(೨೩/೨೦) ಇವೆಲ್ಲವುಗಳ ಮಧ್ಯದಲ್ಲಿ ಮಾತುಳರಾಯನ ಅರಮನೆಯು ನವರತ್ನ ಬಂಗಾರದಿಂದ ಕಂಗೊಳಿಸಿತು. ಅಲ್ಲಿ ಪತ್ರಿಣಿಯಿರುವ ನೆಲವಾಡವನ್ನು ಕಂಡನು ಅದು ಸಿರಿದೇವಿಯ ತವರ್ಮನೆಯಂತೆ ಬೆಳ್ದಾವರೆಯೊಳು ಶೋಭಿಸುವ ಅಂತಸ್ತು ಎಂಬಂತೆ ಇತ್ತು. ಇಲ್ಲಿಗೆ ನಾಗರಿಕ ಪಕ್ಷಿ ವಿಕ್ರಮನನ್ನು ಹೊತ್ತುತಂದಿತು.

ಪತ್ರಿಣಿಯು ಇಂದುಕಾಂತದ ಮಂಚದ ಮೃದು ತಲ್ಪದಲ್ಲಿ ಪವಡಿಸಿದ್ದಳು. ಇವಳ ಪಕ್ಕದಲ್ಲಿ

ಪ್ರಿಯ ಸಖಿಯರಾದ ಕೌಮುದಿ, ತಾರಗೆ ಎಂಬುವರು ಇದ್ದರು. ಪತ್ರಿಣಿ ಸುಖ ನಿದ್ರೆಯಲ್ಲಿದ್ದಳು. ಅಲ್ಲಿದ್ದ ಇತರ ಸಖಿಯರು ಹಡಪ, ಚಾಮರ, ಗಿಂಡಿ, ಕಾಳಾಂಜಿ, ದಂಡಿಗೆ, ವೀಣೆ, ಕಿನ್ನರಿ, ಜಂತ್ರ ತಾಳಗಳನ್ನು ನುಡಿಸುವ ಸಖಿಯರು ಮಲಗಿದ್ದರು. ಇವರು ಮೂರು ಲೋಕವನ್ನು ಮಂತ್ರ ಮುಗ್ಧರನ್ನಾಗಿಸಿ, ಮೋಹಿಸಿ ಮೈಮರೆತು ಮಲಗಿದವರಂತೆ ಕಂಗೊಳಿಸಿದರು. ವಿಕ್ರಮ ನಾಗರಿಕ ಪಕ್ಷಿಯನ್ನು ಪತ್ರಿಣಿಯಿದ್ದ ಸೌಧದ ಮುಂಭಾಗದಲ್ಲಿ ನಿಲ್ಲಿಸಿ ತಕ್ಷಣ ಅವಳು ಮಲಗಿದ್ದ ಸ್ಥಳಕ್ಕೆ ನಡೆದನು. ಅಲ್ಲಿ ಹೂ, ಬುಟ್ಟಿ, ಧೂಪ, ಕರ್ಪೂರ, ಕರಡಿಗೆ ಇದ್ದ ಮಣಿಮಂಚದ ಸುತ್ತ ಕಣ್ಣಾಡಿಸಿದನು. ಅವಳ ಪಕ್ಕದಲ್ಲಿ ಕುಳಿತು ಅಂಗಾಂಗಗಳನ್ನು ಮನತಣಿಸುವಂತೆ ನೋಡಿದನು. ಅವಳು ಎಚ್ಚರವಾಗದಂತೆ ಹೂಮುಡಿಸಿ ತನ್ನ ರನ್ನದುಂಗುರವನ್ನು ತೊಡಿಸಿ ಆಕೆಯ ಕೈಲಿದ್ದ ಹೇಮಮುದ್ರಿಕೆಯನ್ನು ತನ್ನ ಕೈಗೆ ಸೇರಿಸಿದನು.

> "ಬಂದವ ನಾನು ವಿಕ್ರಮ ಜಯಶೇಖರ
> ನಂದನ ನಿನ್ನ ವಾರತೆಯನು
> ಇಂದೀವರಾಕ್ಷಿನಾಗರನಿಂದ ಕೇಳಿದೆ
> ನೆಂದು ಬಂದನವ ನೊಸಲೊಳು"(೨೩/೫೩) ಬರೆದನು.

ಅಷ್ಟರೊಳಗೆ ಮುಂಗೋಳಿಗಳು ನೃಪನ ಅನುರಾಗವನ್ನು ಡಂಗುರ ಹೊಡೆದು ಸಾರುವಂತೆ ಕೂಗಿದವು. ವಿಕ್ರಮ ಈ ಧ್ವನಿಯನ್ನು ಕೇಳಿ ಕಳವಳಿಸಿದನು. ಬಿಸಿಯುಸುರುಬಿಡುತ್ತ ಕಣ್ಣುಗಳು ಹನಿಗೂಡಿದವು. ವಿರಹ ಅಂಕುರಿಸಿ ರಾತ್ರಿ ಕಳೆದು ಹಗಲಾದುದಕ್ಕೆ ಚಿಂತಿಸಿದನು. ತನ್ನನ್ನು ಪರಶಿವನೇಕೆ ಜನ್ಮವಿತ್ತನೋ ಎಂದು ಹೀಗೇಕೆ ವಿರಹದಲ್ಲಿಟ್ಟನೋ ಎಂದು ಮೌನತಾಳಿದನು. ನಾಗರಿಕ ಪಕ್ಷಿಯು ವಿಕ್ರಮನಿಗೆ ಸನ್ನೆ ಮಾಡಿ ಉದ್ಯಾನವನದ ಕಡೆಗೆ ಹೊತ್ತು ತಂದಿತು.

ಸೂರ್ಯೋದಯವಾಯಿತು ಅದು ಮೂಡಣ ಕನ್ನೆಯ ಬೈತಲೆಯ ಮಣಿಯಂತೆ, ಮುಖಕ್ಕೆ ಇಟ್ಟ ರನ್ನದ ಚೆನ್ನಗನ್ನಡಿಯಂತೆ ಶೋಭಿಸಿತು. ಬನದಲ್ಲಿದ್ದ ಪಕ್ಷಿಗಳು ವಿಕ್ರಮನನ್ನು ನೋಡಿ ಕಾವಲಿಟ್ಟವು. ವಿರಹಿ ವಿಕ್ರಮ ಕಾಮತಾಪದಿಂದ ನಿಂತಿದ್ದ. ಗಿಳಿ, ದುಂಬಿ, ನವಿಲು, ಹಂಸ, ಕೋಗಿಲೆಗಳು ಸೇರಿ ಧ್ವನಿ ಮಾಡಿದವು. ವಿಕ್ರಮ "ನಾಗರ ಬಾ ನಂಟನೆ ನಿನ್ನ ನಂಬಿದ ಡೀಗೆನ್ನ ತಂದು ನಂದನವೆಂಬ ಪೂಗಣೆಯನ ಪಡೆಗಳ ನಡುವಿಡುವರೆ"(೨೪/೯) ಎಂದು ಪ್ರಶ್ನಿಸಿದನು.

ಯೌವನದ ಆರಂಭದಲ್ಲೇ ವಿರಹವೆ ಇಂತಹ ಸ್ಥಿತಿ ಬರಲು ಕಾರಣವೇನು ಹೇಗೆ ಹೇಳಲಿ ರಾಜನೇ ಎಂದು ನಾಗರಿಕ ಪಕ್ಷಿ ಹೇಳಿತು. ಮತ್ತೆ ಮರುಕ ಪಡದೆ ಇರುಳು ಹಗಲು ಕಳೆದುಕೂಡಲೆ ನಲ್ಲಳನ್ನು ತೋರಿಸಿ ಜೊನ್ನವಕ್ಕಿಯಂತೆ ನಲಿಯುವಂತೆ ಮಾಡುವೆನೆಂದಿತು.. ವಿಕ್ರಮ ಮತ್ತೆ ಮೋಹದ ಹೆಣ್ಣಿನ ಮುಖ ಕಾಣದೇ ಇರುತ್ತೇನೋ ಎಂದು ಮರುಗಿದನು. "ಪತ್ರಿಣಿ ಹಾಯಲ್ಲಿದೆ ನುಡಿಯಲೆ ಲೋಕತ್ರಯ ಮೋಹಿನಿ ಮೊಗದೋಜಿ"(೨೪/೧೪) ಎನ್ನುತ್ತ ನಿನ್ನ ರೂಪವು ನನ್ನ ಕಣ್ಣು ಹೃದಯದಲ್ಲಿ ಮರೆಯದಂತೆ ಚಿತ್ರಣಗೊಂಡಿದೆ ಎಂದು ವಿಕ್ರಮ ನುಡಿದನು. ವಿಕ್ರಮನ ಅಂತರಂಗ ಬಹಿರಂಗದೆಡೆಯಲ್ಲಿ ಆ ಲಲಿತಾಂಗಿಯಲ್ಲದೆ ಬೇರಾವುದೂ

ಇಲ್ಲವೆಂಬಂತೆ ಇದ್ದ. ವಿರಹ ವಿಕ್ರಮನನ್ನು ಪಕ್ಷಿ ಸಂತೈಸುತ್ತ ಇತ್ತು. ಅದಕ್ಕಾಗಿ ಕತೆ, ಕಾವ್ಯ, ಪುರಾಣ, ಭರತ, ಇತಿಹಾಸ, ರತಿಶಾಸ್ತ್ರ, ನೀತಿಶಾಸ್ತ್ರಗಳನ್ನು ನಗೆನುಡಿಗಳನ್ನು ಹೇಳುವುದರ ಮೂಲಕ ಸಮಾಧಾನಪಡಿಸಲು ಪ್ರಯತ್ನಿಸಿತು. ಇಲ್ಲಿ "ಪಾವಗಿದೊಡೆ ಪಾಡಿದಡಿಳಿವುದೆ ವಿಷ ತಾಪವೇಳ್ವೆಗೆ ವೇದವೋದಿದಡಾ ವಿರಹದ ವಿಷವಿಳಿವುದೆ"(೨೪/೨೧) ಎಂಬ ನೀತಿಯನ್ನು ಹೋಲುವಂತೆ ನಾಗರಿಕ ಪಕ್ಷಿಯ ಉಪದೇಶವಿತ್ತಿತು. ಇದಾವುದರಿಂದಲೂ ವಿಕ್ರಮನ ವಿರಹ ಕಡಿಮೆ ಆಗಲಿಲ್ಲ.

ವಿಕ್ರಮ ಪಕ್ಷಿಯೊಡನೆ ಮಾತನಾಡುತ್ತ "ಎನ್ನ ವೃತ್ತಾಂತವನ್ನು ನುಣ್ಪೊಸಲೊಳು ಬಿತ್ತರಿಸಿದ ಬಿದಿ ಪದಪಿಂದೆ ಪಣೆಯೊಳಗೊತ್ತಿದೆ ನೆತ್ತಿಯಕ್ಕರದಂತೆ"(೨೪/೩೧) ಎಂದು ಸ್ಮರಿಸಿಕೊಂಡನು. ಈ ಚಿತ್ತವೃತ್ತಿಯನ್ನು ಅರಿತ ಪಕ್ಷಿ ಸಂತೈಸುತ್ತ ಹೊತ್ತು ಕಳೆಯುತ್ತಿತ್ತು. ಅಲ್ಲಿ ಪತ್ರಿಣಿಯು ಎಚ್ಚರವಾಗುವ ಮುನ್ನ ವೀಣಾವಾದ್ಯಗಳಿಂದ ಮೇಳದಾಳಾಪಿಗರು ಗಾನಗೈದರು. ಪತ್ರಿಣಿಯ ಸುತ್ತಲೂ ಮಂಗಳ ವಾದ್ಯಗಳನ್ನು ಮಾಡುವ ನಾರಿಯರಿದ್ದರು. ಹಾಡುವ ತರುಣಿಯರು ಕಮಲಮುಖಿಯಾದ ಪತ್ರಿಣಿಯನ್ನು ಹೊಗಳಿದರು. ವರಶಯ್ಯೆಯಲ್ಲಿ ಪವಡಿಸಿದ್ದ ಪತ್ರಿಣಿಯು ಇಂಪಾದ ಮಂಗಳವಾದ್ಯಗಳನ್ನು ಕೇಳಿದ ಕೂಡಲೆ "ಮೊಜಿದುಜೆಸುವ ಮೌರಿಗೆ ನಾಗಿಣಿ ಯೊಡಲ್ಮುರಿವಂತೆ ಮೈನಿಮಿರಿ"(೨೪/೪೨) ಎದ್ದಳು. ಅಲ್ಲೇ ಪಕ್ಕದಲ್ಲಿ ಮರೆಯಾಗಿ ನಿಂತಿದ್ದ ಸಖಿಯೊಬ್ಬಳು ಪತ್ರಿಣಿಯ ಮುಖಕ್ಕೆ ಮಣಿದರ್ಪಣವನ್ನು ಹಿಡಿಯಲು ಅಳಿಮಾಲೆಗಳಂತೆ ಹಣೆಯಲ್ಲಿದ್ದ ಅಕ್ಷರಗಳಿಂದ ಆಶ್ಚರ್ಯಚಕಿತಳಾದಳು. ಹಿಂದೆ ವಿಶೇಷವಾದ ನಾಗರಿಕ ಹಕ್ಕಿಯು ಹೇಳಿದ್ದ ಜಯಶೇಖರ ರಾಜನ ಕುಮಾರನ ವೃತ್ತಾಂತವು ಎಂದು ಮನದಲ್ಲೆ ಚಿಂತಿಸಿದಳು. ತಾನಿರುವ ತಾಣಕ್ಕೆ ನರನಾಗ ನಿಕಾಯಕ್ಕೆ ಯಾರಿಗೂ ಬರಲು ಅಸಾಧ್ಯವಾಗಿರುವಾಗ ತನ್ನ ಹೃದಯವನ್ನು ಮಾಯದಿಂದ ಮರೆಸಿಕೊಂಡೊಯ್ದನೊ ಎಂದು ನಿಟ್ಟುಸುರು ಬಿಟ್ಟಳು. "ಕರಬಡವಾದ ಲೋಭಿಗೆ ಒಮ್ಮೆಲೆ ನಿಧಿ ದೊರೆತಂತಾಯಿತು ಇವಳ ಸ್ಥಿತಿ. ತನ್ನ ಹಣೆಯಲ್ಲಿ ಬರೆದಕ್ಕರವನ್ನು ಮತ್ತೆ ಮತ್ತೆ ಓದಿದಳು. ಕೈಯೊಳಗಿದ್ದ ಕುಮಾರನ ರನ್ನದ ಮುದ್ರಿಕೆಯನ್ನು ಕಂಡು ಬೆರಗಾದಳು. ಈ ಕುಮಾರನು ಶಿವನೋ, ಸೂರ್ಯನೋ, ಮನ್ಮಥನೋ, ಚಂದ್ರನೋ, ಇಲ್ಲವೇ ಇವನೊಬ್ಬ ಹೊಸ ಮೋಹನ ದೇವನೋ ಇರಬೇಕೆಂದು ಕಲ್ಪಿಸಿಕೊಂಡಳು. ಇವಳ ಹೃದಯ ಕಾಮನ ಬಾಣವು ಆವರಿಸಿದಂತಾಯಿತು. ಚಿಂತೆಯಂಕುರಿಸಿ ಕಾತರ ಹೆಚ್ಚಾಯಿತು. ವಿರಹದಲ್ಲಿದ್ದ ಇವಳ ಬಯಕೆಯ ಸುಗ್ಗಿ ಹೂವಾಗಿ ಫಲಿಸಿತು.

ತನ್ನ ಮನಸ್ಸಿನ ಬಯಕೆಯನ್ನು ಸಖಿಯರಿಗೆ ಹೇಳಲು ನಾಚಿಕೆಪಡುವಳು, ಮತ್ತೆ ಹಣೆಯಲ್ಲಿದ್ದ ಬರಹವನ್ನು ಮೇಲ್ಮುಸುಕಿನಿಂದ ಮುಚ್ಚಿ ನೋಡುವಳು. ಮತ್ತೆ ಇವಳು ಪರಮಯೋಗಿಯಂತೆ ಮೌನಮುದ್ರೆಯಲ್ಲಿದ್ದಳು. ಸಖಿಯರು ಇವಳ ಸ್ಥಿತಿಯನ್ನು ಕಂಡು ಮೌನವಹಿಸಿದರು. ಕೌಮುದಿ ಸಖಿ ಕುಮಾರಿಯ ದುಗುಡವನ್ನು ತಿಳಿಯಲು ಮೆಲ್ಲನೆ ಹತ್ತಿರಕ್ಕೆ ಬಂದು ವಿಚಾರಿಸಿದಳು ಅದು ಒಡಲೊಳಗಾದ ಬೇನೆಯೊ, ಜೊತೆಯಲ್ಲಿದ್ದ ನಾರಿಯರಿಂದಾದ ಮಾತುಗಳನೋವೋ, ಹರಕೆಯ ಚಿಂತೆಯೊ, ಏನೆಂಬುದು ಹೇಳು ಎಂದು ಕೌಮುದಿ ಕೇಳಿದಳು. ಯಾವುದೇ ಚಿಂತೆಯಾದರೂ

ಪರಿಹರಿಸಲು ಸಹಕರಿಸುವೆ ಸಂದೇಹವೇಕೆ ಎನ್ನುತ್ತ ಕುಸುಮ ಕೋದಂಡನಂಡಲೆಯೆಂದು ಬಗೆದು ದಂಡಿಗೆಯನ್ನು ತರಿಸಿ ಉಪವನಕ್ಕೆ ಕರೆತಂದಳು.

ಸಖಿ ಕೌಮುದಿ ಪತ್ರಿಣಿಯನ್ನು ನಿನ್ನ ಆಸೆಯ ವಿಷಯವನ್ನು ತಿಳಿಸೆಂದು ವಿನಂತಿಸಿದಳು. ತನ್ನ ಮನದ ಆಸೆಯನ್ನು ಕಳೆದ ದಿನ ಹಣಿಯಲ್ಲಿ ಬರೆದ ಅಕ್ಷರಗಳಲ್ಲೇ ಇದೆ. ಅವನನ್ನು ಕಾಣದೆ ಇರಲು ಸಾಧ್ಯವಿಲ್ಲ. ನನಗೆ ಕಾಣುವ ತವಕದಲ್ಲಿ ನಾಚಿಕೆ ಕಳೆದುಕೊಂಡು ನಗೆಗೆಡೆಯಾದೆ, ನೀವು ನನ್ನನ್ನು ಜರಿಯುವಿರೊ, ಜಾಣೆಯಲ್ಲವೆಂದು ಮಾತನಾಡುವಿರೊ, ನಗುವಿರೊ, ಅಂತು ತಾನು ಅರಸನ ಕುಲದಲ್ಲಿ ಜನಿಸಿ ಅರವತ್ನಾಲ್ಕು ಕಲೆಗಳನ್ನು ತಿಳಿದು ಮೂಢಳಂತೆ ಆಗಿದ್ದೇನೆ. ಹೃದಯದ ತಲ್ಲಣವನ್ನು ಕಳೆಯುವ ಯುವಕ ಎಲ್ಲಿದ್ದಾನೋ, ಯಾವಾಗ ಆತಂಕ ಕಡಿಮೆ ಮಾಡುವನೋ ಎಂದು ವಿರಹ ಸ್ಥಿತಿಯಲ್ಲಿದ್ದಳು. ಸಖಿಯರು ಪತ್ರಿಣಿಯ ಚಿತ್ತವೃತ್ತಿಯನ್ನು ತಿಳಿದು ಉಪಚರಿಸಿ ಸಂತೈಸಿದರು. ತಾರಗೆ ಎಂಬ ಸಖಿ ಹತ್ತಿರ ಬಂದು ಹಸುಳೆಯಂತ ಕುಮಾರಿಯ ಮನಸ್ಸನ್ನು ಸೆಳೆದ ವ್ಯಕ್ತಿ ಯಾರೆಂದು ಪತ್ರಿಣಿಯನ್ನು ಕುತೂಹಲದಿಂದ ಕೇಳಿದಳು.

ವಿಕ್ರಮ ಪತ್ರಿಣಿ ಇರುವ ಬನಕ್ಕೆ ಪಕ್ಷಿಯೊಂದಿಗೆ ಮಾದಲ ಬರಗೆಯನ್ನು ನೋಡಲೆಂದು ಬಂದನು. ಅಲ್ಲಿ ಮಾದಲ ಬರಗೆಯಿದ್ದ ಸ್ಥಳಕ್ಕೆ ಹೋಗಿ ಪತ್ರಿಣಿ ಇದ್ದ ಸ್ಥಳಕ್ಕೆ ಬಂದರು. ಪತ್ರಿಣಿ ಪಲ್ಲವಶಯನದಲ್ಲಿ ಪವಡಿಸಿದ್ದಳು. ಇವಳ ರೂಪ ವಿಕ್ರಮನಿಗೆ ಬಯಸಿದ ನಿಧಿ ತಾನಾಗಿ ಅರಸಿಬಂದಂತೆ ಕಂಡಿತು. ಅವಳು ಲತೆಗಳ ಮೈಸಿರಿಯೊ, ಪೂಗಳ ಒಡತಿಯೊ, ರತಿಯಾಳಿಯೊ, ಚೈತ್ರಲಕ್ಷ್ಮಿಯೊ, ಕುಲದೇವತೆಯೊ ಎಂಬಂತೆ ಲತೆಯ ಹೊಸಮಂಟಪದಲ್ಲಿ ಶೋಭಿಸಿದಳು.

ಪತ್ರಿಣಿಯ ಮೋಹಕವಾದ ಚೆಲುವನ್ನು ನೋಡುತ್ತ ಹಕ್ಕಿಯು ವಿಕ್ರಮನಿಗೆ ನೀ ಬಯಸುವ ಸುರಮಣಿಯನ್ನು ನಾಚದೆ ಮಾತನಾಡಿಸು ಎಂದಿತು. ಆಗ ಸಖಿ ಕೌಮುದಿ, ತಾರಗೆಯರು ಜೊತೆಯಲ್ಲಿದ್ದು ಸಹಕರಿಸಿದರು. ತಾರಗೆ ಸಖಿ ವಿಕ್ರಮನಿಗೆ ವಂದಿಸುತ್ತ ಆತನಾರೆಂದು ತಿಳಿಯಲು ಮುಂದಾದಳು. ಜಯಶೇಖರರಾಯನ ಕಂದ ವಿಕ್ರಮ ಎಂದು ತಿಳಿದ ಕೂಡಲೆ "ಜಸಗಂಪ ನಿನ್ನ ಜಸದ ಬೆಳತಿಗೆ ಬೆಳುಪೆಸೆದೆದ್ದು ಪಸರಿಸಿದಂದಿಂದ"(೨೬/೯) ಎನ್ನುತ್ತ

"ಅಸುರನ ಗೆಲ್ದು ಕಂಜರೆಯನು ಮಾಳವ
ಗೊಸೆದಿತ್ತು, ಬಸಂತೆಯ ಮಧುರಗೆ
ವಶಮಾಡಿದೆ, ವನಜನ ಶಾಪವ ಕಿತ್ತು
ಬಿಸುಟೆ ನಿನ್ನೊಳು ಜಸಕೆಣೆಯುಂಟೆ"(೨೬/೧೦)

ಮೂರುಲೋಕದಲ್ಲೂ ನಿನ್ನ ಕೀರ್ತಿ ವ್ಯಾಪಿಸಿದೆ. ಹೀಗೆ ಸಹಾಯ ಮಾಡುವ ಮಹಾನ್ ವ್ಯಕ್ತಿಯಾದ ನೀನು ಮಾತುಳ ಸುತೆಯನ್ನು ಮರುಳಾಗಿಸಿ ಮುಖ ತೋರದೆ ಇರುವುದು ನೀತಿಯೆ ಹೇಳೆಂದು ವಿನಂತಿಸಿದಳು.

ಇವಳ ಮಾತಿಗೆ ವಿಕ್ರಮ ಆ ಕ್ಷಣ ಪತ್ರಿಣಿಯ ಹತ್ತಿರಕ್ಕೆ ಹೋದನು. ನಾಗರಿಕ ಪಕ್ಷಿ ಸಹಿತ ಸಖಿಯರು ಏನೂ ನೆವದಿಂದ ದೂರಸರಿದರು. ಪತ್ರಿಣಿ ಈತನನ್ನು ಗಮನಿಸಿ ತನ್ನ ಹಣಿಯಲ್ಲಿ ಬರೆದ ಜಸಗಂಪನೀತನಾಗದೇ, ದೇವಲೋಕದ ವ್ಯಕ್ತಿಯೆಂದು ಕಲ್ಪಿಸಿದಳು. ಮತ್ತೆ ಇಷ್ಟದೈವವನ್ನು

ಬೇಡಿಕೊಂಡಳು. ನೊಸಲಲ್ಲಿ ಬರೆದವ ಜಸಗಂಪ ಜಯಶೇಖರಸೂನುವೆಂದು ಖಚಿತಪಡಿಸಿಕೊಂಡಳು. ಈತ ದೇವೇಂದ್ರನಾಗಲಿ, ವಿಷ್ಣುವಾಗಲಿ, ಶಿವನಾಗಲಿ, ಕಾಮನಾಗಲಿ, ದೇವಲೋಕದಲ್ಲಿ ಯಾರಾದರೂ ಆಗಿರಬಹುದು ಆದರೆ ವಿಕ್ರಮನಲ್ಲವೆಂದು ಈತನೇ ನನ್ನ ತಂದೆ ಎಂದು ಧೈರ್ಯದಿಂದ ನಿಂತು ನಿಟ್ಟಿಸುತ್ತಿದ್ದಳು. ಆತನ ತೋರುಬೆರಳಲ್ಲಿದ್ದ ಅವಳ ಉಂಗುರ ನೋಡಿ ವಿಕ್ರಮನೆಂದು ನಿರ್ಧರಿಸಿದಳು. ತಕ್ಷಣವೇ ಹೊಸ ಯೌವ್ವನದಲ್ಲಿದ್ದ ಅವಳು ಕಂಪಿಸಿದಳು. ಕಣ್ಣಲ್ಲಿ ಆನಂದಬಾಷ್ಪ ಸುರಿದವು. ಪತ್ರಿಣಿ ವಿಕ್ರಮರಿಬ್ಬರ ದೃಷ್ಟಿ ಏಕಾಂತದಲ್ಲಿ ಅಚಲವಾಗಿ ನಿಂತು ಒಬ್ಬರನ್ನೊಬ್ಬರು ಮೈಮರೆತು, ಮರುಳಾಗಿ, ಸಂಧಿಸಿ ಬೆರಗಾಗಿ ಇದ್ದರು. ಇವರಿಬ್ಬರ ಕಣ್ಣುಗಳು ಹೊಸನೀರಿನಲ್ಲಿ ಹೊಳೆವ ಎಳೆಮೀನುಗಳು ಪೊಳೆದಾಡಿ ನಲಿವಂತೆ ಕಂಡವು. ಪತ್ರಿಣಿಯ ದೃಷ್ಟಿಘಾತದಿಂದ ವಿಕ್ರಮನ ಧೃತಿಯೊಡೆದು, ಇಂದಿಯ್ರಗಳಿಗೆ ಪಾಶಬಿಗಿದಂತಾಯಿತು. ಪತ್ರಿಣಿಗೆ ಆತಂಕಬೇಡ ಚುಂಬಿಸುವೆ ಎಂದು ಮೈದಡವಿದನು. ಸುಳ್ಳು ಸತ್ಯವೆಂದು ತಿಳಿಯದೆ ತಂದೆ ತಾಯಿಗಳನ್ನು ಬಿಟ್ಟು ನಿನ್ನ ಕೀರ್ತಿಯ ಸುದ್ಧಿ ಕೇಳಿ ನಿನ್ನನ್ನು ಮೆಚ್ಚಿದ್ದೇನೆ ಎನ್ನುತ್ತ ರತಿಯ ಕಲಾಪಕೆ ಮನ್ಮಥನೊಲಿದಂತೆ ಇದ್ದೀಯ ಎಂದಳು.

ಪತ್ರಿಣಿ ವಿಕ್ರಮರಿಬ್ಬರು ಕಾತರ ಚುಂಬನಗಳಿಂದ ಸುರತ ಸುಖವನ್ನು ಪಡೆಯಲು ತವಕದಲ್ಲಿದ್ದರು. ಇವರು "ಸವಿನುಡಿ, ಸರಸ ಮೋಹನ ಮುದ್ದು ಪವಣುಪದಿರುನುಡಿಗಳಿಂದ ಉಬ್ಬಿದರು."(೨೬/೬೦) ಇವರು ರತಿಶಾಸ್ತ್ರಮಂತ್ರ ರಹಸ್ಯದ "ಮಿಥುನದೇವತೆಯರೊ, ಸ್ಮರಯಂತ್ರ ಸೂತ್ರದ ಪ್ರತಿಮೆಗಳೂ, ಸಂತಸಮೂರ್ತಿಗಳೊ, ಇಲ್ಲವೆ ದಂಪತಿಗಳೊ"(೨೬/೬೨) ಎಂಬಂತೆ ಜೋಡಿಯಾಗಿದ್ದು ಹೊಸಕೂಟದೊಳಂದು ಸೊಗಸಿದರು. ಸತಿಯರು, ಸಖಿ ಕೌಮುದಿ, ತಾರಗೆಯರೊಂದಿಗೆ ನಾಗರಿಕ ಪಕ್ಷಿ ಇವರಿದ್ದಲ್ಲಿಗೆ ಬಂದಿತು. ಸಂಜೆಯಾಗುತ್ತಿದ್ದಂತೆ ಪತ್ರಿಣಿಯ ಸದನಕ್ಕೆ ಕಳುಹಿಸೆಂದು ಸಖಿಯರು ಹೇಳಿದರು. ಇದನ್ನ ಕೇಳಿಸಿಕೊಂಡ ಮಿಥುನದಲ್ಲಿದ್ದವರು ಬೆದರಿದರು. ಕುಸುಮಾಸ್ತ್ರನ ಬಲೆಗೊಳಗಾದ ಅವರಿಬ್ಬರು ಅಗಲುವುದೆಂದರೆ ಹೇಗೋ ಎಂದು ಕೌಮುದಿ ಕೊರಗಿದಳು. ತಾರಗೆಯು ವಿಕ್ರಮನನ್ನು ವಿಚಾರೋಕ್ತಿಗೆ ಉಚಿತವಾದ ಉಕ್ತಿಯಾವುದೆಂದು ಕೇಳಿ, ಪತ್ರಿಣಿಗೆ ಬುದ್ಧಿ ಹೇಳಿ ತಿಳಿಸು ಎಂದಳು. ವಿಕ್ರಮ ಪಕ್ಷಿಗೆ ಉಪಾಯವನ್ನು ಹೇಳೆಂದು ಕೇಳಿದನು.

"ಅವನಿಪ ಕೇಳಾದಡೆ ನಾಳಿನ ದಿನ  
ರವಿ ಪಡುಗಡೆಲೊಳಾಳದ ಮುನ್ನ  
ಭುವನವಜೆಯಲೀಕೆಯ ಮಾತುಳನಿಂದ  
ನಿವಗೆ ಕೊಡಿಸುವೆನೆಂದುದು ಪಕ್ಕಿ"(೨೬/೧೦೩) ಹೇಳಿತು.

ಸಖಿಯರಿಬ್ಬರು ಪಕ್ಷಿಯ ಮಾತಿಗೆ ಮೆಚ್ಚಿಕೊಂಡರು. ಮತ್ತೆ ಈ ಪಕ್ಷಿ ತಿಳಿಯದೇ ಇರುವ ವಿಷಯಗಳೇ ಇಲ್ಲ ಶ್ರುತಿ, ತರ್ಕ, ರತಿ, ಶಾಸ್ತ್ರ ಮುಂತಾದ ಭರತ, ಮಂತ್ರ, ದ್ಯೂತ ಮುಂತಾದ ಕಲ್ಪಶಾಖೆಗಳೆಲ್ಲವನ್ನು ಬಲ್ಲದ್ದಾಗಿದೆ ಎಂದರು. ಪಕ್ಷಿ ಮಾತು ನಿಜವಾಗುವುದಾದರೆ ಪತ್ರಿಣಿಯನ್ನು ಬೀಳ್ಕೊಡು ಎಂದು ಸಖಿಯರು ಎಂದರು. ವಿಕ್ರಮ ಪತ್ರಿಣಿಯನ್ನು ಬೀಳ್ಕೊಡಲು ಸಿದ್ಧನಾಗಿ ಕಾಲವನ್ನು ಯಾರಿಂದಲೂ ಮೀರಲು ಸಾಧ್ಯವಿಲ್ಲ ಎನ್ನುತ್ತ ಹೃದಯದಲ್ಲೇ

ಮುತ್ತಿನಹಾರವನ್ನು ಪತ್ರಿಣಿಗೆ ಕೊಟ್ಟು ಅವಳಿಂದ ತಾನು ಮುತ್ತಿನ ಹಾರವನ್ನು ಧರಿಸಿ, ಇಬ್ಬರು ಉಂಗುರವನ್ನು ಬದಲಾಯಿಸಿಕೊಂಡು ತೆರಳಿದರು. ಇವರಿಬ್ಬರ ರೂಪ, ವಿಲಾಸ, ಕಳೆ, ಗುಣಗಳು ದ್ವಿಗುಣಗೊಳ್ಳುತ್ತ ಹತ್ತು ನೂರಾಗಿ, ಹೃದಯದಲ್ಲಿ ಚಿತ್ರಿಸಿಕೊಂಡು ಹಿಂತಿರುಗಿದರು. ಪತ್ರಿಣಿಯ ಚಿತ್ತದಲ್ಲಿ ವಿಶ್ವವಿಭು ವಿಕ್ರಮನನ್ನು ಕಲ್ಪಿಸಿಕೊಂಡು ಪ್ರಿಯಕರನ ವಿರಹದಿಂದ ತಾನು ಅಂಜುತ್ತ ತನ್ನ ಆತ್ಮಗೃಹವನ್ನು ಹೊಕ್ಕಳು.

### ೫.೨. ಪಾತ್ರ ಪರಿಚಯ

ಕತೆ, ಕಾವ್ಯ, ನಾಟಕ ಮುಂತಾದ ಸಾಹಿತ್ಯ ಕೃತಿಗಳಲ್ಲಿ ವಸ್ತುವು ಎಷ್ಟು ಮುಖ್ಯವಾದುದೋ, ವಸ್ತುವಿಗೆ ಪೂರಕವಾಗಿ ಬರುವ ಪಾತ್ರಗಳೂ ಅಷ್ಟೇ ಮುಖ್ಯವೆನಿಸುತ್ತವೆ. ಸಮಾಜದಲ್ಲಿ ವ್ಯಕ್ತಿಗೆ ಇರುವ ಸ್ಥಾನಮಾನ ಕಾವ್ಯ ಪ್ರಪಂಚದಲ್ಲಿ ಪಾತ್ರಕ್ಕಿದೆ ಎನ್ನಬಹುದು. ವಸ್ತುವನ್ನು ಕ್ರಿಯಾ ರೂಪಕ್ಕೆ ತರಲು ಪಾತ್ರಗಳು ಮುಖ್ಯವಾಗುತ್ತವೆ.

**ವಿಕ್ರಮ:** ಸೊಬಗಿನ ಸೋನೆ ಕಾವ್ಯದಲ್ಲಿ ಕೆಲವೇ ಪಾತ್ರಗಳಲ್ಲಿ ಕತೆ ವಿಸ್ತರಿಸಲ್ಪಟ್ಟಿದೆ. ಅಥವಾ ಜಸಗಂಪ ಕಾವ್ಯದ ನಾಯಕ ಪಾತ್ರ. ಬಿ.ಎಸ್. ಸಣ್ಣಯ್ಯ ಅವರು ವಿಕ್ರಮನ ಕುರಿತು "ಕಾವ್ಯದ ಮೊದಲಿನಿಂದ ಕೊನೆಯವರೆಗೂ ಚಿತ್ರಿತನಾಗಿದ್ದಾನೆ. ಎಲ್ಲ ಕಥಾಮಣಿಗಳನ್ನು ಕೋದು ನಿಂತಿರುವ ಸೂತ್ರದಂತಿರುವ ಪಾತ್ರ ವಿಕ್ರಮನದು, ಆದರ್ಶ ರಾಜನಾಗಿ ಕಂಗೊಳಿಸುತ್ತಾನೆ"[೨] ಎಂಬುದಾಗಿ ಅಭಿಪ್ರಾಯಪಟ್ಟಿದ್ದಾರೆ. ಈ ಅಂಶಗಳನ್ನು ಕಾವ್ಯದಲ್ಲಿ ಗಮನಿಸಿದಾಗ ವಿಕ್ರಮ ಕಾವ್ಯದಲ್ಲಿರುವ ಎಲ್ಲ ಪಾತ್ರಗಳಿಗೂ ಸಂಪರ್ಕ ಹೊಂದುತ್ತ ಚಿತ್ರಣಗೊಂಡಿರುವುದರಿಂದ ಈ ಕಾವ್ಯವನ್ನು ವಿಕ್ರಮಚರಿತೆ ಎಂದು ಕರೆಯಬಹುದೆನ್ನಿಸುತ್ತದೆ. ವೀರಣ್ಣ ರಾಜೂರ ಅವರು ವಿಕ್ರಮನ ಕುರಿತು "ಕವಿ ಇಲ್ಲಿ ತನ್ನ ಕಥಾನಾಯಕನನ್ನು ಆದರ್ಶದ ಮೇರುಗಿರಿಯ ಮೇಲೆ ಕೂಡಿಸಲು, ಅವನ ಪರೋಪಕಾರದ ಪರಾಕಾಷ್ಠೆಯನ್ನು ಎತ್ತಿತೋರಲು ಈ ರೀತಿ ಬದಲಾವಣೆ ಮಾಡಿಕೊಂಡಿದ್ದಾನೆನ್ನಿಸುತ್ತದೆ. ಇದು ಕವಿಯ ಸ್ವತಂತ್ರ ಕಲ್ಪನೆಯೆಂದು ಕಾಣುತ್ತದೆ. ಅಲ್ಲದೆ ಇಲ್ಲಿ ಪರ್ಯಾಯವಾಗಿ ವಿಕ್ರಮನ ಪಾತ್ರದಲ್ಲಿ ಕವಿ ಆದರ್ಶದಾಯಕವಾದ ತನ್ನ ವ್ಯಕ್ತಿತ್ವವನ್ನು ಪ್ರತಿಬಿಂಬಿಸಿದಂತೆ ಭಾಸವಾಗುತ್ತದೆ"[೩] ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಸೊಬಗಿನ ಸೋನೆ ಕಾವ್ಯದಲ್ಲಿ ವ್ಯಕ್ತಗೊಂಡ ಕತೆಗಳನ್ನು ಗಮನಿಸಿದಾಗ ವಿಕ್ರಮ ಸ್ತ್ರೀಪರಚಿಂತಕ ಹಾಗೂ ತ್ಯಾಗಿಯಾಗಿ ಕಂಡುಬರುತ್ತಾನೆ.

ಶಿವನ ಕೃಪೆಯಿಂದ ಪಾರ್ವತಿಯ ಮುಡಿಯಲ್ಲಿದ್ದ ಮಂದಾರ ಹೂವನ್ನು ಪಡೆದು ಜಯಶೇಖರರಾಜ ಸುರಭಾವತಿಗೆ ಮುಡಿಸಿದ್ದನು. ದೈವೀ ಸಂಭೂತವಾಗಿ ಜನ್ಮಪಡೆದ ಮಗುವಿಗೆ 'ವಿಕ್ರಮ' ಅಥವಾ 'ಜಸಗಂಪ' ಎಂಬ ಹೆಸರನ್ನು ಕರೆಯುತ್ತಾರೆ. ಬಾಲ್ಯದಲ್ಲೇ ಸಕಲ ಕಲಾವಲ್ಲಭನಾಗಿ ಮೆರೆಯುತ್ತ ಮಧುರ ಮಾಳವ ಎಂಬ ಕುಮಾರರಿಗೂ ವಿದ್ಯೆ ಕಲಿಯಲು ಸಹಕರಿಸಿ ಸಹೋದರಂತೆ ನಡೆಸಿಕೊಳ್ಳುತ್ತಾನೆ. ಕಂಜರೆಯ ಅಪಹರಣವನ್ನು ತಡೆದು, ಅವಳ ವೃತ್ತಾಂತವನ್ನು ಆಲಿಸಿ ದೈವೀಚ್ಛೆಯಂತೆ ಮಾಳವನೊಂದಿಗೆ ಮದುವೆ ಮಾಡಿಸುತ್ತಾನೆ. ವಸಂತೆಯನ್ನು ಮಧುರನೊಂದಿಗೆ ಮದುವೆ ಮಾಡಲು ಮಹಾಕಾಳಿಯ ಆಶೀರ್ವಾದ ಪಡೆಯಲು ತಾನೇ ಆತ್ಮಬಲಿಯಾಗುವುದರ

ಜೊತೆಗೆ ಮಧುರನೂ ಆತ್ಮಬಲಿಯಾಗುತ್ತಾನೆ. ಮತ್ತೆ ದೇವಿಕೃಪೆಯಿಂದ ಇವರಿಬ್ಬರು ಪುನಃ ಜನ್ಮ ಪಡೆಯುವುದು ಪವಾಡ ಸದೃಶವೇ ಆಗಿದೆ. ಇಲ್ಲಿ ವಿಕ್ರಮ ಪವಾಡ ಪುರುಷನೇ ಆಗಿ ಕಾರ್ಯ ನೆರವೇರಿಸುತ್ತಾನೆ. ಮತ್ತೆ ಶಿವ ಪಾರ್ವತಿಯರ ಶಾಪದಿಂದ ಹಂದಿಯಾಗಿ ಜನಿಸಿದ ಸುರಭಿಶೇಖರನಿಗೆ ಮೊದಲಿನ ಜನ್ಮಹೊಂದುವಂತೆ ಮಾಡುವುದು ಇಲ್ಲಿ ವಿಕ್ರಮ ದೈವ ಸದೃಶವಾಗಿ ಕಾಣುತ್ತಾನೆ. ನಾಗರಿಕ ಪಕ್ಷಿಯನ್ನು ಬೇಡರು ವಿಕ್ರಮನಿಗೆ ಕಾಣಿಕೆಯಾಗಿ ಅರ್ಪಿಸಿದಾಗ ಅದರ ವೃತ್ತಾಂತವನ್ನು ಆಲಿಸುತ್ತ ಶಿವಸಾಗರೇಶ್ವರನ ಮಹಿಮೆಯನ್ನು ತಿಳಿಯುತ್ತಾನೆ. ವಿಧಿಸಂಕಲ್ಪದಂತೆ ನಾಗರಿಕ ಪಕ್ಷಿಯ ಮಗು ತಂದೆ ತಾಯಿಯರನ್ನು ಒಂದುಗೂಡಿಸುತ್ತಾನೆ. ವಿಕ್ರಮ ಪತ್ರಿಣಿಯೊಂದಿಗೆ ಪ್ರೀತಿ ಪ್ರೇಮ ಹಂಚಿಕೊಳ್ಳಲು ನಾಗರಿಕ ಪಕ್ಷಿ, ನೆಪವಾಗಿ ಮೂಡಿಬಂದಿದೆ.

ವಿಕ್ರಮ ಅರಸನ ಮಗನಾಗಿದ್ದರೂ, ರಾಜನಾಗಿ ಪಟ್ಟಾಭಿಷಿಕ್ತನಾಗದೇ ಇರುವುದು, ಸಾಮ್ರಾಜ್ಯವಿಸ್ತಾರ, ಆಡಳಿತ, ಸೈನ್ಯ, ಅಭಿವೃದ್ಧಿಕಾರ್ಯಗಳನ್ನು ನಿರ್ವಹಿಸದೆ ಇದ್ದಾನೆ. ಈದ ಸಂಪ್ರದಾಯವುಳ್ಳ ಅರಸೊತ್ತಿಗೆಯನ್ನು ಬಿಟ್ಟು ಧರ್ಮಪರವಾದ ಕಾರ್ಯಗಳನ್ನಷ್ಟೇ ನೆರವೇರಿಸುತ್ತ ವಿಕ್ರಮ ಧರ್ಮವೀರನಾಗಿ ಕಾಣಿಸುತ್ತಾನೆ. ಒಟ್ಟಾರೆಯಾಗಿ ಈತ ವಿದ್ಯಾವಂತ, ಅವತಾರಪುರುಷ, ವೀರಯೋಧ, ಆಪದ್ಬಾಂದವ, ಸಹೋದರ, ಸಹೃದಯಿ, ಶಿವಭಕ್ತ, ಸ್ನೇಹಿತ, ತಪಸ್ವಿ, ಪರೋಪಕಾರಿ, ಪ್ರಕೃತಿ ಪ್ರಿಯನಾಗಿದ್ದು ಕೊನೆಯಲ್ಲಿ ಪತ್ರಿಣಿಯೊಂದಿಗೆ ಪ್ರೀತಿಪ್ರೇಮ ಇಬ್ಬರಲ್ಲೂ ವ್ಯಕ್ತವಾದರೂ ಬ್ರಹ್ಮಚಾರಿಯಾಗಿ ಉಳಿಯುವುದು ವಿಕ್ರಮನ ವಿಶೇಷವೆಂಬಂತೆ ವ್ಯಕ್ತಗೊಂಡಿದೆ.

ಇತರೆ ಪುರುಷಪಾತ್ರಗಳನ್ನು ಗಮನಿಸಿದಾಗ **ಜಯಶೇಖರ** ಸಸಿವೊಳಲಿನ ಅರಸ. ಈತ ಸತ್ಯ, ಬಲ, ರೂಪ, ಗುಣ, ಸಂಪತ್ತುಗಳಿಂದ ಪ್ರಸಿದ್ಧಿಯನ್ನು ಪಡೆದಿದ್ದನು. ಶಿವನನ್ನು ತಪಸ್ಸಿನಿಂದ ಒಲಿಸಿಕೊಂಡು ವಿಕ್ರಮನಂತಹ ಪುತ್ರನನ್ನು ಪಡೆಯುತ್ತಾನೆ. ಜನತೆಗೆ ಉತ್ತಮ ಆಡಳಿತವನ್ನು ನೀಡಿ, ಶತ್ರುಗಳೇ ಇಲ್ಲದಂತೆ ನೋಡಿಕೊಂಡಿದ್ದನು. ವಿಜಯನೆಂಬ ಮಂತ್ರಿಯನ್ನು ಆಡಳಿತದಲ್ಲಿ ನೇಮಿಸಿಕೊಂಡಿದ್ದನು.

**ಸೌಂದರ:** ಎಂಬ ಅರಸ ಕಾಶ್ಮೀರ ದೇಶದ ಜಯವತಿಪಟ್ಟಣದವನು. ಉತ್ತಮ ಆಡಳಿತ ನಡೆಸುತ್ತಿದ್ದ ಈತನ ಸೈನ್ಯ ಪರಿವಾರವು ರೋಷಭಾಸ್ಕರ ಮುನಿಯ ಕೋಪಕ್ಕೆ ಬಲಿಯಾಗಿ ಸಾಮ್ರಾಜ್ಯಕ್ಕೆ ಕ್ಷೋಭೆ ಒದಗುತ್ತದೆ. ಪರಿಣಾಮವಾಗಿ ರಾಕ್ಷಸಿಯಿಂದ ಜನತೆ ತೊಂದರೆಗೊಳಗಾಗುತ್ತಾರೆ. ಮುನಿಯ ಶಾಪದ ಕಾರಣದಿಂದ ಮಗ ಮತ್ತು ಮಗಳಾದ ಕಂಜರೆಯನ್ನು ಅಗಲುತ್ತಾನೆ. ಕೊನೆಗೆ ತಾನು ಮರಣಹೊಂದುತ್ತಾನೆ.

**ರೋಷಭಾಸ್ಕರ:** ಮುನಿಯು ಹೆಸರಿಗೆ ತಕ್ಕಂತೆ ಕೋಪಿಷ್ಠನಾಗಿರುತ್ತಾನೆ. ಈತ ಸೌಂದರರಾಜನ ವ್ಯಾಪ್ತಿಯಲ್ಲಿ ಬರುವ ಆಶ್ರಮದಲ್ಲಿದ್ದಾನೆ. ಜೊತೆಗೆ ಆಶ್ರಮದಲ್ಲಿ ಮಾನಸ ಎಂಬ ಶಿಷ್ಯರು ಅಲ್ಲಿರುತ್ತಾರೆ. ಸೌಂದರ ರಾಜನ ಸೈನ್ಯ ಆಶ್ರಮದ ಫಲಭರಿತ ಮರಗಳನ್ನು ನಾಶಮಾಡಿ ಮುನಿಯ ಶಿಷ್ಯರನ್ನು ಕಟ್ಟಿಹಾಕಿದ್ದನ್ನು ಶಿಷ್ಯರಿಂದ ಕೇಳಿ ತಿಳಿದು ತನ್ನ 'ಕಿರುಜಡೆಯನ್ನು ಕಿತ್ತು' ಸೌಂದರ ಸಿರಿಯಾಹುತಿ ಎಂದು ಶಾಪವನ್ನು ಕೊಡುತ್ತಾನೆ. ರೋಷಭಾಸ್ಕರ ಮುನಿಯ ಚಿತ್ರಣವು ಶಿವನ ಪ್ರತಿರೂಪದಂತೆ ಇದೆ.

"ವಿಷಧರನಲ್ಲದ ಅರೆವೆಣ್ಣಿನಿಸದ
ಬಿಸಿಗಣ್ಣನಾಗದ ಶಿವನಂತೆ
ಎಸೆವನ ಕಂಡೆವು ಕಿಱುಜಡೆ ಸಲಿಪಲ್ಲ
ಭಸಿತಾಂಗ ರೋಷಭಾಸ್ಕರನನು"(೭/೭)

ಎಂಬುದಾಗಿ ವ್ಯಕ್ತಗೊಂಡಿದೆ. ಈ ಮುನಿಯು ಸೌಂದರರಾಜನಿಗೆ ಶಾಪಕೊಡುವುದು ಮತ್ತೆ ಪುನಃ ಶಾಪವನ್ನು ಕೊಟ್ಟು ಕಾಪಾಡುವುದನ್ನು ಕಾಣುತ್ತೇವೆ.

**ಮಧುರ, ಮಾಳವ:** ಇವರು ವಿಕ್ರಮನ ಕೀರ್ತಿಯನ್ನು ಕೇಳಿ ಬಂದವರು. ವಿಕ್ರಮನೊಂದಿಗೆ ಧನುರ್ವಿದ್ಯೆಯನ್ನು ಕಲಿತು ಜೊತೆಯಲ್ಲೆ ಸಾಹಸಕಾರ್ಯಗಳನ್ನು ಕೈಗೊಳ್ಳುತ್ತಾರೆ. ಈ ಪ್ರಸಂಗವು ಸೊಬಗಿನ ಸೋನೆ ಕಾವ್ಯದಲ್ಲಿ "ಬಲುಬಿಜ್ಜೆಯನಜೆವೊಲವಿಂದ ಸಿಂಧು ಮಾಳವ ದೇಶದರಸರ ನಂದನರ್ ಮಧುರ ಮಾಳವರೆಂಬ ಕುವರರು ಚಂದಿರವೊಳಲಿಗೆ"(೪/೩೮) ಬಂದರು ಎಂಬುದಾಗಿ ವ್ಯಕ್ತವಾಗಿದೆ. ಮಾಳವ ವಿಕ್ರಮನ ಜೊತೆ ರಾಕ್ಷಸನ ಸಂಹಾರ ಮಾಡಿ ಕಂಜರೆಯನ್ನು ಬಿಡಿಸಿಕೊಂಡು ವಿವಾಹವಾಗುತ್ತಾನೆ. ಮಧುರ ಮಹಾಕಾಳಿ ದೇವಿಯ ಮುಂದೆ ವಿಕ್ರಮನ ಜೊತೆಯಲ್ಲಿ ಆತ್ಮಬಲಿಯಾಗಿ ಮರಳಿ ಬದುಕಿ ಬರುತ್ತಾನೆ. ದೇವಿಯ ಆಶೀರ್ವಾದ ಪಡೆದು ವಸಂತೆಯೊಂದಿಗೆ ವಿವಾಹವಾಗುತ್ತಾನೆ.

**ಸುರಭಿಶೇಖರ:** ಈ ಪಾತ್ರವು ಹಂದಿಯ ಹೊಟ್ಟೆಯೊಳಗೆ ಇದ್ದುದನ್ನು ಕವಿ "ಬಿರಿದುದು ಸೊಕ್ಕಿದೆಕ್ಕಲ ನೋಡಲ್ಬಿಂಬಾಧರೆಕೇಳು"(೧೨/೧೬) "..... ಒಡಲೊಳಿಡಿದ ಪೊಸಭಸಿತ ರುದ್ರಾಕ್ಷಿಯ ತೊಡೆಗಳ ಬಿಗಿದಳವಡಿಸಿದ ಜಡೆಗಳ ತೊಳಪ ಕುಂಡಲಗಳಿಂದೆಸವನ"(೧೨/೧೭) ಕಂಡೆವು ಎಂದು ವರ್ಣಿಸಿದ್ದಾನೆ. ಹೊಸಭಸ್ಮದರಿಸಿದ, ರುದ್ರಾಕ್ಷಿ ಸರ ಧರಿಸಿದ್ದು, ಆತ ಜಡೆಗಳನ್ನು, ಕಿವಿಗಳಲ್ಲಿ ಕುಂಡಲಗಳಿಂದ ಶೋಭಿಸುತ್ತಿದ್ದನು. ಈತ ನೋಡುತ್ತಿದ್ದಂತೆ ಶಿವಭಕ್ತನೆಂಬುದಾಗಿ ತಿಳಿದುಬರುವಂತಿದ್ದನು. ತನ್ನ ವೃತ್ತಾಂತವನ್ನು ವಿಕ್ರಮನಲ್ಲಿ ಹೇಳಿಕೊಳ್ಳುತ್ತ ಮುಕ್ತಿಯನ್ನು ಹೊಂದುತ್ತಾನೆ. ಕೈಲಾಸದಲ್ಲಿ ಪ್ರತಿನಿತ್ಯ ಪಾರ್ವತಿಗೆ ಮಂದಾರದ ಅರಳನ್ನು ತಂದುಕೊಡುವ ಕಾಯಕದಲ್ಲಿ ತೊಡಗಿದ್ದನು. ಶಿವ ಇವನ ಕಾಯಕವನ್ನು ಗಮನಿಸಿ 'ಸುರಭಿಶೇಖರ'ನೆಂದು ಕರೆದು ಕೈಲಾಸದಲ್ಲಿ ವಿಶೇಷ ಸ್ಥಾನವನ್ನು ನೀಡಿದ್ದನು. ಗಂಗೆಯು ಮಂದಾರದ ಹೂವನ್ನು ತನಗೆ ಬೇಕೆಂದು ಕೇಳಿ ಪಡೆಯುತ್ತಾಳೆ ಇದು ಪಾರ್ವತಿಗೆ ಈ ಹೂವು ವಂಚನೆಯಾಗಿದ್ದರಿಂದ ಸಿಟ್ಟಾಗಿ ಶಿವನಿಂದ ಶಾಪವನ್ನು ಕೊಡಿಸುತ್ತಾಳೆ. ಶಾಪವನ್ನು ಹೊತ್ತು ಭೂಲೋಕದಲ್ಲಿ ಹಂದಿಯ ಹೊಟ್ಟೆಯೊಳಗೆ ಇರುತ್ತಾನೆ. ವಿಕ್ರಮನಿಂದ ಶಾಪ ವಿಮೋಚನೆ ಹೊಂದುತ್ತಾನೆ.

**ಶಬರ:** ಈತ ವಿವಿಧ ಪ್ರಾಣಿ ಪಕ್ಷಿಗಳನ್ನು ಬೇಟೆಯಾಡುತ್ತ ವಿಶೇಷವಾದ ನಾಗರಿಕ ಪಕ್ಷಿಯನ್ನು ಬಂಧಿಸಿ ವಿಕ್ರಮರಾಜನಿಗೆ ಕಾಣಿಕೆಯಾಗಿ ಅರ್ಪಿಸುತ್ತಾನೆ. ಈತನ ಪತ್ನಿ ಬರಗೆ ಇವರು ರನ್ನವೊಳಲ ರಾಜ ಮಾತುಳ ಅಥವಾ ಮಕರಶೇಖರ ಈತನ ರಾಣಿ ಪೀತಾನನೆ ಇವರ ಆಳ್ವಿಕೆಯಲ್ಲಿ ಬೇಡರ ಕೇರಿಯಲ್ಲಿ ವಾಸವಾಗಿದ್ದರು. ನಾಗರಿಕ ಪಕ್ಷಿಯು ಶಿವಸಾಗರೇಶ್ವರ ಸೇವೆಗಾಗಿ ಪ್ರತಿನಿತ್ಯ ಹೋಗಿ ರತ್ನವನ್ನು ಉಗುಳುತ್ತಿರುವುದನ್ನು ಕಂಡು ಅದು ತನಗೆ ಬೇಕೆಂದು ದುರಾಸೆ ಪಡುತ್ತಾನೆ. ಪಕ್ಷಿಯ ಮಾತಿಗೆ ಮರುಳಾಗಿ ಅದನ್ನು ತನ್ನ ಮನೆಗೆ ತಂದು ಪಕ್ಷಿಯೊಂದಿಗೆ

ಇಡುತ್ತಾನೆ. ತನಗೆ ಹಣದ, ಆಹಾರದ ಕೊರತೆ ಆದಾಗ ಇದನ್ನು ಕೊಲ್ಲಲು ಮುಂದಾಗುತ್ತಾನೆ. ಆದರೆ ಪಕ್ಷಿ ಮತ್ತು ಪತ್ನಿ ಬರಗೆಯ ಕುತಂತ್ರಕ್ಕೆ ಬಲಿಯಾಗಿ ಹಣಕ್ಕೆ ಆ ಪತ್ನಿಯನ್ನು ಮಾರಲು ಒಪ್ಪುತ್ತಾನೆ. ನಂತರ ಪತ್ರಿಣಿಯು ತೊಡುವ ಪದಕದ ಕಳ್ಳತನದ ಆರೋಪವನ್ನು ವಿನಾಕಾರಣ ಹೊತ್ತು ತಳವಾರರು ಶಬರರನ್ನು ಊರಬೀದಿಗಳಲ್ಲಿ ಮೆರವಣಿಗೆ ಮಾಡಿ ತಲೆಕತ್ತರಿಸುತ್ತಾರೆ.

ಈತ ವ್ಯವಹಾರಿಕ ಬದುಕನ್ನ ನಡೆಸುತ್ತಿದ್ದು, ಪತ್ನಿ ಬರಗೆ ಮತ್ತು ವನಪಾಲಕ ಮಾದಲನ ಮಧ್ಯೆ ಅನೈತಿಕ ಸಂಬಂಧಕ್ಕೆ ಪರ್ಯಾಯವಾಗಿ ಕಾರಣನಾಗಬಹುದೆನ್ನಿಸುತ್ತದೆ. ತನ್ನ ವಶಕ್ಕೆ ಬಂದ ನಾಗರಿಕ ಪಕ್ಷಿಯ ವಿಶ್ವಾಸವನ್ನು ಗಳಿಸದೆ ಇರುವುದು ಮತ್ತು ಪತ್ನಿಯ ಅಂತರಂಗವನ್ನು ತಿಳಿಯದೇ ಇರುವುದು ಕಳ್ಳತನದ ಆರೋಪ ಬಂದಾಗ ಅಸಹಾಯಕನಂತೆ ವರ್ತಿಸಿ ಸಾಯುವುದು ಈ ಎಲ್ಲ ಅಂಶಗಳಿಂದ ಶಬರ ದುರಂತ ವ್ಯಕ್ತಿಯಾಗಿ ಚಿತ್ರಣಗೊಂಡಿರುವುದನ್ನು ವಿಶೇಷವಾಗಿ ಗುರುತಿಸಬಹುದು.

ಈ ಕಾವ್ಯದಲ್ಲಿ ಸ್ತ್ರೀ ಪಾತ್ರಗಳನ್ನು ಮಾತ್ರ ಗಮನಿಸಿದಾಗ ಸುರಭಾವತಿ, ಕಂಜರೆ, ವಸಂತೆ, ನಾಗರಿಕ ಪಕ್ಷಿ, ಪತ್ನಿ ಬರಗೆ, ಪತ್ರಿಣಿ ಪಾತ್ರಗಳು ಪ್ರಮುಖವಾಗಿ ಚಿತ್ರಣಗೊಂಡಿವೆ. ಸಿ.ಯು. ಮಂಜುನಾಥ ಅವರು "ಸ್ತ್ರೀ ಪಾತ್ರಗಳಿಗೆ ಸಾಕಷ್ಟು ಪ್ರಾಮುಖ್ಯತೆಯನ್ನು ಕೊಟ್ಟಂತೆ ಕಂಡುಬರುತ್ತದೆ" ಎಂಬುದಾಗಿ ಹೇಳಿದ್ದಾರೆ. ವಿಕ್ರಮನನ್ನು ಹೊರತುಪಡಿಸಿದರೆ ಎಲ್ಲ ಪುರುಷ ಪಾತ್ರಗಳು ಸ್ತ್ರೀಪಾತ್ರಗಳಿಗೆ ಪೂರಕವಾಗಿ ಚಿತ್ರಣಗೊಂಡಿವೆ.

**ಸುರಭಾವತಿ:** ಈಕೆ ಜಯಶೇಖರನ ರಾಣಿ ರೂಪ, ಗುಣ, ಶೀಲಗಳಿಂದ ಆದರ್ಶಳಾಗಿದ್ದಾಳೆ. ಸುಖ ಜೀವನ ಅನುಭವಿಸುತ್ತಿದ್ದಾಗ ಹಂಸಗಳ ತಾಯಿ ಮಗುವಿನ ಸಂಭ್ರಮದಿಂದ ಪ್ರೇರಿತಳಾದ ಇವಳು ಜಯಶೇಖರ ರಾಜನನ್ನು ಕುರಿತು "ಕಾಂತ ಬಾಳಿಗೆ ಬಾಲಕೇಳಿಯ ಸಿರಿಗೆ ನಾ ನೋಂತುದಿಲ್ಲದ ಹೇಳುವೆನೇನ"(೨/೨೬) ಎನ್ನುತ್ತ ಮಕ್ಕಳನ್ನು ಪಡೆಯಲು ಮುಂದಾಗುತ್ತಾಳೆ. ಇವಳ ಚೆಲುವು ಬಸಿರು, ಬಾಣಂತಿ, ಮಕ್ಕಳ ಪಾಲನೆ, ತಾಯಿಯ ವಾತ್ಸಲ್ಯದ ಗುಣಗಳನ್ನು ಕುರಿತು ಮೂರು ಸಂಧಿಗಳಲ್ಲಿ ೧೨೦ಕ್ಕೂ ಹೆಚ್ಚು ಪದ್ಯಗಳಲ್ಲಿ ಸುರಭಾವತಿಯ ಚಿತ್ರಣವನ್ನು ಕವಿ ವರ್ಣಿಸಿದ್ದಾನೆ. ವಿಕ್ರಮನಂತಹ ಪುತ್ರನನ್ನು ಹೆತ್ತ ತಾಯಿಯಾದ ಇವಳು ಜಗತ್ತಿಗೆ ಕೀರ್ತಿ ತರುವಂತಹ ಮಗನಾಗಲೆಂದು ಬಯಸುತ್ತಾಳೆ.

**ಕಂಜರೆ:** ಈಕೆ ಕಾಶ್ಮೀರದ ಜಯವತಿ ಪಟ್ಟಣದ ಸೌಂದರ ಅರಸನ ಮಗಳು. ಇವಳೇ ಅರಮನೆಯ ಸಂಪತ್ತೆಂಬುವಂತೆ ಇದ್ದಳು. ಇವಳ ತಂದೆಯು ರೋಷಭಾಸ್ಕರನ ಶಾಪಕ್ಕೆ ಬಲಿಯಾಗಿ ಮಗಳನ್ನು ರಾಕ್ಷಸನು ಅಪಹರಿಸುತ್ತಾನೆ. ವಿಕ್ರಮ ಮಾಳವರಿಂದ ಬಿಡುಗಡೆಹೊಂದಿ ಮಾಳವನೊಂದಿಗೆ ಮದುವೆಯಾಗುತ್ತಾಳೆ. ಕಂಜರೆಯ ಧೈರ್ಯ, ತಾಳ್ಮೆ, ವಿವೇಕಗಳಿಂದ ಅಪಹರಣದಿಂದ ಪಾರಾಗುವುದನ್ನು ಕವಿ ಸೂಕ್ಷ್ಮವಾಗಿ ಚಿತ್ರಿಸಿದ್ದನ್ನು ಕಾಣಬಹುದು.

**ವಸಂತೆ:** ರಾಜಕುಮಾರಿ ಇವಳು ಶ್ರೀಮದಪುರದ ಅರಸ ಕುಹಳ ಮತ್ತು ರಾಣಿ ನಳಿನಿಯ ಒಬ್ಬಳೇ ಮಗಳು ಅತಿಯಾದ ಪ್ರೀತಿ ಮಮತೆಯಿಂದ ಮುದ್ದುಮಾಡಿ ಬೆಳೆಸಿದ್ದರು. ಯಾವುದೇ

ರೀತಿಯ ಕೊರತೆಗಳಿಲ್ಲದಂತೆ ಕಾಳಜಿವಹಿಸಿದ್ದರು. ಚೆಲುವೆಯಾಗಿ ಬೆಳೆದ ಮಗಳನ್ನು ತಂದೆ ಮದುವೆಮಾಡಲು ಹೆಂಡತಿಯೊಂದಿಗೆ ಸಮಾಲೋಚಿಸುತ್ತಾನೆ. ಮಹಾಕಾಳಿಯ ಕೃಪೆಯಿಂದ ಜನಿಸಿದ್ದ ಇವಳನ್ನು ವಿವಾಹದಲ್ಲೂ ದೇವಿಯ ಕೃಪೆಯನ್ನೇ ಪಡೆಯುವುದು ಎಂದು ನಿರ್ಧರಿಸಿದಾಗ ಇವಳು ಮೌನವಾಗಿರುತ್ತಾಳೆ. ತಂದೆ ತಾಯಿಯರಿಬ್ಬರು ಇವಳ ಅಂತರಂಗವನ್ನು ತಿಳಿಯದೆ ಆತಂಕಕ್ಕೆ ಒಳಗಾಗುತ್ತಾರೆ. ಇವಳ ಗೆಳತಿ ಲಲಿತೆ ಮಹಾಕಾಳಿ ದೇವಿಯಿಂದ ವರವನ್ನು ಪಡೆಯಲು ಭರವಸೆಯಿತ್ತು ಅರಣ್ಯದಲ್ಲಿ ತಪಸ್ಸು ಮಾಡುವಳು. ಈ ಸಂದರ್ಭದಲ್ಲಿ ವಿಕ್ರಮ ಮಧ್ಯಸ್ಥಿಕೆ ವಹಿಸಿ ವಸಂತೆಯ ಸಂಕಲ್ಪವನ್ನು ಪೂರೈಸುತ್ತಾನೆ. ದೇವಿಕೃಪೆಯಂತೆ ಮಧುರನೊಂದಿಗೆ ವಿವಾಹವಾಗುತ್ತಾಳೆ. ಇವಳ ಛಲ, ಸ್ವಾಭಿಮಾನ, ಅಪ್ಪಟದೈವೀಭಕ್ತಿ, ಗೆಳತಿಯ ಸಹಕಾರ, ವಿನಯವಂತಿಕೆಯಿಂದ ಶೋಭಿಸುತ್ತಿದ್ದಳೆಂಬುದಾಗಿ ಕವಿ ವರ್ಣಿಸಿದ್ದಾನೆ.

**ಬರಗೆ:** ಶಬರನ ಪತ್ನಿ ಗಂಡ ಬಂಧಿಸಿ ತಂದ ನಾಗರಿಕ ಪಕ್ಷಿಯ ಸಖ್ಯ ಬೆಳೆಸಿ ಉದ್ಯಾನವನದ ಕಾವಲಾಗಿದ್ದ ಮಾದಲನೆಂಬುವನನ್ನು ಕಳ್ಳತನದಿಂದ ಸೇರುತ್ತಾಳೆ. ನಾಗರಿಕ ಪಕ್ಷಿಯೊಂದಿಗೆ ವಿಶ್ವಾಸದಿಂದ ಇದ್ದು ಗಂಡನ ಮೇಲೆ ಕಳ್ಳತನ ಅಪರಾಧವನ್ನು ಹೊರಿಸಿ ಕೊಲ್ಲಿಸುವುದಕ್ಕೆ ಕಾರಣಳಾಗುತ್ತಾಳೆ. ಕಳಬಳನೆಂಬ ತಳವಾರರು ಇವಳ ಮನೆಯನ್ನು ಶೋಧಿಸುವಾಗ ರತ್ನದಪದಕ ದೊರೆತಾಗ ಕೃತಕವಾಗಿ ಅಳುವುದು ನಾಟಕೀಯವೆಂಬಂತೆ ತೋರುತ್ತದೆ. ಬಿ.ಎಸ್. ಸಣ್ಣಯ್ಯ ಅವರು "ಬರಗೆಯು ಅತ್ಯಂತ ಕೀಳುಮಟ್ಟದ ಜಾರೆಯಾಗಿದ್ದಳೆ. ಕವಿಯು ಸಮಾಜದಲ್ಲಿನ ಕುಂದೊಂದನ್ನು ಬರಗೆಯ ಚಿತ್ರದ ಮೂಲಕ ನೀಡಿರುವಂತೆ ತೋರುತ್ತದೆ"[೫] ಎಂಬುದಾಗಿ ಅಭಿಪ್ರಾಯಪಟ್ಟಿರುವುದು ಸಮಂಜಸವಾಗಿದೆ.

ವೀರಣ್ಣ ರಾಜೂರ ಅವರು ಬರಗೆ ವ್ಯಕ್ತಿತ್ವ ಕುರಿತು "ಕವಿ ಅಂದಿನ ಸಮಾಜದಲ್ಲಿನ ಅನೀತಿಯ ಚಿತ್ರವನ್ನು ಕಾಣಿಸಲು ಪ್ರಯತ್ನಿಸಿದ್ದಾನೆ"[೬] ಎಂಬುದಾಗಿ ಹೇಳಿದ್ದಾರೆ.

ಬರಗೆ ವಿಕಾರಮನಸ್ಸಿನವಳಾಗಿದ್ದು ತನ್ನ ಪತಿಯೊಂದಿಗಿನ ಅತೃಪ್ತಿ ಮನಸ್ಸನ್ನು ನಾಗರಿಕ ಪಕ್ಷಿಯ ಸಹಾಯ ಪಡೆದು ಕೊಲ್ಲಿಸುವ ಕುತಂತ್ರ ಊಡುವುದು ದುರಂತವೆಂಬಂತೆ ಮೂಡಿಬಂದಿದೆ. ಪತಿಯ ದೌರ್ಬಲ್ಯವನ್ನು ಬಳಸಿಕೊಂಡು ನೀಚತನಕ್ಕೆ ಇಳಿದಿರುವುದು ಸ್ತ್ರೀ ಕುಲಕ್ಕೆ ಕಳಂಕವೆಂಬಂತೆ ಚಿತ್ರಣಗೊಂಡಿದ್ದಾಳೆ. ಆಡಳಿತದಲ್ಲಿ ವೇಶ್ಯಾವಾಟಿಕೆಗೆ ಅವಕಾಶ ಕಲ್ಪಿಸಿದರೆ ವಿಕೃತ ಕೃತ್ಯಗಳಿಗೆ ಅವಕಾಶ ಆಗುವುದರ ಜೊತೆಗೆ ದೇಶದ ಆಡಳಿತದ ಮೇಲೆ ವ್ಯತಿರಿಕ್ತ ಪರಿಣಾಮವನ್ನು ಎದುರಿಸಬೇಕಾಗುತ್ತದೆ ಎಂಬುದನ್ನು ಕವಿ ಬರಗೆ ಪಾತ್ರದ ಮೂಲಕ ವ್ಯಕ್ತಪಡಿಸಿದ್ದಾನೆ ಎನ್ನಿಸುತ್ತದೆ.

**ಪತ್ರಿಣಿ:** ರತ್ನಗಿರಿಯ ಅರಸ ಮಾತುಳ (ಮಕರಶೇಖರ) ಮತ್ತು ಪೀತಾನನೆ ಇವರ ಮಗಳು. ನಾಗರಿಕ ಪಕ್ಷಿಯ ಮಧ್ಯಸ್ಥಿಕೆಯಿಂದ ವಿಕ್ರಮಕುಮಾರನನ್ನು ಪ್ರೀತಿಸುತ್ತಾಳೆ. ಪರನಾರೀ ಸಹೋದರನಂತೆ ಇದ್ದ ವಿಕ್ರಮನೇ ಇವಳನ್ನು ಪ್ರೀತಿಸುವಂತ ಚೆಲುವೆಯಾಗಿರುತ್ತಾಳೆ. ಇವಳ ಶೃಂಗಾರ ವರ್ಣನೆಯನ್ನು ಕವಿ ಸೊಗಸಾಗಿ ವರ್ಣಿಸಿದ್ದಾನೆ.

"ಕರುವಿಟ್ಟು ಕಡದೆಜಿದನೊ ತ್ರಿಜಗದ ಸೌಂದರ ಸಾರವ ಕೈಸೋಂಕದೆ ವಿರಚಿಸಿದನೊ"(೨೩/೪೧) ಎಂಬಂತೆ ಪತ್ರಿಣಿಯ ಸೌಂದರ್ಯವಿತ್ತೆಂದು ಕವಿ ವರ್ಣಿಸಿದ್ದಾನೆ. ವಿಕ್ರಮನನ್ನು ಕಾಣುವವರೆಗೂ

ವಿರಹ ಅವಸ್ಥೆಯನ್ನು ತಾಳಿ ನಾಗರಿಕ ಪಕ್ಷಿ ಮೂಲಕ ಬೇಟೆಯಾಗಿ ಸಂತೋಷ ಪಡುತ್ತಾಳೆ. ಉಂಗುರ ಮತ್ತು ಹಾರಗಳನ್ನು ಒಬ್ಬರಿಗೊಬ್ಬರು ಹಾಕಿಕೊಂಡು ಸುಖಸಂಸಾರ ಸಾಗಿಸುವಷ್ಟರಲ್ಲಿ ಬೆಳಗಾಗಿ ದೂರವಾಗುತ್ತಾರೆ. ಲೌಕಿಕವಾಗಿ ಬೇರೆಯಾದರು ಭಾವನಾತ್ಮಕವಾಗಿ ಒಂದಾಗಿರುವುದು ಪತ್ರಿಣಿ ಆದರ್ಶಳಾಗಿ ಮೂಡಿದ್ದಾಳೆ.

**ನಾಗರಿಕ ಪಕ್ಷಿಯ ಪತ್ನಿ:** ಈ ಕುರಿತು ಕವಿ ವಿರಹದ ಚಿತ್ರಣವನ್ನು ಮನಕರಗುವಂತೆ ಚಿತ್ರಿಸುವಲ್ಲಿ ಯಶಸ್ವಿಯಾಗಿದ್ದಾನೆ ಎನ್ನಬಹುದು. ಮಗುವನ್ನು ಪೋಷಣೆ ಮಾಡುವುದು, ಪತಿಯು ಬೇಡರಿಂದ ಬಂಧಿಸಲ್ಪಟ್ಟಾಗ ಪ್ರಾಣಾಪಾಯದಿಂದ ಪಾರಾಗಿ ಬರಲೆಂದು ಶಿವಸಾಗರೇಶ್ವರನ ಕೃಪೆಗೆ ಪಾತ್ರರಾಗಿ ಮತ್ತೆ ವಿಕ್ರಮಕುಮಾರನ ಮೂಲಕ ಮಗು, ಗಂಡ ಒಂದಾಗುವದು. ಹೆಣ್ಣಿನ ಸಂಕಲ್ಪದ ಫಲವಾಗಿ ಸುಖಾಂತವನ್ನು ಹೊಂದುವುದನ್ನು ಕಾಣುತ್ತೇವೆ. ಹೆಣ್ಣಿನ ತೀವ್ರವಾದ ದುಃಖವನ್ನು ಕವಿ ಈ ಪಾತ್ರದಲ್ಲಿ ತುಂಬಿ ವರ್ಣಿಸಿದ್ದಾನೆ.

ನಾಗರಿಕ ಗಂಡು ಪಕ್ಷಿಯ ಚಿತ್ರಣದಲ್ಲಿ ಕವಿ ಕಲ್ಪನೆಯಿಂದ ಚಿತ್ರಿಸಿದ್ದಾನೆ ಎನ್ನಿಸುತ್ತದೆ. ಏಕೆಂದರೆ ಅರಸೊತ್ತಿಗೆಯನ್ನು ಪ್ರಶ್ನಿಸುವುದು, ಟೀಕಿಸುವುದು, ವ್ಯವಸ್ಥೆಯೊಳಗಿದ್ದು ಮಾಡುವುದು ಕಷ್ಟಕರವಾದುದ್ದಾಗಿದೆ. ನಾಗರಿಕ ತಂದೆ ಪಕ್ಷಿ ಅರಸರ ವರ್ತನೆ ಕುರಿತು

"ಅರಸುಗಳತಿ ಮೂರ್ಖರು ಛಲಿಗಳು ಕಾ
ತರರು ಜಡರು ದಯಹೀನರು
ಪರಿಕಿಸರುಚಿತ ವಚನವನುಸುರ್ದುಬಾ
ಹಿರರಾಗಲಾಗದ" (೨೧/೪೪)
ಪುಟ್ಟತ ಸುಖವನಲ್ಲದೆ ಕನಸಿನಲೊಮ್ಮೆ
ನಿಟ್ಟಿಸರಳಲ ಕೇಳ್ದಜೆಯರು
ನೆಟ್ಟನೆ ಪರರ ಮಹಾದುಃಖವನವರ್ಗಳ್ತಿ
ವಟ್ಟಿಹುದಿಟ್ಟಡೆ ಮೊಲೆಯಳೆ. (೨೧/೪೫)
"ಗರ್ಭದ ಮರ್ಬಿಂದ, ದುರ್ಬೋಧೆಯುರ್ಬಿಂದ
ಪರ್ಬಿದ ಸಿರಿಯ ಪರ್ಗರದಿಂದ
ಕರ್ಬೋನ್ನ ಕಜುವಿನಂತಿಟ್ಟಸರಾಲಿಸರ್
ನಿರ್ಬಂಧಿಸುರೊಮ್ಮೆ ನುಡಿಯರು" (೨೧/೪೭)

"ಹಿತವನುಸರೆ ಹೇವರಿಪರು. ಕುಹಕೋಕ್ತಿಯುತರನೊಲಿದು ಮನ್ನಿಸುವರು ಎಂಬುದಾಗಿ ವಾಸ್ತವ ನೀತಿಯನ್ನು ತಿಳಿಸುತ್ತ ವಿಶೇಷ ಪಕ್ಷಿ" (೨೧/೪೮) ಎಂಬ ಹೆಸರಿಗೆ ಕಾರಣವಾಗುತ್ತದೆ.

ಅರಮನೆಯ ಸಖಿಯರು, ಸಾಮಾನ್ಯ ಸ್ತ್ರೀಯರು. ಲಲಿತೆ, ಕೌಮುದಿ, ತಾರಗೆ ಮುಂತಾದ ಸ್ತ್ರೀ ಪಾತ್ರಗಳಿವೆ. ಮಹಾಕಾಳಿ, ಪಾರ್ವತಿ, ಗಂಗೆ, ಸ್ತ್ರೀದೈವಗಳ ವರ್ಣನೆಯು ಈ ಕಾವ್ಯದಲ್ಲಿ ಪ್ರಧಾನವಾಗಿ ಮೂಡಿಬಂದಿದೆ. ಒಟ್ಟಾರೆಯಾಗಿ ಸ್ತ್ರೀಯರ ಸೊಬಗಿನ ವರ್ಣನೆಗಳಿಂದ ಈ ಕಾವ್ಯ ಸ್ತ್ರೀ ಪ್ರಧಾನವಾದ ಕಾವ್ಯವಾಗಿ ರಚನೆಗೊಂಡಿರುವುದು ಸ್ಪಷ್ಟವಾಗುತ್ತದೆ.

## ೫.೩. ಸೊಬಗಿನ ಸೋನೆ: ವಿಮರ್ಶೆ

ಕನ್ನಡ ಕಾವ್ಯವು ಕಾಲಮಾನಕ್ಕೆ ಅನುಗುಣವಾಗಿ ಧರ್ಮವನ್ನು ಪ್ರಚುರಪಡಿಸುತ್ತ ಬೆಳೆದಿರುವುದನ್ನು ಕಾಣುತ್ತೇವೆ. ಈ ಕುರಿತಂತೆ ಎಚ್. ತಿಪ್ಪೇರುದ್ರಸ್ವಾಮಿಯವರು "ಕನ್ನಡ ಕಾವ್ಯಗಳೆಲ್ಲಾ ಈ ಆದರ್ಶದಲ್ಲಿ ನಡೆದವುಗಳೇ, ಅವು ಧರ್ಮದ ತಳಹದಿಯ ಮೇಲೆ ಕಾವ್ಯ ಧರ್ಮದ ಸೌಧವನ್ನು ಕಟ್ಟಿತೋರಿಸಿದವು. ಅದು ಜೈನಧರ್ಮದ ಆಕಾರವನ್ನು ಒಮ್ಮೆ ಧರಿಸಬಹುದು. ವೀರಶೈವ ಅನುಭಾವದ ರೂಪದಲ್ಲಿ ಒಮ್ಮೆ ಮಿಂಚಬಹುದು. ವೈಷ್ಣವ ಭಕ್ತಿಯಾಗಿ ಕಂಗೊಳಿಸಬಹುದು ಆದರೆ ಮೂಲತಃ ಅದು ಒಂದೇ ತಾಯಿಬೇರಿನ ಕೊಂಬೆಗಳಂತೆ ಕಾಣುತ್ತದೆ"[೭] ಎಂದಿದ್ದಾರೆ. ಈ ಹಿನ್ನೆಲೆಯಲ್ಲಿ ಪಂಪ, ಪೊನ್ನ, ರನ್ನ, ನಾಗಚಂದ್ರ, ಹರಿಹರ, ರಾಘವಾಂಕ, ಕುಮಾರವ್ಯಾಸ, ಚಾಮರಸ, ರತ್ನಾಕರವರ್ಣಿ ಮುಂತಾದ ಕವಿಗಳು ತಮ್ಮ ಧ್ಯೇಯ ಧೋರಣೆಗೆ ತಕ್ಕಂತೆ ವಸ್ತುವನ್ನು ಮಾರ್ಪಡಿಸಿಕೊಂಡು ಧರ್ಮ ಮತ್ತು ಕಾವ್ಯ ಧರ್ಮ ಮೇಳೈಸಿಕೊಂಡು ಕಾವ್ಯ ರಚಿಸಿದ್ದಾರೆ. ಕಾವ್ಯ ಅಭಿವ್ಯಕ್ತಿಯಲ್ಲಿ ಭಾಷೆ, ಶೈಲಿ, ಛಂದಸ್ಸು, ಅಲಂಕಾರಗಳು ಸಮರ್ಥವಾಗಿ ಬಳಕೆಯಾಗಿವೆ. ಕಾಲಕಾಲಕ್ಕೆ ಇವು ಬದಲಾವಣೆ ಆಗುತ್ತಾ ಸಾಹಿತ್ಯದಲ್ಲಿ ಹೊಸತನ ಉಳಿಸಿಕೊಂಡಿದೆ. ಈ ಪರಂಪರೆಯ ಮುಂದುವರಿಕೆ ಎಂಬಂತೆ ದೇಪರಾಜ ಶಿವನ ಮಹಿಮೆಯುಳ್ಳ ವಸ್ತುವನ್ನು ಆಯ್ಕೆ ಮಾಡಿಕೊಂಡು ಜನಸಾಮಾನ್ಯರಿಗೂ ತಲುಪುವಂತಹ ಕಥೆಗಳ ಮೂಲಕ ಹೊಸ ಛಂದಸ್ಸು, ಭಾಷೆ, ಶೈಲಿಯಲ್ಲಿ ಕಾವ್ಯ ರಚಿಸಿದ್ದಾನೆ. ಈತನ ಕಾವ್ಯ ಕುರಿತು ಬಿ.ಎಸ್. ಸಣ್ಣಯ್ಯ ಅವರು "ದೇಪರಾಜನು ತನ್ನ ಈ ಕಾವ್ಯ ಕತೆಯನ್ನು ಶೃಂಗಾರ ಕಥೆಗಳಂತೆ ನೆಯ್ದಿದ್ದಾನೆ. ಇಲ್ಲಿ ಶೃಂಗಾರ ವರ್ಣನೆಗಳೇ ಅತಿಯಾಗಿ ಕಾಣಿಸಿಕೊಂಡು, ಇದೊಂದು ಶೃಂಗಾರ ರಸಭರಿತ ಕಾವ್ಯವೇ ಆಗಿ ಪರಿಣಮಿಸಿದೆ."[೮] ಎಂದಿದ್ದಾರೆ. ಇವರು ಅಂದರೆ, ಈ ಕಾವ್ಯ ವರ್ಣನಾಪ್ರಧಾನ ವಾಗಿದ್ದು, ಶೃಂಗಾರಕ್ಕೆ ಹೆಚ್ಚು ಪ್ರಾಶಸ್ತ್ಯ ನೀಡಿದೆ.

ಸಿ.ಯು. ಮಂಜುನಾಥ ಅವರು ಸೊಬಗಿನ ಸೋನೆ ಕಾವ್ಯದ ವಸ್ತು, ಆಕರ ಕುರಿತು "ದೇಪರಾಜನ ಕಾಲಕ್ಕಾಗಲೇ ಅದ್ಭುತ ಮತ್ತು ಪ್ರಣಯದ ವಸ್ತುಗಳನ್ನೊಳಗೊಂಡ ಕಾವ್ಯ ವಸ್ತು ಪ್ರಸಿದ್ಧವಾಗಿರುವುದು ಕಂಡುಬರುತ್ತದೆ. ಸಾಹಸ ಪ್ರಣಯದ ಹಿನ್ನೆಲೆಯುಳ್ಳ ಸಂಸ್ಕೃತ ಕನ್ನಡ ಕಾವ್ಯಗಳು ದೇಪರಾಜನ ಕೃತಿಗೆ ಹಿನ್ನೆಲೆಯನ್ನು ಒದಗಿಸಿರಬೇಕು"[೯] ಎನ್ನುತ್ತಾರೆ. ಈ ಕಾವ್ಯದ ನಾಯಕ ವಿಕ್ರಮ ಸಾಹಸ ಪ್ರವೃತ್ತಿವುಳ್ಳವನಾಗಿದ್ದು ಧರ್ಮವೀರನಾಗಿ ಕಂಗೊಳಿಸಿದ್ದಾನೆ. ಸ್ತ್ರೀ ಪಾತ್ರಗಳಲ್ಲಿ ಸುರಭಾವತಿ, ಕಂಜರೆ, ವಸಂತೆ, ಪತ್ರಿಣಿಯರು ಸೊಬಗು ಸೌಂದರ್ಯವತಿಯರಾಗಿ ಚಿತ್ರಣಗೊಂಡು ತಮ್ಮ ಸಂವೇದನೆಗಳನ್ನು ವ್ಯಕ್ತಪಡಿಸಿ ಪರಿಹಾರವನ್ನು ಕಂಡುಕೊಳ್ಳುವತ್ತ ಸಾಗುತ್ತಾರೆ. ಹಾಗಾಗಿ ಕವಿ ತನ್ನ ಕಾವ್ಯ

"ಎಲೆಪ್ರಿಯೆ ಕೇಳು ತೊಳದ ಮುತ್ತು ಕರತಳಾ
ಮಳಕವೀ ಕಥೆ ಸೊಬಗಿನ ಸೋನೆ
ತಿಳಿಯದೆ ಸುಯ್ದು ಮಗುಳೆ ಓದಿ ಬೇಸತ್ತು
ತಲೆಗೊಡುಹುವ ಕಬ್ಬದೊಳಗಲ್ಲ"(೧/೨೧)

"....ಸಕ್ಕಜವಿನಿಸಜೆವನ
ಬಳಕೆಯ ಬೆಳುಗನ್ನಡಿಗನ
ಹೊಲಬಲ್ಲ ಕೃತಿಯಿದು ಚದುರ ಕರ್ಣಾಟಕ
ಕಲೆಯಜೆವನ ಬಗ್ಗಿನ ಬೆಳೆ"(೧/೨೨)

ಎಂಬಂತೆ ಇದೆ ಎಂದಿರುವುದು ಜನಸಾಮಾನ್ಯರಿಗೂ ಈ ಕಾವ್ಯ ಪ್ರಸ್ತುತವಾಗಿದೆ. ಅಂದರೆ ಶುಭ್ರವಾದ ಮುತ್ತು ಇರುವಂತಿರುವ ಈ ಕಾವ್ಯ ತನಗೆ ಚೆನ್ನಾಗಿ ಕರಗತವಾಗಿದ್ದು ಮನಸ್ಸಿಗೆ ಹಿತವಾಗುವ ಹಾಗೆ ಹೇಳಿ ವಿಶಾಲ ಕರ್ನಾಟಕದ ಕಲೆಯನ್ನು ಪರಿಚಯಿಸುವಂತೆ ಇದೆ. ಈ ಕಾವ್ಯವನ್ನು ಓದುತ್ತಿದ್ದಂತೆ ಕುತೂಹಲ ಮೂಡುತ್ತದೆ. ಕಾವ್ಯದ ವಸ್ತು ಚಿಕ್ಕದಾಗಿದ್ದರೂ ವರ್ಣನೆಗಳಿಂದ ವಿಸ್ತಾರವಾಗಿದೆ. ಹಾಗಾಗಿ ಇದು ತೆಳುವಾದ ಕಥೆಯ ಬಳ್ಳಿಗೆ ವರ್ಣನೆಯ ಗೊಂಚಲುಗಳು ಭಾರವೆನಿಸುವಂತಿದೆ. ಕವಿ ಶಿವಭಕ್ತನಾಗಿದ್ದು ಖ್ಯಾತ ಕರ್ನಾಟಕ ವೃತ್ತಗಳಲ್ಲಿ "ಪಂಪಾವಧೂಟೀವರಾ" (೧/೧) ಎಂಬ ದೈವ ಸ್ತುತಿ ಮಾಡಿದ್ದಾನೆ. ಈ ಕವಿಗೆ ಹಂಪೆಯ ವಿರೂಪಾಕ್ಷನೇ ಆರಾಧ್ಯ ದೈವವೆಂಬುದು ಸ್ಪಷ್ಟವಾಗುತ್ತದೆ. ಉಳಿದಂತೆ ಪಾರ್ವತಿ, ಬ್ರಹ್ಮ, ವಿಷ್ಣು, ರುದ್ರ, ಗಣಪತಿ, ಲಕ್ಷ್ಮಿ, ಸರಸ್ವತಿ ಸ್ಮರಿಸುತ್ತ ಲೋಕವನ್ನು ಕಾಪಾಡಲೆಂದು ಬಯಸುತ್ತಾನೆ. ನಂತರ ಸಹೃದಯರನ್ನು ಕುರಿತು "ರಸಿಕನಾಗಿರಬೇಕು, ಸುಜನರು ಕಾವ್ಯದ ತಪ್ಪುಗಳನ್ನು ಸರಿಪಡಿಸಿ ಓದಬೇಕೆಂಬ"(೧/೮) ವಿನಯವಂತಿಕೆಯನ್ನು ಓದುಗರಲ್ಲಿ ಮಾಡುತ್ತಾ 'ಖೂಳರಿಂದ"(೧/೧೧) ಎಚ್ಚರಿಕೆಯಿಂದಿರ ಬೇಕೆನ್ನುತ್ತಾನೆ. ಕನ್ನಡ ಕವಿಗಳನ್ನು ಹೆಸರಿಸದೇ ಸಂಸ್ಕೃತ ಕವಿಗಳಾದ "ವಾಲ್ಮೀಕಿ, ಬಾಣ, ಕಾಳಿದಾಸರ"(೧/೧೩)ನ್ನು ಸ್ಮರಿಸಿದ್ದಾನೆ. ಪ್ರಾಚೀನ ಕಾವ್ಯಗಳಲ್ಲಿಯ ಶೈವಧರ್ಮವನ್ನು ಪ್ರಸಾರ ಮಾಡಬೇಕೆಂಬ ಆಶಯವನ್ನು ಕವಿ ತಾಳಿರಬೇಕೆನಿಸುತ್ತದೆ. ಪತ್ನಿ

"...ಮುನ್ನಜೆಯದ ಮಂಗಳವಪ್ಪೊಂದು ಕಥೆವೇಳ (೧/೧೭)
...ಕೇಳ್ವಕೋವಿದರಿಗೆ ಸೊಗಸೊಜೆವೊಲು ಸಕ್ಕಜ ಕನ್ನಡವೊಪ್ಪೆ... ಕಥೆವೇಳ"(೧/೧೮)

ಎಂದು ಪತಿಯನ್ನು ವಿನಂತಿಸಿದರೆ ಕವಿ "ನಾರಿ ಕೇಳ್ವಳು ಕಲಾವಿದೆ ಪೇಳುವ ನಾ ರಸಿಕನು ದೇಪನೃಪನೆ"(೧/೨೦) ಎಂದು ಕಥೆ ವಿಸ್ತರಿಸುತ್ತಾನೆ. ಹಾಗಾಗಿ ಈ ಕಾವ್ಯದಲ್ಲಿ ಸತಿ ಪತಿ ಸಂಭಾಷಣಾ ತಂತ್ರ ಬಳಸಲಾಗಿದೆ. ಕವಿಯ ಪತ್ನಿ ಕಥೆಯನ್ನು ಆಲಿಸುತ್ತ ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತಾಳೆ. ಈ ಹಿನ್ನೆಲೆಯಲ್ಲಿ ಸ್ತ್ರೀಯರಿಗೆ ಸಂಬಂಧಿಸಿದ ವಿವಿಧ ಆಯಾಮಗಳನ್ನು ಕುರಿತ ಕಥೆಗಳು ಈ ಕಾವ್ಯದಲ್ಲಿವೆ. ಆದರೆ ಯುದ್ಧದ ಸಂದರ್ಭಗಳಿಲ್ಲದ ಕಾವ್ಯವೆಂಬ ವಿಶೇಷತೆಗೆ ಕಾರಣವಾಗಿರುವ ಹೆಗ್ಗಳಿಕೆ ಈ ಕೃತಿಯದ್ದಾಗಿದೆ.

ಈ ಕಾವ್ಯವು ಸಮುದ್ರ, ಬೆಟ್ಟ, ನಾಡು, ಪಟ್ಟಣ, ಊರು, ಕೇರಿ, ನದಿ, ಕಾಲುವೆ, ಗದ್ದೆ, ವನ, ಪಕ್ಷಿ, ಕೋಟೆ, ದೇವಾಲಯ, ಗೋಪುರ, ಕೊಳ, ಹಂಸ, ಜನ, ಭಕ್ತರು, ವೀರರನ್ನು ವರ್ಣಿಸಿದ್ದಾನೆ. ಕನ್ನಡ ನಾಡು ಪ್ರಕೃತಿ ಸಂಪತ್ತಿನಿಂದ ಪ್ರಸಿದ್ಧವಾಗಿತ್ತೆಂದು, ಇಂತಹ ನಾಡಿನ ಜನರೂ ಧರ್ಮ, ಕಲೆ, ಸಾಹಿತ್ಯ, ಸಾಹಸ ಗುಣಗಳಿಂದ ಕೂಡಿದ್ದರು. ಹಾಗೆಯೇ ಸಸಿವೊಳಲಿನಲ್ಲಿ ಜಯಶೇಖರ ರಾಜನೂ ಜನತೆಗೆ ಆದರ್ಶಪ್ರಾಯನಾಗಿದ್ದನೆಂದು ಕವಿ ಸೂಚಿಸಿದ್ದಾನೆ.

"ರಾಮನ ನನ್ನಿ ರಾವಣನಧಟಾ ಬಲ
ರಾಮನ ಬಲ ಸೋಮನ ಗುಣ
ಭೂಮಿಯ ಸಮತೆ ಕಾಮನರೂಪು ಹರಿಲೀಲೆ
ಯಾ ಮಹಿಪನ ಪೊರ್ದಿಮೆಐದವು"(೧/೫೭)

ಅಂದರೆ ಸತ್ಯ, ಸ್ಥೈರ್ಯ, ಬಲ, ಗುಣ, ಸಮತಾಭಾವ, ರೂಪ, ಭಕ್ತಿ ಮುಂತಾದ ಗುಣಗಳಿಂದ ಪ್ರಸಿದ್ಧಿಯಾಗಿದ್ದನು. ಈತನ ಪತ್ನಿ ಸುರಭಾವತಿರಾಣಿ ರೂಪ, ಜಾಣ್ಮೆ, ಪತಿಭಕ್ತಿಯಿಂದ ಇದ್ದಳು. ಇವಳು

"ರೂಪಿಗೆ ರತಿ ಜಾಣ್ಮೆಗೆ ಸರಸತಿ ಈಶ
ನೋಪಳೆಸವ ಮಂಗಳತೆಗೆ
ಏಪೊತ್ತು ಶಚಿ ರೋಹಿಣಿಯರು ಪತಿಭಕ್ತಿ
ಗಾ ಪೆಣ್ಣೆನೊಳು ಪುರುಡಿಸುವರು"(೧/೬೪)

ರಾಜರಾಣಿಯರು ಸತಿ-ಪತಿ ಭಾವ ಹೊಂದಿ ದೇವ ದೇವತೆಗಳಂತೆ ಇದ್ದು ಇವರು ಕಲೆ, ದಾನಗಳಿಂದ ಶತ್ರುಗಳನ್ನು ಮಣಿಸುವಂತೆ ಶೋಭಿಸುತ್ತಿದ್ದರು. ಅರಮನೆಯ ಸೈನ್ಯ, ಆಡಳಿತದಂತಹ ಯಾವುದೇ ವಿಷಯಗಳನ್ನು ಕವಿ ಪ್ರಸ್ತಾಪಿಸಿದೇ ರಾಣಿಯ ಪುತ್ರ ಆಕಾಂಕ್ಷೆ ಕುರಿತು ಗಮನ ಸೆಳೆಯುವುದು ಇಲ್ಲಿನ ವಿಶೇಷತೆಗಳಲ್ಲಿ ಒಂದಾಗಿ ಪುತ್ರಸಂತಾನ ಅಪೇಕ್ಷೆಯ ಸಂಪ್ರದಾಯಿಕತೆ ಕ್ಷತ್ರಿಯರಿಗೆ ಅಗತ್ಯವೆಂದು ಹೇಳುವಂತಿದೆ.

ಸುರಭಾವತಿ ತನ್ನ ಪತಿ ಜಯಶೇಖರ ರಾಜನನ್ನು ಕೇಳಿಕೊಂಡದ್ದು ಹೀಗೆ

"ನೋಂತೆನು ಸಿರಿಗೆ ಜಸಕೆ ಚಿತ್ರಕಲೆಗಳ
ನಾಂತೆ ನಿನ್ನಯ ಸುಖಭೋಗಕ್ಕೆ
ಕಾಂತ ಬಾಳಿಗೆ ಬಾಲಕೇಳಿಯ ಸಿರಿಗೆ ನಾ
ನೋಂತುದಿಲ್ಲದ ಹೇಳುವೆನೇನ"(೨/೨೬) ಎನ್ನುತ್ತಾಳೆ. ಅಂದಿನ ಕಾಲದಲ್ಲಿ ಪುತ್ರನನ್ನು ಹೆತ್ತ ತಾಯಿಯನ್ನು ಗೌರವದಿಂದ ಕಾಣುತ್ತಿರಬೇಕೆನ್ನಿಸುತ್ತದೆ. ಈ ಕಾರಣದಿಂದ ಎಲ್ಲ ಸುಖ ಸಂಪತ್ತನ್ನು ಪಡೆದು ಅನುಭವಿಸಿದರೂ ಪುತ್ರನಿಲ್ಲದ ಜೀವನ ವ್ಯರ್ಥವೆನಿಸಿರಬೇಕು. ಈ ಭಾವನೆಯನ್ನು ಜನಪದ ಗರತಿಯರು ಹೀಗೆ ಹಾಡುವರು

"ಬಾಲಕರಿಲ್ಲದ ಬಾಲಿದ್ಯಾತರ ಜನ್ಮ
ಬಾಡಿಗೆ ಎತ್ತು ದುಡಿದ್ಹಾಂಗ ಬಾಳೆಲೆಯ
ಹಾಸ್ಯುಂಡು ಬೀಸಿ ಎಸೆದಂಗ"[೧೦]

ಬಾಳೆಲೆಯ ಹಾಸ್ಯುಂಡು ಬೀಸಿ ಒಗೆದ್ಹಾಂಗ ಎಂಬುದು ಬಾಲಕನನ್ನು ಪಡೆಯದ ತಾಯಿ ಜನ್ಮ ನಿರರ್ಥಕವೆಂಬುದನ್ನು ಹೇಳಿದೆ. ವಿಜಯನಗರ ಸಾಮ್ರಾಜ್ಯದ ಪಟ್ಟಾಧಿಕಾರ ಪುರುಷರಿಗೆ ಮಾತ್ರ ಅವಕಾಶವಿರಬೇಕೆನಿಸುತ್ತದೆ. ಹಾಗಾಗಿ ರಾಣಿಯ ಮನಸ್ಸಿನಲ್ಲಿ ತನ್ನ ವಂಶ ರಾಜಾಧಿಕಾರದಿಂದ ದೂರವಿರಬೇಕಾಗುತ್ತದೆ ಎಂಬ ಆತಂಕ ಮೂಡುತ್ತದೆ. ಸಾಮಾಜಿಕವಾಗಿ ಕುಟುಂಬದ ಮುಖ್ಯಸ್ಥ ನಾಗುವುದು ಪುರುಷರೇ ಹೊರತು ಸ್ತ್ರೀಯರಲ್ಲ. ಕುಟುಂಬದ ಮತ್ತು ಆಡಳಿತದ ಜವಾಬ್ದಾರಿಯು

ಪುರುಷರಿಗೆ ತಂದೆಯಿಂದ ಮಗನಿಗೆ ವಂಶಪಾರಂಪರ್ಯದಿಂದ ಲಭಿಸುತ್ತಿರಬೇಕೆಂಬ ಸಾಂಪ್ರದಾಯಿಕ ಮನೋಭಾವವಿರುವುದು ಅನಾವರಣಗೊಳ್ಳುತ್ತದೆ.

"ಸುತರಾಡದಂಗಳ ಭುವನೇಶ ಕಂಗೆಸವುದೆ"(೨/೨೭)
"ಪ್ರಾಯದೊಳೆಳೆ ಬರೊಗೆಯದ ಪಾಳ್ಗೊಡೆ"(೨/೨೮)
"ಕಂದಗೆ ಮೊಲೆಯೀವ ಸಿರಿ ಮುನ್ನ ನೋನದವಳ್ಗುಂಟೆ"(೨/೨೯)
"ಸಂಸಾರದ ಸುಖಸಾರವಿಲ್ಲ ಬಾಲಕರಿಲ್ಲದವರಿಗೆ"(೨/೩೧)

ಹೀಗೆ ರಾಣಿಯು ಅರಸನನ್ನು ಈ ಮೇಲಿನಂತೆ ಪ್ರಶ್ನಿಸುತ್ತ ತಾನು ಪುತ್ರನನ್ನು ಪಡೆದರೆ ಮಾತ್ರ ಜೀವನ ಸಾರ್ಥಕವಾಗುತ್ತದೆ ಎಂಬ ಭಾವನೆಯವಳಾಗಿದ್ದಾಳೆ. ಅಂದು ಸಾಮಾನ್ಯ ಮಹಿಳೆಯರು ಪುತ್ರನಿಗೆ ಜನ್ಮ ನೀಡದಿದ್ದರೆ ಆ ಸಮಾಜ ಕನಿಷ್ಟವಾಗಿ ಕಾಣುತ್ತಿರಬೇಕೆನ್ನಿಸುತ್ತದೆ. ಈ ಲಿಂಗತಾರತಮ್ಯ ಭಾವನೆ ಇಂದಿಗೂ ಉಳಿದು ಬಂದಿರುವುದನ್ನು ಸಮಾಜದಲ್ಲಿ ಕಾಣಬಹುದಾಗಿದೆ.

ಉದ್ಯಾನವನದಲ್ಲಿ ಮರಿಗಳೊಂದಿಗೆ ನಲಿದಾಡುವ ಹಂಸಗಳನ್ನು ಕಂಡ ಸುರಭಾವತಿಯ ಮನಸ್ಸಿನಲ್ಲಿ ಪುತ್ರ ಆಕಾಂಕ್ಷೆ ತೀವ್ರವಾಗುತ್ತದೆ. ಈ ಚಿಂತೆಯಲ್ಲಿ ಅರಸನನ್ನು ಕಡೆಗಣಿಸುತ್ತಾಳೆ. ಮಧುರ ಎಂಬ ಅರಗಿಳಿ ಇವರಿಬ್ಬರಲ್ಲಿ ಸಂವಾದ ನಡೆಸಿ ಸಮಸ್ಯೆ ಪರಿಹರಿಸಲು ಅರಸನಿಗೆ ವಿನಂತಿಸುತ್ತದೆ. ಅರಸ ಜಯಶೇಖರ ರಾಣಿಗೆ ಪ್ರತಿಕ್ರಿಯಿಸುತ್ತ

"ಚಿಂತಿಸದಿರು ಪ್ರಿಯೆ ತಪದಿಂದ ಶಶಿಕಲೆ
ಯಾಂತನನೊಲಿಸಿ ಕಣ್ಗಿನಿದೀವ
ಸಂತಾನವ ಪಡೆವೆನು ನಿನ್ನ ಮನದಳ
ಲಂತವಿಸುವೆನೆಂದರಸನೆದ್ದ"(೨/೩೨)

ಶಿವನನ್ನು ಕುರಿತು ತಪಸ್ಸು ಮಾಡಿ ರಾಣಿಯ ಇಚ್ಛೆಯಂತೆ ಪುತ್ರನನ್ನು ಪಡೆಯುವೆನೆಂದು ಭರವಸೆಯಿತ್ತು ತಪಸ್ಸಿಗೆ ತೆರಳುತ್ತಾನೆ. ವರವನ್ನು ಪಡೆದು ಮರಳಿ ಬರುತ್ತಾನೆ. ಈ ಪ್ರಸಂಗವು ಕಾವ್ಯದಲ್ಲಿ ಕೆಲವೇ ಪದ್ಯಗಳಲ್ಲಿ ಪ್ರಸ್ತಾಪವಾಗಿದೆ. ಇದೊಂದು ಮಕ್ಕಳಾಟದಂತೆ ಭಾಸವಾಗುತ್ತದೆ. ಕವಿ ವಿಕ್ರಮನ ಬಾಲ್ಯ, ಪರಾಕ್ರಮವನ್ನು ವರ್ಣಿಸುವ ಸಲುವಾಗಿ ಜಯಶೇಖರರಾಜನ ತಪಸ್ಸಿನ ಪ್ರಸಂಗವನ್ನು ಮೊಟುಕುಗೊಳಿಸಿರಬೇಕೆನ್ನಿಸುತ್ತದೆ. ರಾಜರಾಣಿಯರು ಪುತ್ರನಿಲ್ಲದ ತಮ್ಮ ಬಾಳು ವ್ಯರ್ಥವೆಂದು ಚಿಂತೆಗೆ ಒಳಗಾದಾಗ ಇವರ ಇಚ್ಛಾಶಕ್ತಿಯಂತೆ ಶಿವ ಪಾರ್ವತಿಯರು ಆಶೀರ್ವದಿಸಿ 'ಮಂದಾರ ಪುಷ್ಪ' ಕೊಡುತ್ತಾರೆ. ಈ ಪುಷ್ಪವು ಮಕ್ಕಳ ಫಲ ಪಡೆಯುವ ಸಂಕೇತವಾಗಿದೆ. ಶಿವಪಾರ್ವತಿಯರ ಇಚ್ಛಾಶಕ್ತಿ ಮತ್ತು ಕ್ರಿಯಾಶಕ್ತಿಯು ಸುರಭಾವತಿ ಜಯಶೇಖರನಲ್ಲಿ ಸಂಸಾರದ ಬೆಳಕನ್ನು ನೀಡುತ್ತದೆ. ಇವರಂತೆ ಜನಪದರು ತಮ್ಮ ಕಷ್ಟನಿವಾರಣೆಗಾಗಿ ಶಿವಪಾರ್ವತಿಯರನ್ನು ಸ್ಮರಿಸಿ ಪರಿಹಾರವನ್ನು ಕಂಡುಕೊಳ್ಳುತ್ತಾರೆ. ಆದರೆ ಜನಪದರು ತಪಸ್ಸಿಗೆ ಕೂರುವುದಿಲ್ಲ. ಆದರೆ ಇಲ್ಲಿ ರಾಜ ತಪಸ್ಸಿನಿಂದಲೇ ಪರಿಹಾರವನ್ನು ಕಂಡುಕೊಳ್ಳುತ್ತಾನೆ.

ಉದ್ಯಾನವನದಲ್ಲಿ ಪಕ್ಷಿಗಳು ನಲಿಯುವ, ಅರಮನೆಯ ಸಖಿಯರು ಅಲಂಕಾರದಿಂದ

ಶೋಭಿಸುವ, ವಿವಿಧ ಹೂಗಳಿಂದ ಸುರಭಾವತಿಯನ್ನು ಅಲಂಕರಿಸಿ ಸಂಭ್ರಮಿಸುವ ಸ್ತ್ರೀಯರು, ವಸಂತಮಾಸದ ಮಾವಿನಮರ ಚಿಗುರಿ ಫಲಕೊಡುವ ಚಿತ್ರಣವನ್ನು ಕವಿ ವಿಶೇಷವಾಗಿ ವರ್ಣಿಸಿದ್ದಾನೆ. ಗರ್ಭವತಿಯಾದ ಸುರಭಾವತಿಯನ್ನು ಕವಿ

"ರನ್ನದೊಳಿದ್ದ ಲಹರಿ ಪೊಳೆವೊಲು ಪೊಸ
ಪೊನ್ನೊಳೊಪ್ಪುವ ಮಿನುಗಿನೊಲು
ಚೆನ್ನೆಯ ತೆಳುವಸುಜೊಳು ಬೆಳೆವೆಳೆ ಗರ್ಭ
ಜೊನ್ನದುರುಳಿಯಂತೆ ಪೊಳೆದುದು"(೪/೧೫)

ಎಂಬುದಾಗಿ ವರ್ಣಿಸಿದ್ದಾನೆ. ಸೂಲಗಿತ್ತಿಯರು ರಾಣಿಯನ್ನು ಹಾರೈಕೆಮಾಡಿ ಮಗುವನ್ನು ದೃಷ್ಟಿತೆಗೆದರು. ಮಗುವಿನ ಕಲ್ಪನೆಯನ್ನು ಕವಿ ಹೀಗೆ ಮಾಡಿದ್ದಾನೆ.

"ಮುಜೆಯನೆ ಮಾಣಿಕ್ಯದ ಎಳೆನೇಸಱ
ಮಜೆಯನೆ ಪೊಸಚಿಪ್ಪಿನಿಂದಾಗ
ಪೊಱಮಟ್ಟಮುತ್ತೆನೆ ಪೊಂಬರಿವಾಣದೊ
ಳ್ಮೆಱುಗುವ ಮಗನ ಕಂಡಳು ರಾಣಿ(೪/೨೦)

ಇಂತಹ ಮಗುವಿಗೆ 'ವಿಕ್ರಮ' ಎಂದು ಹೆಸರಿಟ್ಟರು ಮೂರು ಲೋಕವನ್ನು ರಕ್ಷಿಸುವಂತವ ನಾಗಲೆಂದು 'ಜಸಗಂಪ' ಎಂಬ ಮತ್ತೊಂದು ಹೆಸರಿನಿಂದ ಕರೆದರು. ವಿಕ್ರಮ ಬಾಲ್ಯ, ಯೌವ್ವನ, ರೂಪ, ವಿದ್ಯೆ, ದಯೆ, ಶಿವಭಕ್ತಿಗಳಿಂದ ಪ್ರಸಿದ್ಧನಾಗಿದ್ದನು. ಈತನ ಕೀರ್ತಿಯನ್ನು ಕೇಳಿ ಮಾಳವ, ಮಧುರ ಎಂಬ ಕುಮಾರರು ವಿದ್ಯೆ ಕಲಿಯಲು ಬಂದು ವಿಕ್ರಮನಿಗೆ ಆತ್ಮೀಯರಾದರು. ಇವರಲ್ಲದೆ

"ಚತುರ ಕಳಾಕುಶಲರು ವೀರರು ಬಲ
ಯುತರು ಮನದ ಪವಣಿಜೀವರು
ಮತಿವಂತರು ಸರಸಿಗಳು ವಿಕ್ರಮಗತಿ
ಹಿತವರಾ ಕುವರರಬುಜಾಕ್ಷಿ"(೪/೪೦)

ವೀರರು, ಶಕ್ತಿವಂತರು, ಮತಿವಂತರು, ಚಾಣಾಕ್ಷತೆಯುಳ್ಳ ಕಲಾವಿದರು, ಕೌಶಲ್ಯವಂತರು, ರಸಿಕರು ಮುಂತಾದವರು ವಿಕ್ರಮನನ್ನು ತಿಳಿದುಕೊಂಡು ಹಿತವನ್ನು ಬಯಸಿದರು. ಅರಮನೆಯಲ್ಲಿ ಶಿಕ್ಷಣ, ಧರ್ಮ, ಬಿಲ್ವಿದ್ಯೆ ತರಬೇತಿ ನೀಡುವ ಕುರಿತು ಯಾವುದೇ ಮಾಹಿತಿಯನ್ನು ಕವಿ ನೀಡಿಲ್ಲ. ಇವುಗಳ ವಿಶ್ಲೇಷಣೆ ಅಪ್ರಸ್ತುತವಾಗಿರಬೇಕೆನ್ನಿಸುತ್ತದೆ. ಏಕೆಂದರೆ ವಿಕ್ರಮ ದೈವೀಪುರುಷ ನಾಗಿರುವುದರಿಂದ ಅಸಾಮಾನ್ಯ ಕಾರ್ಯಗಳು ಸಾಮಾನ್ಯವಾಗಿ ವರ್ಣಿತಗೊಂಡಿವೆ. ಹಾಗಾಗಿ ವಿಕ್ರಮ ಅಜಾತ ಶತ್ರುವಾಗಿ ಕಾವ್ಯದಲ್ಲಿ ನಿರೂಪಿತನಾಗಿದ್ದಾನೆ.

ಕಂಜರೆ ಕಾಶ್ಮೀರದ ಸೌಂದರ ರಾಜನ ಮಗಳು ಚೆಲುವೆಯಾಗಿರುತ್ತಾಳೆ. ಇವಳನ್ನು ಬಾಗೂರ ಎಂಬ ರಾಕ್ಷಸ ಅಪಹರಿಸಿ ಆಕಾಶದಲ್ಲಿ ಹೋಗುತ್ತಾನೆ. ಈ ರೀತಿಯ ಘಟನೆಗಳಿಗೆ ಕಾರಣವೇನಿರಬಹುದು ಎಂಬ ಕುತೂಹಲ ಮೂಡುವುದು ಸಹಜ. ಭಾರತೀಯ ಸಂಸ್ಕೃತಿಯಲ್ಲಿ ಕೆಟ್ಟಕೆಲಸಗಳಿಗೆ ರಾಕ್ಷಸ ಗುಣಗಳನ್ನು ಆರೋಪಿಸುವ ಪ್ರವೃತ್ತಿ ಇದೆ. ಯಾವುದೇ ಕೆಟ್ಟ ಕೆಲಸವಾದರೂ

ಅದು ಸಮಾಜಕ್ಕೆ ಅಪಾಯಕರವಾಗಿರುತ್ತದೆ. ಕೆಟ್ಟ ಕೆಲಸಗಳಿಂದ ಸಂಸ್ಕೃತಿ ಹಾಳಾಗಿ ದುರ್ನಡತೆಗಳು ಹೆಚ್ಚಾಗುತ್ತವೆ. ರಾಜಕನ್ಯೆಯನ್ನು ಅಪಹರಿಸುವುದರ ಉದ್ದೇಶವೆಂದರೆ ವಿವಾಹ ಇಲ್ಲವೆ, ರಾಜನ ಮೇಲಿನ ದ್ವೇಷ, ಸಾಮ್ರಾಜ್ಯವನ್ನು ವಶಪಡಿಸಿಕೊಳ್ಳುವ ಅಥವಾ ನಾಶಮಾಡುವ ಸಲುವಾಗಿ ಈ 'ಪೆಣ್ಬುಯಲ್' ಕೆಲಸಕ್ಕೆ ತೊಡಗುತ್ತಾರೆ. ಈ ರೀತಿಯ ಕಾರಣಗಳಿಗಿಂತ ಭಿನ್ನವಾದ ಅಪಹರಣದ ಹಿನ್ನೆಲೆಯಿರುವುದನ್ನು ಕಂಜರೆಯೇ ವಿಕ್ರಮನಲ್ಲಿ ವಿವರಿಸುತ್ತಾಳೆ. ಕಂಜರೆ ತನ್ನ ಹಿಂದಿನ ಜೀವನ ವೃತ್ತಾಂತವನ್ನು ಹೇಳುತ್ತ ವಿಕ್ರಮನಿಂದ ಪರಿಹಾರವನ್ನು ಕಂಡುಕೊಳ್ಳುತ್ತಾಳೆ. ವಿಜಯನಗರ ಸಾಮ್ರಾಜ್ಯದಲ್ಲಿ ಇಂತಹ ಘಟನೆಗಳು ರಾಜಕೀಯ ದ್ವೇಷಕ್ಕೆ ಆಗಾಗ್ಗೆ ನಡೆಯುತ್ತಿರಬಹುದೆಂಬುದನ್ನು ಇದು ತೋರ್ಪಡಿಸುತ್ತದೆ.

ಸೌಂದರರಾಜ ಹೊಲದಲ್ಲಿ ಬೆಳೆಗಳನ್ನು ನಾಶಮಾಡುತ್ತಿದ್ದ ಸಿಂಹವನ್ನು ಅಡಗಿಸಿ ಜನರಿಗೆ ಉಪಕಾರ ಮಾಡುವುದು, ನಂತರ ಋಷಿಯ ಆಶ್ರಮದಲ್ಲಿ ವಿಶ್ರಾಂತಿ ಪಡೆದು ಅಲ್ಲಿಯ ಪ್ರಕೃತಿ ಸಂಪತ್ತನ್ನು ಲೂಟಿ ಮಾಡಿ ಋಷಿಯ ಶಿಷ್ಯರನ್ನು ಕೆರಳಿಸಿದ್ದು ಅನಾಗರಿಕರ ಕೃತ್ಯವಾಗಿದೆ. ಭಾರತದ ಋಷಿಮುನಿಗಳು ಸಾಮ್ರಾಜ್ಯ ಸ್ಥಾಪನೆ, ರಕ್ಷಣೆ, ಅಭಿವೃದ್ಧಿಗೆ ಕಾರಣೀಭೂತರಾಗಿರುತ್ತಾರೆ. ಅವರ ವಿವೇಕ, ವಿದ್ಯೆ, ಸಂಸ್ಕಾರ, ಹಾರೈಕೆಗಳಿಂದ ರಾಜರು, ಜನರು ಸುಸಂಸ್ಕೃತರಾಗಿ ಬಾಳುತ್ತಾರೆ. ಧರ್ಮವನ್ನು ಪಾಲಿಸಿಕೊಂಡು ಆಡಳಿತ, ಯುದ್ಧ ಬೇಟೆಯನ್ನು ರಾಜರು ಮಾಡಬೇಕೆ ಹೊರತು ರಾಜರನ್ನು ಅನುಸರಿಸಿ ಋಷಿಗಳು ಧರ್ಮವನ್ನು ಬೆಳೆಸಬಾರದು ಎಂಬ ಆಶಯವನ್ನು ದೇಪರಾಜ ಕವಿ ತಾಳಿದಂತಿದೆ. ವಿಜಯನಗರ ಸಾಮ್ರಾಜ್ಯದಲ್ಲಿ ರಾಜಕೀಯ ಮತ್ತು ಧರ್ಮಗಳ ಮಧ್ಯ ಘರ್ಷಣೆಗಳು ನಡೆದು ರಾಜಕೀಯ ಆಕ್ರಮಣ, ಕನ್ಯೆ ಅಪಹರಣಗಳಂತಹ ಘಟನೆಗಳು ನಡೆಯುವುದನ್ನು ಕವಿ ಕಲ್ಪಿತ ಕಥೆಗಳ ಮೂಲಕ ವ್ಯಕ್ತಪಡಿಸಿರುವ ಸಾಧ್ಯತೆಗಳನ್ನು ಈ ಮೇಲಿನ ಅಂಶಗಳಿಂದ ಅರಿಯಬಹುದು. 'ಹರ ಮುನಿದರೆ ಗುರು ಕಾಯ್ವನು, ಗುರು ಮುನಿದರೆ ಹರ ಕಾಯನು' ಎಂಬ ಸೂಕ್ತಿಯಂತೆ ರೋಷಭಾಸ್ಕರನ ಕೋಪಕ್ಕೆ ಪರಿಹಾರವಿಲ್ಲ. ಅದಕ್ಕೆ ಮುನಿಯೇ ಪರಿಹಾರವನ್ನು ಸೂಚಿಸುತ್ತಾನೆ. ಸೌಂದರನ ಸಾಮ್ರಾಜ್ಯದಲ್ಲಿ ಬರಗಾಲ, ಧೂಮಕೇತು ಉಂಟಾಗಿ ಕೆರೆ–ತೊರೆ, ಮಳೆಗಳೆಲ್ಲವೂ ರಕ್ತಮಯವಾಗಿ ಜನತೆ ಕಂಗಾಲಾದರು. ರಾಕ್ಷಸಿಯ ಕೃತ್ಯಕ್ಕೆ ಸಾಮ್ರಾಜ್ಯ ವಿನಾಶ ಹೊಂದಿ ರಾಜನ ಮಕ್ಕಳಿಬ್ಬರು ಮಾತ್ರ ಉಳಿಯುತ್ತಾರೆ. ಈ ಅಂಶಗಳಿಂದ ವಿಜಯನಗರ ಸಾಮ್ರಾಜ್ಯದಲ್ಲಿ ಕೆಲವೊಂದು ಸಂದರ್ಭದಲ್ಲಿ ಬರಗಾಲ ಬಂದು ಜನ ಕಂಗಾಲಾಗಿದ್ದರು ಎಂಬುದಾಗಿ ಗ್ರಹಿಸಬಹುದು.

> "ಇಂದಿರ ದೂರ್ವಾಸನಿಂದ ವಿಶ್ವಾಮಿತ್ರ
> ನಿಂದ ಹರಿಶ್ಚಂದ್ರನು ಕೇಳ
> ಸೌಂದರ ರೋಷಭಾಸ್ಕರನಿಂದಗಸ್ತ್ಯನಿಂ
> ದಂದು ನಹುಷಕೆಟ್ಟುದನಱಿಯೆಯ"(೭/೨೧)

ಇಂದ್ರ ದೂರ್ವಾಸಮುನಿಗಳಿಂದ, ಹರಿಶ್ಚಂದ್ರ ವಿಶ್ವಾಮಿತ್ರನಿಂದ, ನಹುಷ ಅಗಸ್ತ್ಯಋಷಿಗಳಿಂದ ಕೆಟ್ಟಂತೆ ಸೌಂದರರಾಜ ರೋಷಭಾಸ್ಕರ ಮುನಿಗಳಿಂದ ಹಾಳಾಗಿದ್ದನ್ನು ತಿಳಿದು ಬದುಕಬೇಕೆಂದು ಕವಿ ಎಚ್ಚರಿಸಿದ್ದಾನೆ.

ಸೌಂದರರಾಜ ರೋಷಭಾಸ್ಕರನ ಆಶ್ರಮದಲ್ಲಿ ವರ್ತಿಸಿದ ರೀತಿ ಅಹಂಕಾರ, ಅಧಿಕಾರಮದ, ಸೈನ್ಯಬಲಗಳ ಮುಂದೆ ಉಳಿದೆಲ್ಲವೂ ತೃಣಸಮಾನವೆಂಬಂತೆ ಇತ್ತು. ಈ ರೀತಿಯ ವರ್ತನೆಯನ್ನು ಬದಲಾಯಿಸಲು ಮುನಿ ರಾಕ್ಷಸಿ ಸ್ವರೂಪ ತಾಳುವುದು ಅನಿವಾರ್ಯವೆಂಬಂತೆ ಇದೆ. ಪ್ರಕೃತಿ ಮಡಿಲಲ್ಲಿದ್ದ ರೋಷಭಾಸ್ಕರ ಮುನಿಯ ಆಶ್ರಮವನ್ನು ಸೌಂದರ ಮತ್ತು ಆತನ ಸೈನ್ಯ ಪರಿಸರ ನಾಶಮಾಡಿದ್ದರ ಪರಿಣಾಮ ಎದುರಿಸುವಂತಾಯಿತು. ಮುನಿ ಪರಿಸರ ಕಾಳಜಿಯನ್ನು ಅರಸನಿಗೆ ತಿಳಿಸಿದಂತಿದೆ.

ಕಂಜರೆಯಂತೆ ವಸಂತೆಯು ರಾಜಕುಮಾರಿ, ಇವಳು ಮಹಾಕಾಳಿಯ ಕೃಪೆಯಿಂದ ಜನಿಸಿದವಳು. ದೇವಿ ಕೃಪೆಯಂತೆ ತಂದೆ ತಾಯಿ ಇವಳಿಗೆ ಮದುವೆ ಮಾಡಲು ಮುಂದಾಗುತ್ತಾರೆ. ತನ್ನ ಇಚ್ಛೆಯಂತೆ ತಾನೇ ದೇವಿಯ ಆಶೀರ್ವಾದ ಪಡೆದು ವಿವಾಹ ಆಗಲು ಪ್ರಯತ್ನಿಸುವುದು, ಇದು ಗೆಳತಿಯ ಸಹಕಾರದಿಂದ ಈ ಸಂಕಲ್ಪ ಈಡೇರುತ್ತದೆ. ವಿಕ್ರಮ ಮತ್ತು ಮಧುರ ಇವರಿಬ್ಬರು ಮಧ್ಯಸ್ಥಿಕೆ ವಹಿಸಿ ಮಹಾಕಾಳಿಯನ್ನು ಪ್ರತ್ಯಕ್ಷ ಮಾಡಿ ಸಮಸ್ಯೆಗೆ ಪರಿಹಾರವನ್ನು ಕಂಡುಕೊಳ್ಳುತ್ತಾರೆ. ವಸಂತೆ ಸುಖ ಸಂತೋಷದಲ್ಲಿ ಬೆಳೆದಿರುತ್ತಾಳೆ. ಪ್ರೌಢಳಾದಾಗ ಗೆಳತಿಯ ಹತ್ತಿರ ತನ್ನ ಸಮಸ್ಯೆಗಳನ್ನು ಹೇಳಿಕೊಂಡು ಗೆಳತಿಯೇ ತಪಸ್ಸು ಮಾಡಿ ಇವಳ ಸಮಸ್ಯೆಗೆ ಪರಿಹಾರ ಕಂಡುಕೊಳ್ಳುತ್ತಾಳೆ. ಹೆಣ್ಣುಮಕ್ಕಳು ತಮ್ಮ ಸಮಸ್ಯೆಗಳನ್ನು ಮುಕ್ತವಾಗಿ ಗೆಳತಿಯರ ಹತ್ತಿರ ಹೇಳಿಕೊಳ್ಳುತ್ತಾರೆ. ಗೆಳತಿಯರು ಸಮಸ್ಯೆಗೆ ಪರಿಹಾರವನ್ನು ನೀಡುತ್ತಾರೆ. ಲಲಿತೆ ವಸಂತೆಯ ಆತ್ಮೀಯ ಗೆಳತಿಯಾಗಿ ಬೆಂಬಲಕ್ಕೆ ನಿಂತು ತಪಸ್ಸು ಮಾಡುತ್ತಾಳೆ. ಇವಳ ತ್ಯಾಗ, ಏಕಾಗ್ರತೆ, ತಪಸ್ಸು ಮುಖ್ಯವಾಗಿದೆ. ಮಹಿಳೆ ತಪಸ್ಸು ಮಾಡುವುದು ವಿಶೇಷವೆನ್ನಿಸಿದೆ. ಇವಳ ಪರವಾಗಿ ವಿಕ್ರಮ ಮಧುರ ತಪಸ್ಸು ಮಾಡಲು ನಿರ್ಧರಿಸಿ ಮಹಾಕಾಳಿಯ ಮುಂದೆ ಶಿರಚ್ಛೇದನಗೈದು ಮರುಜನ್ಮ ಪಡೆದು ವಸಂತೆಯ ಸಂಕಲ್ಪ ಈಡೇರಿಸುತ್ತಾರೆ. ವಸಂತೆ ತಂದೆಯ ನಿರ್ಧಾರವನ್ನು ಧಿಕ್ಕರಿಸಿ ಅರಮನೆಯ ಸಂಪ್ರದಾಯವನ್ನು ಪ್ರಶ್ನಿಸಿ, ಸ್ವಾಭಿಮಾನ, ಛಲ, ಸ್ವಯಂ ನಿರ್ಧಾರಗಳಿಂದ ಮಹಾಕಾಳಿಯ ಕೃಪೆಯನ್ನು ಪಡೆದು ವಿವಾಹವಾಗುತ್ತಾಳೆ. ಮಹಿಳೆಯರೂ ಕೂಡ ಸ್ವಯಂ ಆಲೋಚಿಸುವ, ನಿರಂಕುಶ ಪ್ರಭುತ್ವವನ್ನು ಪ್ರಶ್ನಿಸುವ, ಕೆಟ್ಟ ಸಂಪ್ರದಾಯವನ್ನು ವಿರೋಧಿಸುವ, ಸ್ವತಂತ್ರವಾಗಿ ನಿರ್ಧಾರ ಕೈಗೊಳ್ಳುವ, ತಮ್ಮ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವ ಮನೋಭಾವವನ್ನು ವಿಜಯನಗರ ಕಾಲದ ಅರಸು ಮನೆತನದ ಸ್ತ್ರೀಯರು ಹೊಂದಿದ್ದರು ಎಂಬ ಅಂಶವನ್ನು ಸುರಭಾವತಿ, ಕಂಜರೆ ಮತ್ತು ವಸಂತೆ ಪಾತ್ರಗಳ ಮೂಲಕ ಗ್ರಹಿಸಬಹುದಾಗಿದೆ. ಮಹಾಕಾಳಿ ದೇವಿಯನ್ನು ಬೇಡಿದ ಭಕ್ತರು ತಮ್ಮ ಇಷ್ಟಾರ್ಥವನ್ನು ಪಡೆಯುವುದು ಖಚಿತವಾಗಿದೆ. ಈ ದೇವಿ ಜೀವ ಸೃಷ್ಟಿ ಮತ್ತು ನಾಶಗಳೆರಡಕ್ಕೂ ಕಾರಣಳಾಗಿ ನಂಬಿದ ಭಕ್ತರನ್ನು ಕಾಪಾಡುವಳೆಂಬ ನಂಬಿಕೆ ಬಲವಾಗಿದೆ.

ಕಂಜರೆ ಮತ್ತು ವಸಂತೆಯರಿಬ್ಬರಲ್ಲೂ ಕೆಲವೊಂದು ಅಂಶಗಳು ಸಾಮ್ಯತೆಗಳಿರುವುದನ್ನು ಕಾಣಬಹುದು. ಅರಸರ ಮಕ್ಕಳು, ಚೆಲುವೆಯರು, ತಂದೆ ತಾಯಿಗಳಿಂದ ಮುದ್ದಾಗಿ ಬೆಳೆದವರು, ಸಂಪ್ರದಾಯದಂತೆ ತಂದೆ ತಾಯಿಯರು ಮಕ್ಕಳನ್ನು ಬೆಳೆಸಲು ಮುಂದಾಗುವರು. ಕಂಜರೆಯ

ತಂದೆ ಸೌಂದರ ರಾಜ ರೋಷಭಾಸ್ಕರ ಮುನಿಯ ಕೋಪಕ್ಕೆ ಬಲಿಯಾಗಿ ಶಾಪ ಹೊಂದಿ ಮರಣಹೊಂದುತ್ತಾನೆ. ಈತನ ಮಗಳು ರಾಕ್ಷಸಿಯ ವಶವಾಗುತ್ತಾಳೆ. ವಸಂತೆಯ ತಂದೆ ಕುಹಳ ಮಹಾಕಾಳಿಯ ವರದಂತೆ ವಿವಾಹ ನೆರವೇರಿಸಲು ಮುಂದಾಗುವುದು ದೈವ ಮುಖ್ಯವಾದರೆ, ಕಂಜರೆಯ ತಂದೆ ಗುರುವನ್ನು ತಿರಸ್ಕರಿಸಿದ್ದರಿಂದ ರಾಕ್ಷಸನ ಕ್ರೌರ್ಯಕ್ಕೆ ಬಲಿಯಾಗುತ್ತಾರೆ. ಈ ಮೂಲಕ ರಾಕ್ಷಸ ಪ್ರವೃತ್ತಿಯ ಜನರು ವಿಜಯನಗರ ಸಾಮ್ರಾಜ್ಯದಲ್ಲಿ ಇದ್ದರೆಂಬ ವಿಚಾರ ತಿಳಿದುಬರುತ್ತದೆ. ರಾಕ್ಷಸ ದುಷ್ಟತೆಯ ಪ್ರತೀಕವಾದರೆ, ಮಹಾಕಾಳಿ ಶಿಷ್ಟದೈವದ ಸಂಕೇತವಾಗಿದ್ದಾಳೆ. ಕಂಜರೆ ವಸಂತೆಯರಿಬ್ಬರೂ ಆತ್ಮಬಲ, ಸ್ವಯಂ ನಿರ್ಧಾರಗಳಿಂದ ತಮ್ಮ ಪೂರ್ವ ವೃತ್ತಾಂತವನ್ನು ನೆನೆದು ವಿಕ್ರಮನ ಮೂಲಕ ಪರಿಹಾರವನ್ನು ಪಡೆದುಕೊಂಡು ತಮ್ಮ ಇಚ್ಛೆಯಂತೆ ಕಂಜರೆ ಮಾಳವನನ್ನು, ವಸಂತೆ ಮಧುರನನ್ನು ವಿವಾಹವಾಗುತ್ತಾರೆ. ಇವರಿಬ್ಬರೂ ತಂದೆಯ ವರ್ತನೆ, ನಿರ್ಧಾರವನ್ನು ಆತ್ಮಾವಲೋಕನ ಮಾಡುತ್ತಾರೆ.

> "ಪಡದರ ನುಡಿ ಪಿರಿಯರ ಮಾತು ಗುರುವಾಕ್ಯ
> ಮೃಡನ ಮಾತೊಳು ಗೆಳೆಯರ ಸೊಲ್ಲು
> ಒಡೆಯನ ವಚನ ಗಂಡನ ಮಾತು ಜೀವನ
> ದೊಡನೊಕ್ಕಲೆಂದಜೆ ನೀನೆಂದ"(೧೦/೫೪)

ವ್ಯಕ್ತಿ ಜೀವನವನ್ನು ಸಾರ್ಥಕಪಡಿಸಿಕೊಳ್ಳಲು ತಂದೆ-ತಾಯಿಗಳ ಮಾತು, ಗುರು-ಹಿರಿಯರ ಹಿತವಚನ, ಗೆಳೆಯರ ಪ್ರೀತಿಯ ಮಾತುಗಳು, ಒಡೆಯನ, ಗಂಡನ ವಚನಗಳನ್ನು ತಿರಸ್ಕರಿಸದೇ ತಿಳಿದು ಪಾಲಿಸಬೇಕೆಂಬ ನೀತಿಯನ್ನು ಕವಿ ಪತ್ನಿಯ ಮೂಲಕ ಜನತೆಗೆ ತಿಳಿಸಿದ್ದಾನೆ. ಹಾಗೆಯೇ ತಂದೆ ತಾಯಿಗಳ, ಗುರು ಹಿರಿಯರ ಮಾತುಗಳನ್ನು ಕೇಳಿಕೊಂಡು ತಮ್ಮ ಉಜ್ವಲ ಬದುಕನ್ನು ಕಟ್ಟಿಕೊಂಡು ಬಾಳುವ ಜನರು ಹದಿನೈದನೆ ಶತಮಾನದಲ್ಲಿ ಇದ್ದರೆಂದು ಧ್ವನಿಸುತ್ತದೆ.

ವಸಂತೆಯ ವೃತ್ತಾಂತದ ನಂತರ ಸುರಭಿಶೇಖರನ ವೃತ್ತಾಂತ ಕಾವ್ಯದಲ್ಲಿದೆ. ವಿಕ್ರಮ ವನ, ಸರೋವರ, ಕಮಲ, ಪಕ್ಷಿ, ಪ್ರಾಣಿಗಳ, ಬೇಡರ ಬೇಟೆ ದೃಶ್ಯಗಳನ್ನು ಗಮನಿಸುತ್ತಾ ಹಂದಿಯ ಭೀಕರ ದೃಶ್ಯವನ್ನು ಕಾಣುತ್ತಾನೆ. ಶಬರರ ಬಾಣಕ್ಕೆ ಹಂದಿ ಉಗ್ರ ಸ್ವರೂಪ ತಾಳಿದಾಗ ವಿಕ್ರಮ ಬಾಣ ಹೂಡಿ ಕೊಲ್ಲುತ್ತಾನೆ. ವಿಜಯನಗರ ಕಾಲದಲ್ಲಿ ಹಂಪಿಯ ಪ್ರದೇಶವು ಹಲವು ಪ್ರಾಣಿ ಪಕ್ಷಿಗಳಿಂದ ಕೂಡಿದ್ದು, ಅವುಗಳ ಬೇಟೆಗೆ ಪ್ರಸಿದ್ಧವಾಗಿತ್ತು. ಅವುಗಳಲ್ಲಿ ಮುಖ್ಯವಾಗಿ ಹಂದಿ ಬೇಟೆಯು ವಿಶೇಷವಾಗಿ ನಡೆಯುತ್ತಿತ್ತು ಎಂಬ ವಿಚಾರ ಈ ಕಾವ್ಯದ ಮೂಲಕ ತಿಳಿದುಬರುತ್ತದೆ. ಹಂದಿಯ ಹೊಟ್ಟೆಯಲ್ಲಿ ಶಿವಭಕ್ತ ಸುರಭಿಶೇಖರ ಇದ್ದು ವಿಕ್ರಮನ ಆಶೀರ್ವಾದದಿಂದ ಮುಕ್ತಿ ಹೊಂದುತ್ತಾನೆ. ಕೈಲಾಸದ ಶಿವಪಾರ್ವತಿಯರ ಕತೆಯನ್ನು ಭೂಲೋಕದ ಜನತೆಗೆ ಸಾರುತ್ತಾನೆ. ಕೈಲಾಸದಲ್ಲಿ ಪಾರ್ವತಿಗೆ ನಿತ್ಯವೂ ಮಂದಾರ ಪುಷ್ಪವನ್ನು ತಂದುಕೊಡುವಂತ ಸೇವೆಯಲ್ಲಿರುತ್ತಾನೆ. ಒಮ್ಮೆ ಗಂಗೆ ಮಂದಾರ ಪುಷ್ಪ ಬಯಸಿ ಸುರಭಿಶೇಖರನನ್ನು ಇಕ್ಕಟ್ಟಿಗೆ ಸಿಲುಕಿಸುತ್ತಾಳೆ. ಈ ಕತೆಯ ಆಶಯವನ್ನು ಶಾಂತಲಿಂಗ ದೇಸಿಕ ಕೃತ ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರದಲ್ಲಿ "ಜಸಗಂಪನಿಂದ ವನಜನು ಪಂದಿ ರೂಪ ನೀಡಾಡಿದನು ಎಂಬುದಕ್ಕೆ ಕಥೆ, ಶಶಿವಾಳಪುರದಲ್ಲಿ ಜಯಶೇಖರರಾಯನ ಸತಿ ಸುರಭಾವತಿಯ ಮಗ 'ಜಸಗಂಪ ವಿಕ್ರಮ'ನೆಂಬ

ಉಭಯ ನಾಮದಿಂದಿರುತಂ, ಅಡವಿಗೆಯ್ದು ಬೇಂಟೆಯಾಡುವಾಗ, ಮುನ್ನೊಬ್ಬ ದೇವಲೋಕದ ಪುವ್ವಡಿಗನು ಪಾರ್ವತೀ ದೇವಿಯೊಡನೆ ಪುಸಿಯ ನುಡಿಯಲು, ಸೂಕರನಾಗೆಂದಾಜ್ಞಾಪಿಸಲು ಎನಗೆ ಸುಜನ್ಮವೆಂದಿಗೆ ನಲು ಜಸಗಂಪನಿಂದ ಸುಖವಹುದೆ ನಲವಂ ಬಂದು ಭೂಲೋಕದಲ್ಲಿ ಪುಟ್ಟಿ ಸೂಕರನಾಗಿ ಅರಣ್ಯದೊಳಗಿರಲು ವಿಕ್ರಮ ನೆಸೆಯಲು ಅದಱ ಪೊಟ್ಟೆಯೊಳಗಣಿಂದ ವನಜನೆಂಬವಂ ಪೊಱಮಟ್ಟು ಶಾಪದ ಬಿಡುಗಡೆ ತನಗಾದುದು ವಿಕ್ರಮಗೆ ಪೇಳಿ ತನ್ನ ಗಂಧರ್ವಲೋಕಕ್ಕೆ ಪೋದನು."[೧೧] ಈ ಕಥೆಗೆ ಸಾಮ್ಯತೆಯಾಗಿ ಬಸವರಾಜ ದೇವರ ರಗಳೆಯನ್ನು ಗಮನಿಸಬಹುದು. "ಒಂದು ದಿನ ಕೈಲಾಸದಲ್ಲಿ ಶಿವನ ಒಡ್ಡೋಲಗ, ಮಾಲೆಗಾರನೊಬ್ಬ ಸಂಪಿಗೆ ಹೂಗಳನ್ನು ತಂದು ಶಿವನಿಗೆ ಅರ್ಪಿಸುತ್ತಾನೆ. ಸುಪ್ರಸನ್ನನಾದ ಶಿವ 'ವೃಷಭಮುಖ' ಎನ್ನುವ ಗಣೇಶ್ವರನನ್ನು ಕರೆದು ಎಲ್ಲರಿಗೂ ಪ್ರಸಾದ ವಿತರಣೆ ಮಾಡಿದ ವೃಷಭಮುಖ ಅವಸರದಲ್ಲಿ ಕುಮಾರ ಸ್ವಾಮಿಗೆ ಕೊಡುವುದನ್ನು ಮರೆಯುತ್ತಾನೆ. ಷಣ್ಮುಖ, ತನಗೆ ಪ್ರಸಾದ ಮುಟ್ಟಲಿಲ್ಲ ಎಂದುದಕ್ಕೆ ಅವನಿಗೂ ಕೊಟ್ಟಿರುವುದಾಗಿ ವೃಷಭಮುಖ ಭಕ್ತಿ ಪರವಶನಾಗಿ ವಾದಿಸುತ್ತಾನೆ. ತನ್ನ ಸಮ್ಮುಖದಲ್ಲಿಯೇ ಸುಳ್ಳು ಸಾಧಿಸಲು ಯತ್ನಿಸಿದ. ಮರವೆಯ ತಪ್ಪಿಗಾಗಿ ವೃಷಭಮುಖನು ಮರ್ತ್ಯದಲ್ಲಿ ಮಾನವನಾಗಿ ಹುಟ್ಟಬೇಕು, ಶಿವಭಕ್ತರ ಸೇವೆ ಸಲ್ಲಿಸಿ ಭೂಲೋಕದಲ್ಲಿ ಶಿವಪ್ರಸಾದವನ್ನು ಹಂಚಿ ಮರಳಿ ಕೈಲಾಸಕ್ಕೆ ಬರಬೇಕು ಎಂದು ಶಿವನ ಆಜ್ಞೆ"[೧೨] ಎಂಬುದು ಬಸವಣ್ಣನ ಜನ್ಮದ ಕಥೆಯಂತೆ ಇದೆ. ಈ ಕಥೆಯ ಕುರಿತು ಬಿ.ಎಸ್. ಸಣ್ಣಯ್ಯ ಅವರು "ಖಚರ ಸುರಭಿಶೇಖರನು ಎಕ್ಕಲನಾಗಿ ಹುಟ್ಟಲು ಗಂಗೆ ಗೌರಿಯರ ಮಧ್ಯೆ ಇದ್ದ ಮಾತ್ಸರ್ಯವೇ ಕಾರಣವಾಗುತ್ತದೆ. ಇಲ್ಲಿ ಸುರಭಿಶೇಖರನು ಮಾಡಿದ ತಪ್ಪಾವುದೂ ಇಲ್ಲದಿದ್ದರೂ ಶಿಕ್ಷೆಗೆ ಒಳಗಾಗುವುದರ ಮೂಲಕ, ಅದಕ್ಕೆ ಕಾರಣರಾದ ಒಡತಿಯರಿಬ್ಬರ ಮುನಿಸೇ ಮೂಲವಾಗುವುದನ್ನು ಕವಿಯು ಚಿತ್ರಿಸಿರುವಂತಿದೆ"[೧೩] ಎಂದಿದ್ದಾರೆ.

> "…. ಮಕರಿಣಿ ಮುಂ ಕಿವಿಯೊಳ್ಚಿತ್ತಿ
> ಬೆಳಸಿದ ಪಿಸುಣೆಂಬೆಳೆವಳ್ಳಿ
> ಅಲರೇಱ ಫಲ ಬಲಿದುಲಿವಂತೆ…"(೧೨/೯೫)

ಎಂಬುದು ಪಾರ್ವತಿ ಗಂಗೆಯರ ಮಧ್ಯೆ ಇದ್ದ ಮಕರಿಣಿ, ಕುಮುದೆ, ತರಂಗೆಯರ ಚಾಡಿಮಾತುಗಳು ಇರುವ ಸಮಸ್ಯೆಯನ್ನು ಹೆಚ್ಚು ಮಾಡಿದವು. ಯಾವುದೇ ಸಮಸ್ಯೆಗಳಿದ್ದರೂ ಮುಕ್ತವಾದ ಚರ್ಚೆಗಳಿಂದ ಪರಿಹಾರ ಕಂಡುಕೊಳ್ಳಬಹುದು ಆದರೆ ಚಾಡಿ ಮಾತಿನ ಸ್ತ್ರೀಯರಿಂದ ಇರುವ ಸಮಸ್ಯೆ ಗಂಭೀರ ಸ್ವರೂಪ ತಾಳುತ್ತದೆ. ಇಂತವರಿಂದ ಎಚ್ಚರಿಕೆಯಿಂದಿರಲು ಕವಿ ಪತ್ನಿಗೆ ಸೂಚಿಸುತ್ತಾನೆ.

> "ಕಿವಿಗೀವರು ಕಂಗಳನೊಡನಿಂದ್ರಜಾ
> ಲವ ತೋರ್ಪರ್ ತುದಿನಾಲಗೆಯಿಂದ
> ರವಿಯನು ತಣ್ಣನೆ ಮಾಡಿ ಶಶಿಯನು ಬಿಸಿಮಾಡು
> ವವಗಡೆಯರು ಕೊಂಡೆಯರು ಪ್ರಿಯೆ"(೧೩/೨೧)

ಸುರಭಿಶೇಖರ ಶಿವನ ಮೇಲಿನ ಭಕ್ತಿ, ನಿಷ್ಠೆಯಿಂದ ಸೇವೆ ಮಾಡುತ್ತಾನೆ. ಪಾರ್ವತಿ ಮತ್ತು ಗಂಗೆಯರಿಬ್ಬರೂ ತಾಯಿ ಸಮಾನರೆಂದು ತಿಳಿದು ಮಂದಾರಪುಷ್ಪ ಕೊಡುತ್ತಾನೆ. ಗೌರಿ ಗಂಗೆಯರ ಮೇಲುಕೀಳೆಂಬ ಭಾವನೆಯಲ್ಲಿ ಶಿವನಿಂದ ಶಾಪ ಪಡೆದು ಮರುಜನ್ಮ ತಾಳಿ ಮುಕ್ತಿ ಪಡೆಯುವ ಸುರಭಿಶೇಖರನಲ್ಲಿಯ ತಾಳ್ಮೆ, ಸಹನೆ, ಶ್ರದ್ಧೆ ಗುಣಗಳು ಇತರರಿಗೂ ಮಾದರಿಯಾಗುತ್ತವೆ.

ರತ್ನಮೇಖಲೆ ಎಂಬ ಪರ್ವತದಲ್ಲಿ ನಾಗರಿಕ ಕುಲಕ್ಕೆ ಸೇರಿದ ಪಕ್ಷಿ ಪೂರ್ವಕಾಲದಿಂದಲೂ ಮುತ್ತು ರತ್ನಗಳನ್ನು ಹೊಂದಿ ಸುಖವಾಗಿತ್ತು. ತಂದೆ, ತಾಯಿ ಮತ್ತು ಮರಿ ಎಂಬ ಮೂರು ಪಕ್ಷಿಗಳು ಈ ಕಾವ್ಯದಲ್ಲಿ ಕವಿಯಿಂದ ಚಿತ್ರಿಸಲ್ಪಟ್ಟಿವೆ. ಇಲ್ಲಿ ಮರಿ ಪಕ್ಷಿ ಬೇಡನ ಮೂಲಕ ಕಾಣಿಕೆಯಾಗಿ ವಿಕ್ರಮನನ್ನು ಸೇರುತ್ತದೆ. ತಂದೆ ಪಕ್ಷಿಯು ಶಬರಪತಿಯಿಂದ ಬಂಧಿಸಲ್ಪಟ್ಟಿರುತ್ತದೆ. ಮತ್ತೊಂದು ಪಕ್ಷಿ ಇತ್ತ ಪತಿಯೂ ಇಲ್ಲದೆ ಅತ್ತ ಮಗನೂ ಇಲ್ಲದೆ ಏಕಾಂತವಾಗಿ ಮನೆಯಲ್ಲಿರುತ್ತದೆ. ಸಾಗರದ ಮಧ್ಯದಲ್ಲಿ ಇರುವ ಶಿವಸಾಗರೇಶ್ವರ ದೇವರಿಗೆ ಮುತ್ತುರತ್ನವನ್ನು ಕೊಟ್ಟು ತನ್ನ ವಂಶವನ್ನು ಕಾಪಾಡಿಕೊಂಡು ಬಂದಿರುತ್ತದೆ. ಪಕ್ಷಿಯ ವರ್ಣನೆ, ಸಾಗರ, ಪರ್ವತ, ಶಿವ, ಸಾಗರೇಶ್ವರ, ಬೇಡರು ವಿವಿಧ ಪಕ್ಷಿಗಳನ್ನು ಮಾರುವ, ಕೋತಿಗಳು ಬೆಟ್ಟದ ಕತೆ ಹೇಳಿ ಹಾಸ್ಯ ಮಾಡುವ, ನಾಗರಿಕ ಪಕ್ಷಿ ಬುದ್ಧಿವಂತರಂತೆ ಮಾತನಾಡುವ ಪ್ರಸಂಗಗಳು ಓದುಗರಲ್ಲಿ ಕುತೂಹಲ ಮೂಡಿಸುತ್ತವೆ. ನಾಗರಿಕ ಪಕ್ಷಿ ಮತ್ತು ವಿಕ್ರಮರ ಸಂವಾದವು ವಿದೇಶಿ ರಾಯಭಾರಿಯೊಂದಿಗೆ ನಡೆಸುವ ಸಂವಾದದಂತೆ ಇದೆ ಎನ್ನಿಸುತ್ತದೆ. ಕವಿ ತನ್ನ ಸ್ವ ಅನುಭವಗಳನ್ನು ಪಕ್ಷಿಯ ಪರಕಾಯ ಪ್ರವೇಶದೊಂದಿಗೆ ಮುಕ್ತವಾಗಿ ವ್ಯಕ್ತಪಡಿಸಿರಬಹುದು. ನಾಗರಿಕ ಪಕ್ಷಿಯು ವಿಕ್ರಮನಿಗೆ ತಂದೆ, ತಾಯಿ, ದೈವ, ಶತ್ರು, ಬೇಡ, ಬೇಡತಿ, ಉದ್ಯಾನವನ ಕಾಯುವ ಮಾದಲ, ಪತ್ರಿಣಿಯರಿಗೆ ಸಂಬಂಧಿಸಿದ ವಿಷಯಗಳನ್ನು ವಿವರಿಸುತ್ತದೆ. ಈ ವಿಷಯಗಳು ಬೇರೆ ಬೇರೆ ಆಯಾಮಗಳನ್ನು ಕುರಿತಿವೆ ಆದರೂ ಪ್ರಧಾನವಾಗಿ ಒಂದೇ ಕತೆಯೆಂಬಂತೆ ಮುಂದುವರೆದಿದೆ. ಪಕ್ಷಿಗಳು ಮನುಷ್ಯರಂತೆ ಮಾತನಾಡಲಾರವು ಆದರೆ ಕವಿಗಳು ಕಾವ್ಯದಲ್ಲಿ ಪಕ್ಷಿಯ ಮೂಲಕ ಸಂಭಾಷಣೆ, ನೀತಿ, ಸಂಸ್ಕಾರಗಳನ್ನು ವ್ಯಕ್ತಪಡಿಸಿದ್ದಾರೆ.

ನಾಗರಿಕ ಪಕ್ಷಿಗಿಂತ ಭಿನ್ನವಾದ ನೀತಿಯನ್ನು ಪಾಲಿಸಿದ ಕತೆಯನ್ನು ಗಮನಿಸಬಹುದು. "ಹೊಟ್ಟೆಗಿಲ್ಲದೆ ಕಷ್ಟಕ್ಕೆ ಸಿಕ್ಕಿರುವ ಕಾಲದಲ್ಲಿ ಕಪೋತನಂತೆ ಶತ್ರುವಿಗಾದರೂ ಸಹಾಯ ಮಾಡಬೇಕು, ಒಂದು ಕಾಡಿನಲ್ಲಿ ಒಬ್ಬ ಬೇಡನು ಹಕ್ಕಿ ಪಕ್ಷಿಗಳನ್ನು ಹಿಡಿದು ಕತ್ತಲೆಯಾಗಲು ಅಲ್ಲೇ ಒಂದು ಮರದ ಕೆಳಗೆ ತರಗೆಲೆಗಳನ್ನು ಹರಡಿ ಒಂದು ಕಲ್ಲನ್ನು ಒರಗಿಕೊಂಡು ಮಲಗಿದನು. ಆದರೆ ನಿದ್ದೆಬಾರದು, ಹಸಿವು, ಚಳಿ ಆ ಮರದ ಮೇಲಿದ್ದ ಒಂದು ಪಾರಿವಾಳವು ಅದನ್ನು ನೋಡಿ ಅವನ ಮುಂದೆ ಕಡ್ಡಿಗಳನ್ನು ತಂದು ಹಾಕಿ ಬೆಂಕಿ ಹೊತ್ತಿಸಿ ಕೊಟ್ಟಿತು. ಆಮೇಲೆ ಅವನಿಗೆ ಆಹಾರವಾಗಲೆಂದು ತಾನೇ ಅದರೊಳಗೆ ಬಿದ್ದು ಸತ್ತಿತು. ಅವನಿಗೆ ಅದರಿಂದ ವ್ಯಥೆಯಾಗಿ ತಾನು ಹಿಡಿದಿದ್ದ ಹಕ್ಕಿಗಳನ್ನೆಲ್ಲಾ ಬಿಟ್ಟನು. ಅವುಗಳಲ್ಲಿ ಸುಟ್ಟ ಹೆಂಡತಿಯೂ ಇತ್ತು. ಅದು ಈ ಮೊದಲೇ ಬೇಡನ ಚೀಲದೊಳಗಿಂದಲೇ ಅವನಿಗೆ ಆತಿಥ್ಯ ಮಾಡಬೇಕೆಂದು ಗಂಡನನ್ನು ಕೇಳಿಕೊಂಡಿತ್ತು. ಈಗ ಗಂಡ ಸತ್ತ ಬೆಂಕಿಯಲ್ಲಿ ತಾನೂ ಬಿದ್ದು ಸಹಗಮನದಿಂದ ಪ್ರಾಣಬಿಟ್ಟಿತು.

ಬೇಡನೂ ಮುಂದೆ ಹೋಗಿ ಕಾಳ್ಗಿಚ್ಚಿನಲ್ಲಿ ಸತ್ತನು. ಅವರಲ್ಲಿ ಮೂವರಿಗೂ ಸದ್ಗತಿ ಲಭಿಸಿತು"[೧೪] ಎಂಬುದಾಗಿ ಇದೆ. ಮತ್ತೊಂದು ಶ್ರೀ ಚಿಕ್ಕುಪಾಧ್ಯಾಯ ಶ್ರೀ ಸುಕಸಪ್ತತಿಯಲ್ಲಿ ಎಪ್ಪತ್ತೆರಡು ಕಥೆಗಳಿವೆ. ನೀತಿಬೋಧನೆಯನ್ನು ಕುರಿತಿವೆ. "ವಹ್ನಿರಾಜ ಎನ್ನುವ ದೊರೆ ಒಬ್ಬನಿದ್ದಾನೆ. ಅವನಿಗೆ ದೇವದಾಸ ಎನ್ನುವ ಸ್ವಾಮಿಭಕ್ತನೂ, ಧೀರನೂ ಆದ ಭೃತ್ಯನಿದ್ದಾನೆ. ಈ ಭೃತ್ಯನ ಪತ್ನಿ ಅಪಾರ ಚೆಲುವೆ ಎಂದು ದೊರೆಗೆ ಅವನ ಗೂಢಚಾರರ ಮೂಲಕ ತಿಳಿಯುತ್ತದೆ. ಕಾಮಾತುರನಾಗಿ ದೊರೆ ಭೃತ್ಯನನ್ನು ಬಹು ದೂರದ ಜಾಗದಲ್ಲಿ ಬಹು ಕಷ್ಟಕರವಾದ ಕೆಲಸವನ್ನು ವಹಿಸಿ ಹೊರಕ್ಕೆ ಕಳಿಸಿ, ನಂತರ ಆತನ ಪತ್ನಿಯನ್ನು ವಶಪಡಿಸಿಕೊಳ್ಳಲು ಉದ್ಯೋಗಿಸುತ್ತಾನೆ... ಅತ್ಯಂತ ಸುಂದರನೂ, ಧೀರನೂ, ರಾಜನೂ ಆದ ತಾನು ಅವಳನ್ನು ವಶಪಡಿಸಿಕೊಂಡೇತೀರುತ್ತೇನೆ ಎನ್ನುವುದು ಅವನ ಹಠ, ಆದರೆ ಆ ಭೃತ್ಯನ ಮನೆಯಲ್ಲಿ ಅಪೂರ್ವವಾದ ಒಂದು ಗಿಣಿ ಇದೆ. ದೊರೆ ಬಂದಾಗಲೆಲ್ಲಾ ಆ ಗಿಣಿ ಒಂದು ಕಥೆ ಹೇಳಿ ಪರಸ್ತ್ರೀ ವ್ಯಾಮೋಹ ಎಷ್ಟು ಆತ್ಮಘಾತುಕವಾದದ್ದು ಎಂದು ಮನದಟ್ಟು ಮಾಡುತ್ತಿರುತ್ತದೆ. ಇದನ್ನು ಏಕಪ್ರಕಾರವಾಗಿ ಎಪ್ಪತ್ತೆರಡು ದಿನ ಕೇಳಿದ ನಂತರ ದೊರೆಗೆ ತನ್ನ ತಪ್ಪು ತಿಳಿದು, ತನ್ನನ್ನು ತಾನೇ ತಿದ್ದಿಕೊಳ್ಳುತ್ತಾನೆ."[೧೫]

ಕಪೋತ ಮತ್ತು ಶುಕ ಪಕ್ಷಿಗಳ ಕಥೆಗಳು ಮನುಷ್ಯನಿಗೆ ನೀತಿಬೋಧನೆಯನ್ನು ಮಾಡುತ್ತವೆ. ಆದರೆ ನಾಗರಿಕ ಪಕ್ಷಿ ವಿಜಯನಗರ ಕಾಲದಲ್ಲಿದ್ದ ಧರ್ಮ, ರಾಜಕೀಯ, ತಳವಾರಿಕೆ, ಅರಸರ ದೌರ್ಬಲ್ಯಗಳು, ಬೇಡರ ಜೀವನ, ವೇಶ್ಯೆ ಮುಂತಾದವುಗಳನ್ನು ಕುರಿತು ಪರಿಚಯಿಸುತ್ತದೆ. ಹಾಗಾಗಿ ನಗರ ಸಮಸ್ಯೆಯನ್ನು ಕುರಿತು ವಿವರಿಸುವುದರಿಂದ ಕವಿ ಕಲ್ಪನೆ ಮಾಡಿ 'ನಾಗರಿಕ ಪಕ್ಷಿ' ಎಂಬ ಹೆಸರು ನೀಡಿರಬಹುದೆನ್ನಿಸುತ್ತದೆ.

ಬರಗೆ ಎಂಬ ಬೇಡನ ಪತ್ನಿ ಪತಿಯನ್ನು ಬಿಟ್ಟು ಮಧ್ಯ ರಾತ್ರಿ ರಹಸ್ಯವಾಗಿ ಬೇರೊಬ್ಬ ಪುರುಷನನ್ನು ಭೇಟಿಯಾಗಿ ಬರುವುದು ಹಲವು ಸಂಶಯಗಳಿಗೆ ಕಾರಣವಾಗುತ್ತದೆ. ಪತಿಯನ್ನು ವಂಚಿಸಿರುವುದಲ್ಲದೆ, ಆತನ ಪ್ರಾಣವನ್ನೇ ತೆಗೆಯುವುದಕ್ಕೆ ಕುತಂತ್ರ ಹೂಡುತ್ತಾಳೆ. ನಾಗರಿಕ ಪಕ್ಷಿಯ ಚಾಣಾಕ್ಷತನ ಉಪಯೋಗಿಸಿಕೊಂಡು ಕುತಂತ್ರದ ಗೆಲುವನ್ನು ಸಾಧಿಸುತ್ತಾಳೆ. ಇಂತಹ ಸ್ತ್ರೀ ಬುದ್ಧಿ ಪ್ರಳಯಾಂತಕವಾದುದು ಇದು ಸ್ತ್ರೀ ಕುಲಕ್ಕೆ ಕಳಂಕ ತುರವಂತಹದ್ದಾಗಿದೆ. ಬೇಡನ ತಪ್ಪುಗಳೇನು, ಪತ್ನಿಯ ಅಂತರಂಗದ ಭಾವನೆಗಳೇನು, ಎಂಬ ವಿಷಯಗಳು ಕಾವ್ಯದಲ್ಲಿಲ್ಲ. ಪತಿಯು ಪತ್ನಿಯ ಮನಸ್ಸನ್ನು ತಿಳಿಯದೇ ಇದ್ದರೆ ಅವನಿಗೆ ಅವಳಿಂದ ಜಯವಿಲ್ಲದೆ ನೊಂದು ಕೊರಗುವುದಾಗುತ್ತದೆ. ಜನ್ನನ ಯಶೋಧರ ಚರಿತೆಯ ಅಮೃತಮತಿ ಮತ್ತು ಬರಗೆ ಇವರಿಬ್ಬರೂ ಪರಪುರುಷರನ್ನು ಬಯಸಿದವರೇ ಆಗಿದ್ದಾರೆ.

ಬರಗೆಯ ವ್ಯಕ್ತಿತ್ವ ಕುರಿತು ಬಿ.ಎಸ್. ಸಣ್ಣಯ್ಯ ಅವರು "ಬರಗೆಯು ಅತ್ಯಂತ ಕೀಳುಮಟ್ಟದ ಜಾರೆಯಾಗಿದ್ದಾಳೆ. ಕವಿಯು ಸಮಾಜದಲ್ಲಿನ ಕುಂದೊಂದನ್ನು ಬರಗೆಯ ಚಿತ್ರದ ಮೂಲಕ ನೀಡಿರುವಂತೆ ತೋರುತ್ತದೆ. ಆಕೆಯು ತನ್ನ ಆಣ್ಮನೊಡನೆ ಮಲಗಿದ್ದು ಆತನು ಮಲಗಿದ ಮೇಲೆ, ತಾನು ಜಾರತನಕ್ಕೆ ಜಾರುವ ಚಿತ್ರ ಸಹಜವಾಗಿದೆ. ಯಶೋಧರ ಅಮೃತಮತಿಯರ

ಕಥೆಯನ್ನು ನೆನಪಿಗೆ ತರುತ್ತದೆ. ಇಲ್ಲಿ ಬರಗೆಯು ಅಮೃತಮತಿಗಿಂತ ಕೀಳಾಗಿ ವರ್ತಿಸಿದ್ದಾಳೆ, ಕೂಡಿದ ಒಡೆಯನನ್ನು ಕೊಲ್ಲಿಸಿದ, ಬಯಸಿದ ಬನದೊಡೆಯನನ್ನು ಕೂಡುವುದು ಅತ್ಯಂತ ತುಚ್ಛವಾಗಿದೆ. ಇದಕ್ಕೆ ಸಹಾಯಕವಾಗಿ ನಿಂತ ನಾಗರಿಕ ಹಕ್ಕಿಯ ಪಾತ್ರವೂ ಅತ್ಯಂತ ಕೀಳಾಗಿ ಪರಿಣಮಿಸಿದೆ"[೧೬] ಎಂಬ ಅಭಿಪ್ರಾಯಪಟ್ಟಿದ್ದಾರೆ. ಮತ್ತೊಂದು ಕಡೆಯಲ್ಲಿ ವೀರಣ್ಣ ರಾಜೂರ ಅವರು "ಕವಿ ಅಂದಿನ ಸಮಾಜದಲ್ಲಿನ ಅನೀತಿಯ ಚಿತ್ರವನ್ನು ಕಾಣಿಸಲು ಪ್ರಯತ್ನಿಸಿದ್ದಾನೆ. ಅದರಂತೆ ಬರಗೆಯ ವ್ಯಭಿಚಾರಕ್ಕೆ ಪುಟಕೊಟ್ಟು ಸಹಾಯ ಮಾಡಿದ. ಅವಳ ಗಂಡನನ್ನು ಕೊಲ್ಲಿಸಿ ಪ್ರಿಯಕರನನ್ನು ಕೂಡುವಂತೆ ಮಾಡಿದ ನಾಗರಿಕ ಪಕ್ಷಿಯಲ್ಲಿ ಕುಂಟಣಿ ಸ್ತ್ರೀಯೊಬ್ಬಳ ವ್ಯಕ್ತಿತ್ವವನ್ನು ಪಡಿಮೂಡಿಸಿದ್ದಾನೆ"[೧೭] ಎಂದಿದ್ದಾರೆ. ಸಿ.ಯು. ಮಂಜುನಾಥ ಅವರು "ಬರಗೆಯ ವಿಚಿತ್ರ ಪ್ರಣಯ ಕಥೆ ಬರುತ್ತದೆ. ಪಕ್ಷಿಯ ಚತುರ ಬುದ್ಧಿಯ ಪರಿಚಯವೂ ಆಗುತ್ತದೆ. ಬರಗೆಯು ಗಂಡನನ್ನು ತ್ಯಜಿಸಿ ತನ್ನಿಚ್ಛೆಯಂತೆ ಮಾದಲನನ್ನು ಸೇರಲು ಸಹಾಯ ಮಾಡುತ್ತದೆ".[೧೮] ನಾಗರಿಕ ಪಕ್ಷಿ ಕಾಲ ಮತ್ತು ಪರಿಸ್ಥಿತಿಗೆ ಹೊಂದಿಕೊಂಡು ಹೋಗುತ್ತದೆ. ಎಲ್ಲಾ ಕಡೆ ಸುತ್ತಾಡುವ ಅವಕಾಶವಿದ್ದು ಸಮಗ್ರ ಮಾಹಿತಿಯನ್ನು ತಿಳಿದುಕೊಂಡು ತನ್ನ ಅನುಕೂಲಕ್ಕೆ ತಕ್ಕಂತೆ ಕಾರ್ಯಪ್ರವೃತ್ತವಾಗುವ ಗುಣ ಹೊಂದಿದೆ.

ಪತ್ರಿಣಿ ಅರಸನ ಮಗಳು, ಇವಳ ಸೌಂದರ್ಯಕ್ಕೆ ಮತ್ತೊಬ್ಬ ಸ್ತ್ರೀ ಇಲ್ಲವೇನೂ ಎಂಬಂತೆ ಸುಂದರವಾಗಿದ್ದಾಳೆ ಎಂಬ ಕಲ್ಪನೆ ಕವಿಗಿದೆ. ಅಂದರೆ ಅಂಗಜನ ಪಾಶದಂತೆ, ಚಂದ್ರನ ಕಾಂತಿಯಂತೆ, ರನ್ನಗನ್ನಡಿಯಂತೆ ಇದ್ದಳೆಂದು ವರ್ಣಿಸಿದ್ದಾನೆ. ವಿಕ್ರಮನ ಗುಣ ಸ್ವಭಾವಗಳನ್ನು ವರ್ಣಿಸಿ ಪತ್ರಿಣಿ ವಿಕ್ರಮರಿಬ್ಬರಲ್ಲೂ ಪ್ರೀತಿ ಪ್ರೇಮ ಬೆಳೆಯುವಂತೆ ನಾಗರಿಕ ಪಕ್ಷಿ ಮಧ್ಯಸ್ಥಿಕೆ ವಹಿಸುತ್ತದೆ. ಪಕ್ಷಿ ಇವರಿಬ್ಬರಲ್ಲೂ ಚಾಣಾಕ್ಷತನದ ಬುದ್ಧಿಯನ್ನು ಪ್ರಯೋಗಿಸಿ ಪ್ರಶಂಸೆಗೊಳಲ್ಪಡುತ್ತದೆ. ಪತ್ರಿಣಿ–ವಿಕ್ರಮರ ಪ್ರೀತಿ ಪ್ರೇಮ ನಳದಮಯಂತಿಯರಂತೆ ಇರುವುದನ್ನು ಕಾಣಬಹುದು. ಪತ್ರಿಣಿ ಕುರಿತು ಡಾ. ವೀರಣ್ಣ ರಾಜೂರ ಅವರು "ಪತ್ರಿಣಿ ಮನೋಹರವಾದ ಮುತ್ತಿನ ಚೆಂಡಿನಂತೆ ಚಿತ್ರಿತಳಾಗಿ ಕಥಾನಾಯಕನ ಹೃದಯವನ್ನು ಸೂರೆಗೊಂಡು ಅವನ ಮನೋಮಂದಿರದ ಅಧಿದೇವತೆಯ ಪಟ್ಟವನ್ನು ಪಡೆದುಕೊಂಡಿದ್ದಾಳೆ"[೧೯] ಎಂಬುದಾಗಿ ಹೇಳಿದ್ದಾರೆ. ಪತ್ರಿಣಿ–ವಿಕ್ರಮರಿಬ್ಬರಿಗೂ ಬೆಂಗಾವಲಾಗಿ ಇದ್ದು ಹೃದಯ ಬೆಸೆಯುವ ಪ್ರಯತ್ನ ಮಾಡುತ್ತದೆ. ದೈಹಿಕವಾಗಿ ಒಂದಾಗಬೇಕೆಂಬ ಆಸೆಯಿದ್ದಾಗ ಕಥೆ, ಕಾವ್ಯ ಪುರಾಣ, ರತಿಶಾಸ್ತ್ರ, ನೀತಿಶಾಸ್ತ್ರಗಳನ್ನು ವಿದ್ವಾಂಸರು ಹೇಳುವ ಹಾಗೆ ಹೇಳಿ ಸಂತೈಸುತ್ತದೆ. ಬೆಳಗಿನ ಹೊತ್ತಿನಲ್ಲಿ ಇಬ್ಬರು ಬೇಟಿಯಾಗಿ ಮನಸಾರೆ ನೋಡಿ ನಾಗರ ಪಕ್ಷಿ ಹೇಳಿದ ಸೌಂದರ್ಯವನ್ನು ಕಂಡು ವಿರಮಿಸುತ್ತಾರೆ. ಈ ಕಥೆಯ ಅಂತ್ಯದ ಬಗ್ಗೆ ಬಿ.ಎಸ್. ಸಣ್ಣಯ್ಯ ಅವರು "ಸೊಬಗಿನ ಸೋನೆಯ ಕಥೆ ಪೂರ್ಣವಾದಂತೆ ತೋರುವುದಿಲ್ಲ. ಇದಕ್ಕೆ ಕಾರಣ ಪತ್ರಿಣಿ ಮತ್ತು ಜಸಗಂಪರ ಅಗಲಿಕೆ, ಅವರು ಮತ್ತೆ ಮದುವೆಯಾಗಿ ಕೂಡುವವರೆಗಾದರೂ ಕಥೆ ಮುಂದುವರಿಯಬೇಕಿತ್ತು ಎನ್ನಿಸುವುದು ಸಹಜ"[೨೦] ಎಂಬ ಅಭಿಪ್ರಾಯ ಪಟ್ಟಿದ್ದಾರೆ. ಈ ಕಾವ್ಯದಲ್ಲಿ ವಿಕ್ರಮ ಅತಿಮಾನುಷ, ಅಲೌಕಿಕ ವ್ಯಕ್ತಿಯಾಗಿ, ಶಿವಭಕ್ತನಾಗಿ ವರ್ಣಿತವಾಗಿದ್ದಾನೆ. ಸುಂದರ ಸ್ತ್ರೀಯರನ್ನು ಅವರ ಇಚ್ಛೆಯಂತೆ ಮಧುರ,

ಮಾಳವರಿಗೆ ವಿವಾಹವಾಗಲು ನೆರವಾಗುತ್ತಾನೆ. ಸಂಸಾರಿಯಾಗಿ ಇರದೆ ಮೋಕ್ಷವನ್ನು ಹೊಂದಿ ಕೈಲಾಸವಾಸಿಯಾಗುವ ತವಕದಲ್ಲಿದ್ದ ವಿಕ್ರಮ ಸಹಜವಾಗಿ ವಿವಾಹವನ್ನು ಮಾಡಿಕೊಳ್ಳದೇ ಇರುವುದು ಸಮಂಜಸವಾಗಿದೆ. ಪತ್ರಿಣಿ ಸನ್ಯಾಸಿಯಾಗಿ ಇರಬಹುದೆನ್ನಿಸುತ್ತದೆ. ಈ ಕಾವ್ಯದಲ್ಲಿ ವರ್ಣಿತಗೊಂಡ ಸ್ತ್ರೀ ಪಾತ್ರಗಳು ಜೀವನದ ಬೇರೆ ಬೇರೆ ರೀತಿಯ ಬಿಕ್ಕಟ್ಟುಗಳನ್ನು ಒಳಗೊಂಡು ಪ್ರಧಾನ ಹಾಗೂ ಪಾತ್ರಗಳ ಹಿನ್ನೋಟ ತಂತ್ರವನ್ನು ಒಳಗೊಂಡಿದೆ. ಹಾಗಾಗಿ ಸ್ತ್ರೀ ಸಂವೇದನೆಗಳಿಗೆ ಸ್ಪಂದಿಸುವ, ಪರಿಹಾರವನ್ನು ಸೂಚಿಸುವ ಮೂಲಕ ಶಿವಪಾರ್ವತಿಯರ ಮಹಿಮೆಯನ್ನು ಜಗತ್ತಿಗೆ ಸಾರುವುದಾಗಿದೆ. ಒಟ್ಟಾರೆಯಾಗಿ ಈ ಕಾವ್ಯದಲ್ಲಿ ಧರ್ಮ ಮತ್ತು ರಾಜಕೀಯ ಸಂಘರ್ಷ, ಸ್ತ್ರೀ ಅಪಹರಣ, ಪ್ರಕೃತಿ ಸಂಪತ್ತು, ಜೂಜು, ಬೇಟೆ, ವೇಶ್ಯಾವಾಟಿಕೆ, ಬಲಿ ಇನ್ನು ಮುಂತಾದ ಅಂಶಗಳು ಚಿತ್ರಿತವಾಗಿರುವುದನ್ನು ಕಾಣಬಹುದು. ಈ ಕಾವ್ಯ ಪ್ರಾಕೃತಿಕ, ಧಾರ್ಮಿಕ ಹಾಗೂ ಕ್ಷಾತ್ರದ ವಿಶಿಷ್ಟ ವರ್ಣನೆಯ ಕಾವ್ಯಮಣಿಯೆಂದು ಗ್ರಹಿಸಬಹುದು.

## ಅಡಿ ಟಿಪ್ಪಣಿಗಳು

೧. ಆರ್.ನರಸಿಂಹಾಚಾರ್, ಕರ್ಣಾಟಕ ಕವಿ ಚರಿತೆ, ೧೯೭೩, ಸಂಪುಟ-೨, ಪುಟ ೨,

೨. ಬಿ.ಎಸ್. ಸಣ್ಣಯ್ಯ-ದೇಪರಾಜ ಇತಿವೃತ್ತ, ಕನ್ನಡ ಸಾಹಿತ್ಯ ಚರಿತ್ರೆ, ಮೈಸೂರು ವಿಶ್ವವಿದ್ಯಾಲಯ ಕನ್ನಡ ಅಧ್ಯಯನ ಸಂಸ್ಥೆ, ಪುಟ ೭೫೪, ೭೫೫.

೩. ವೀರಣ್ಣ ರಾಜೂರ, ಕನ್ನಡ ಸಾಂಗತ್ಯ ಸಾಹಿತ್ಯ ಪುಟ-೨೦೨.

೪. ಸಿ.ಯು. ಮಂಜುನಾಥ, ದೇಪರಾಜ, ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಪುಟ-೧೪೭.

೫. ಅದೇ ಪುಟ ಪ್ರಸ್ತಾವನೆ ಪುಟ XLIII.

೬. ವೀರಣ್ಣ ರಾಜೂರ, ಕನ್ನಡ ಸಾಂಗತ್ಯ ಸಾಹಿತ್ಯ ಪುಟ-೨೦೨.

೭. ಎಚ್. ತಿಪ್ಪೇರುದ್ರಸ್ವಾಮಿ, ಕರ್ಣಾಟಕ ಸಂಸ್ಕೃತಿ ಸಮೀಕ್ಷೆ, ೨೦೦೩ ಪು-೩೧೩

೮. ಕನ್ನಡ ಸಾಹಿತ್ಯ ಚರಿತ್ರೆ, ಮೈಸೂರು ವಿಶ್ವವಿದ್ಯಾಲಯ, ೧೯೮೧, ಸಂ-೫, ಪುಟ ೭೫೩

೯. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಬೆಂಗಳೂರು ವಿಶ್ವವಿದ್ಯಾಲಯ, ೧೯೭೭, ಸಂ-೪, ಪುಟ ೧೪೪

೧೦. ಹೊನ್ನಬಿತ್ತೇವು ಹೊಲಕೆಲ್ಲ, ಪುಟ ೩೮೩

೧೧. ಆರ್.ಸಿ. ಹಿರೇಮಠ, ಎಂ.ಎಸ್. ಸುಂಕಾಪುರ (ಸಂ), ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ ಭಾಗ-೨, ಪುಟ ೨೩

೧೨. ಬಸವರಾಜ ಚ. ಜವಳಿ, ದೇವೇಂದ್ರಕುಮಾರ ಸಿ. ಹಕಾರಿ (ಸಂ), ಬಸವರಾಜ ದೇವರ ರಗಳೆ, ೧೯೮೦, ಸಂ. ಪ್ರಸ್ತಾವನೆ ಪುಟ xii

೧೩. ಬಿ.ಎಸ್. ಸಣ್ಣಯ್ಯ, ಸಂ. ಸೊಬಗಿನ ಸೋನೆ ಸಂಗ್ರಹ, ೧೯೭೧, ಪ್ರಸ್ತಾವನೆ ಪುಟ xxvi

೧೪. ಟಿ.ಎಸ್. ಸತ್ಯನಾಥ್ (ಸಂ), ಕಪೋತ ಚರಿತೆ, ಕನ್ನಡ ಸಾಹಿತ್ಯ ಪರಿಷತ್ ೧೯೭೭, ಪುಟ ೨೩

೧೫. ಡಿ.ಎ. ಶಂಕರ್ (ಸಂ), ಶ್ರೀಶುಕಸಪ್ತತಿ ಶ್ರೀಚಿಕ್ಕುಪಾಧ್ಯಾಯ, ಮೈಸೂರು ವಿಶ್ವವಿದ್ಯಾಲಯ, ಪ್ರಸಾರಾಂಗ, ೨೦೧೧, ಪ್ರಸ್ತಾವನೆ ಪುಟ-X

೧೬. ಬಿ.ಎಸ್. ಸಣ್ಣಯ್ಯ (ಸಂ), ಸೊಬಗಿನ ಸೋನೆ, ಪ್ರಸ್ತಾವನೆ ಪುಟ-XLiii

೧೭. ವೀರಣ್ಣ ರಾಜೂರ, ಕನ್ನಡ ಸಾಂಗತ್ಯ ಸಾಹಿತ್ಯ, ಪುಟ ೨೦೨

೧೮. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂ.೪, ಭಾಗ-೧, ಪುಟ ೧೪೫

೧೯. ವೀರಣ್ಣ ರಾಜೂರ, ಕನ್ನಡ ಸಾಂಗತ್ಯ ಸಾಹಿತ್ಯ, ಪುಟ ೨೦೨

೨೦. ಬಿ.ಎಸ್. ಸಣ್ಣಯ್ಯ (ಸಂ), ಸೊಬಗಿನ ಸೋನೆ, ಪ್ರಸ್ತಾವನೆ, ಪುಟ-XL

ಅಧ್ಯಾಯ : ಆರು

# ಸೊಬಗಿನ ಸೋನೆ: ಭಾಷೆ, ಶೈಲಿ, ಛಂದಸ್ಸು, ಅಲಂಕಾರ

## ಅಧ್ಯಾಯ : ಆರು

# ಸೊಬಗಿನ ಸೋನೆ : ಭಾಷೆ, ಶೈಲಿ, ಛಂದಸ್ಸು, ಅಲಂಕಾರ

### ೬.೧. ಭಾಷೆ

ಕಾಲ, ದೇಶ ಸಂದರ್ಭಗಳಿಗೆ ತಕ್ಕಂತೆ ಭಾಷೆ ಪರಿವರ್ತನೆಗೊಳ್ಳುತ್ತಾ ರೂಪುಗೊಳ್ಳುತ್ತದೆ ಇದು ಸಹಜ ಕೂಡ ಹೌದು. ಯಾವುದೇ ಒಂದು ವಸ್ತು ವಿಷಯವನ್ನು ಯಾರಿಗೆ, ಯಾವಾಗ, ಏಕೆ, ಹೇಗೆ, ಹೇಳಬೇಕು ಎನ್ನುವಲ್ಲಿ ಭಾಷೆ ಮುಖ್ಯವಾಗುತ್ತದೆ. ವ್ಯಕ್ತಿ ತನ್ನ ಆಲೋಚನೆ, ಗುಣ ಸ್ವಭಾವ, ಭಾವನೆ, ಬೆಡಗು ಬಿನ್ನಾಣ ಇವುಗಳನ್ನು ಅಭಿವ್ಯಕ್ತಪಡಿಸಲು ಭಾಷೆ ಮಾಧ್ಯಮವಾಗಿ ಕೆಲಸ ನಿರ್ವಹಿಸುತ್ತದೆ. ಭಾಷೆಯ ಮೂಲಕವೇ ವ್ಯಕ್ತಿಯ ವ್ಯಕ್ತಿತ್ವವನ್ನು ತಿಳಿದುಕೊಳ್ಳಬೇಕಾಗುತ್ತದೆ. ಭಾಷೆಯ ಮೂಲಕ ಪರಿಣಾಮಕಾರಿಯಾಗಿ, ಅಭಿವ್ಯಕ್ತಪಡಿಸುವ ಕಾವ್ಯವು ಕವಿಯ ವ್ಯಕ್ತಿತ್ವದ ಸ್ವರೂಪವೆನ್ನಬಹುದು. ಈ ಹಿನ್ನೆಲೆಯಲ್ಲಿ ಸೊಬಗಿನ ಸೋನೆ ಕಾವ್ಯದ ಭಾಷೆ ದೇಪರಾಜನ ಪ್ರತಿಭೆಗೆ ಸಾಕ್ಷಿಯಾಗಿದೆ.

ಕವಿಯ ಪತ್ನಿ ಪ್ರಸ್ತುತ ಕಾವ್ಯದ ಭಾಷೆ ಕುರಿತು ವ್ಯಕ್ತಪಡಿಸಿದ ಮಾತುಗಳು ಕೆಳಗಿನಂತಿವೆ.

> "ಜಾಣರ ಮೆಚ್ಚು ರಸಿಕರ ರಸಾಯನ
> ವಾಣಿಯ ಸಿರಿ ಭಾವಕರಿಗೆ
> ಮಾಣಿಕಗನ್ನಡಿ ಕೇಳ್ವಕೋವಿದರಿಗೆ
> ಪ್ರಾಣ ದೇಪಭೂಪ ನಿನ್ನೊಳ್ನುಡಿ"(೧/೧೫)

ಎಂಬುದು ದೇಪರಾಜನ ಕಾವ್ಯದ ಭಾಷೆ ಜಾಣರಿಗೆ, ರಸಿಕರಿಗೆ, ಭಾವಕರಿಗೆ, ಪಂಡಿತರಿಗೆ ಒಪ್ಪುತ್ತದೆ ಎನ್ನುತ್ತಾಳೆ. "ನಿನ್ನ ಜಾಣ್ನುಡಿ ರನ್ನಗನ್ನಡಿಯಲ್ಲದೆ ನಾಡಾಡಿ ನುಡಿಯಲ್ಲ"(೨/೩) ಅಂದರೆ ಸಾಮಾನ್ಯ ಭಾಷೆಯಲ್ಲ ಕಾವ್ಯದ ಸೊಗಸಾದ ಭಾಷೆ ರನ್ನಗನ್ನಡಿಯಂತಿದೆ ಎಂದು ಹೇಳುತ್ತಾ ಮುಂದುವರೆದು

> "ತೆಗದ ಬಗೆಗೆ ಬಪ್ಪೊಲು ಚಿತ್ರ ಮೇಲೆ ಮೇ
> ಲೊಗುವೊಲು ಕೇಳ್ವಕೋವಿದರಿಗೆ
> ಸೊಗಸೋಜೆವೊಲು ಸಕ್ಕಜ ಕನ್ನಡವೊಪ್ಪೆ....... ಕಥೆವೇಳ"(೧/೧೮)

ಅಂದರೆ ಪತ್ನಿ ಓದುಗರ ಪರವಾಗಿ ವಿನಂತಿಸುತ್ತ ಸಂಸ್ಕೃತ ಬಲ್ಲ ವಿದ್ವಾಂಸರಿಗೆ ಕಥೆಯ ದೃಶ್ಯ ಹೃದಯ ಸ್ಪರ್ಶವಾಗುವಂತಹ ರೀತಿಯಲ್ಲಿರುವ ಕನ್ನಡವನ್ನು ಬಳಸಲು ಪತ್ನಿ ಕೇಳಿಕೊಂಡಿದ್ದಾಳೆ.

ಕವಿ "ಸಕ್ಕಜವಿನಿಸಜುವನ
ಬಳಕೆಯ ಬೆಳುಗನ್ನಡಿಗನ
ಹೊಲಬಲ್ಲ ಕೃತಿಯಿದು ಚದುರ ಕರ್ಣಾಟಕ
ಕಲೆಯಜೀವನ ಬಗ್ಗಿನ ಬೆಳೆ"(೧/೨೨)

ಈ ಕಾವ್ಯ ಸಂಸ್ಕೃತ ಬಲ್ಲ ವಿದ್ವಾಂಸರನ್ನು ಮಾತ್ರ ಗಮನಹರಿಸಿಲ್ಲ ಅದು ವಿಶಾಲ ಕರ್ನಾಟಕ ಜನತೆಯನ್ನು ಕುರಿತು ರಚಿಸಲ್ಪಟ್ಟಿದೆ ಎಂದು ಕಾವ್ಯ ಭಾಷೆಯನ್ನು ಅನುಲಕ್ಷಿಸಿ ಹೇಳಿದ್ದಾಗಿದೆ. ಹೀಗಾಗಿ ಪತ್ನಿಯು ಕಾವ್ಯದ ಭಾಷೆ ಬಗ್ಗೆ ಪ್ರಶ್ನಿಸುತ್ತ ಹೇಳಿದ ಮಾತುಗಳು ಗಮನಾರ್ಹವಾಗಿವೆ. ಏಕೆಂದರೆ ಪಂಡಿತರಿಗೆ ಸಂಸ್ಕೃತ ಬಲ್ಲವರಿಗೆ ಮಾತ್ರ ಸೀಮಿತವಾಗಿದ್ದ ಕಾವ್ಯವನ್ನು ಪ್ರಶ್ನಿಸುತ್ತ ಜನಮನವನ್ನು ತಲುಪುವ, ಸಂಭ್ರಮಿಸುವ ದೇಸೀಯ ಛಂದಸ್ಸು ಪ್ರಯೋಗಕ್ಕೆ ತಂದಿದ್ದಾನೆ. ಹಾಗಾಗಿ ಇಂತಹ ಕಾವ್ಯಗಳನ್ನು ಜನಸಾಮಾನ್ಯರು ಆಲಿಸುವ, ಹಾಡುವ, ಪ್ರಶ್ನಿಸುವ ಸಂಭ್ರಮಿಸಿ ಮೆಚ್ಚುಗೆ ಸೂಚಿಸುತ್ತಿರಬೇಕೆನಿಸುತ್ತದೆ. ಜನಪ್ರಿಯ ಕನ್ನಡ ಸಾಹಿತ್ಯ ಚರಿತ್ರೆ ಸಂಪಾದಕರು ಈ ಕಾವ್ಯದ ಭಾಷೆ ಕುರಿತು "ಭಾಷೆ ಪ್ರೌಢವಾದುದರಿಂದ ಹಾಡುಗಬ್ಬಕ್ಕೆ ಹೊಂದಿಕೊಳ್ಳುತ್ತಿಲ್ಲ. ಇದರ ಮೇಲೆ ಕವಿಗೆ ಹದಿನೆಂಟು ವರ್ಣನೆಗಳಲ್ಲಿ ಆದಷ್ಟನ್ನು ತರಬೇಕೆಂಬ ಆಸೆ ಬೇರೆ. ಇದರಿಂದ ಓಡಿ ಹೋಗಬೇಕೆಂಬುವನ ಕಾಲಿಗೆ ಬೀಸೇಕಲ್ಲು ಕಟ್ಟಿದಂತಾಗಿದೆ"[೧] ಎಂಬ ಅಭಿಪ್ರಾಯಪಡುತ್ತಾರೆ. ಆದರೆ ಕಾವ್ಯದಲ್ಲಿ ವೃತ್ತಗಳ ಭಾಷೆ ಬಿಟ್ಟರೆ ಸರಳವಾದ ಭಾಷೆಯಿದೆ. ಕಥೆಯನ್ನು ವರ್ಣಿಸುತ್ತಾ ಸಾಗುವುದರಿಂದ ಹಾಡುವುದಕ್ಕೂ ಅನುಕೂಲವಿದೆ ಎನಿಸುತ್ತದೆ.

ಬಿ.ಎಸ್. ಸಣ್ಣಯ್ಯ ಅವರು "ಈ ಕಾವ್ಯವು ಕೆಲವು ಕಥೆಗಳಿಂದ ಕೂಡಿದ್ದರೂ ಎಲ್ಲವೂ ಒಂದಕ್ಕೆ ಒಂದರಂತೆ ಬೆಸುಗೆಯಾಗಿ ಒಂದೇ ಕಥೆಯಾಗಿ ಹೆಣೆದುಕೊಂಡಿದೆ. ಕವಿಯ ರಚನೆಯಲ್ಲಿ ಕುಶಲತೆಯಿದೆ, ಬಿಗಿಯಿದೆ. ಪದ್ಯಗಳು ದೇಶ್ಯ ಶಬ್ದಗಳನ್ನೊಳಗೊಂಡು ಸರಳವಾಗಿ ನೇರವಾಗಿ ಒಡಮೂಡಿವೆ. ಹಾಗೆಂದ ಮಾತ್ರಕ್ಕೆ ಸಂಸ್ಕೃತ ಪದಗಳನ್ನು ಬಳಸಿ ಆತ ಕಾವ್ಯ ರಚನೆ ಮಾಡಿಲ್ಲವೆಂದು ಭಾವಿಸಲಾಗದು"[೨] ಎಂದು ಕಾವ್ಯ ಭಾಷೆ ಕುರಿತು ಹೇಳಿದ್ದಾರೆ. ಕಾವ್ಯ ಸರ್ವರನ್ನು ಮತ್ತು ಸರ್ವಕಾಲಿಕವಾಗಿ ಮನ್ನಣೆ ಪಡೆಯಬೇಕಾದರೆ ಭಾಷೆಯಲ್ಲೂ ವೈವಿಧ್ಯತೆ ಸಹಜವೆನಿಸಿದೆ.

ವೀರಣ್ಣ ರಾಜೂರ ಅವರು "ಈ ಕಾವ್ಯದ ಶೈಲಿ ಮೋಹಕವಾಗಿದೆ. ಆದರೆ ಸರಳವಾಗಿಲ್ಲ; ಬಂಧುರವಾಗಿದೆ. ಭಾಷೆಯಲ್ಲಿ ಹಳಗನ್ನಡದ ಪ್ರಭಾವ ಎದ್ದು ಕಾಣುತ್ತದೆ. ಕವಿ ಉಭಯ ಭಾಷಾ ಪಂಡಿತನಾಗಿದ್ದು ತನ್ನ ಕಾವ್ಯವನ್ನು ಆದಷ್ಟು ಪ್ರೌಢವಾಗಿಯೇ ಬರೆಯಬೇಕೆಂದು ಪ್ರಯತ್ನಿಸಿದಂತಿದೆ. ಪ್ರತಿ ಸಂಧಿಯ ಆದಿ ಅಂತ್ಯದಲ್ಲಿ ಬರುವ ವೃತ್ತಗಳಲ್ಲಿ ಚಂಪೂಕಾವ್ಯಗಳ ಛಾಯೆಯಿದೆ; ಸಾಂಗತ್ಯದ ನಡೆ ಸರಳವಾಗಿದೆ. ಅದರಲ್ಲಿಯೂ 'ಸಕ್ಕಜ-ಕನ್ನಡದ ಬೆರಕೆಯಿದೆ. ಭಾಷೆ ಶೃಂಗಾರ ವರ್ಣನೆಗಳಲ್ಲಿ ನಯವಾಗಿಯೂ, ಅದ್ಭುತ ವರ್ಣನೆಗಳಲ್ಲಿ ಗಡುಸಾಗಿಯೂ ಭಾವಕ್ಕೆ ತಕ್ಕಂತೆ ಬಳಕೆಯಾಗಿದೆ"[೩] ಎಂಬುದಾಗಿ ವಿವರಿಸಿದ್ದಾರೆ.

ಸೊಬಗಿನ ಸೋನೆ ಕಾವ್ಯದ ಪ್ರತಿಸಂಧಿಯ ಆದಿ ಅಂತ್ಯಗಳಲ್ಲಿ ಖ್ಯಾತ ಕರ್ನಾಟಕಗಳನ್ನು ಬಳಸಿ ದೈವಸ್ತುತಿ ಮಾಡಿದ್ದಾನೆ. ಈ ವೃತ್ತಗಳ ಭಾಷೆ ಹಳಗನ್ನಡದ್ದಾಗಿದ್ದು ಚಂಪೂಕಾವ್ಯಗಳಂತೆ ಸಂಸ್ಕೃತ ಭೂಯಿಷ್ಠವಾಗಿರುವುದು ಗಮನಕ್ಕೆ ಬರುತ್ತದೆ. ಉದಾಹರಣೆಯಾಗಿ ಈ ಕೆಳಗಿನ ಪದ್ಯವನ್ನು ಗಮನಿಸಬಹುದು.

"ಏಣನನೊಂದು ಹಸ್ತದೊಳು ಸಾರ್ಚಿ ತ್ರಿಶೂಲದೊಳೊಂದು ಕೋಣ್ಪನಂ
ಮಾಣದೆ ಪೀರ್ದುರಾಕ್ಷಸರ ಪುಂಜದ ಶೀರ್ಷದ ರುಂಡಮಾಲೆಯಂ
ಕಾಣಿಸಿಕೊಳ್ಳದಂತೆ ನಡುನೆತ್ತಿಯೊಳಂಬುವ ಸರ್ಪಹಾರಮಂ
ಜಾಣಿನೊಳೊಂದಿ ತ್ರೈಜಗವ ರಕ್ಷಿಪುದೈ ಜಯ ಹಂಪೆಯಾಳ್ದನೇ"(೩/೧)

ಅಲ್ಲದೆ ಸೋನೆ ಸಾಂಗತ್ಯ ಪದ್ಯಗಳು ಸರಳವಾದ, ನೇರವಾದ ಭಾಷೆಯನ್ನು ಒಳಗೊಂಡಿವೆ. ಅದು ಈ ಕೆಳಕಂಡ ಪದ್ಯದಲ್ಲಿ ಕಂಡುಬರುತ್ತದೆ.

"ನಾರಿ ಕೇಳ್ವಳು ಕಳಾವಿದೆ ಪೇಳುವ
ನಾ ರಸಿಕನು ದೇಪನೃಪನೆನೆ
ಆರಾಲಿಸರಾರೋದರು ಕಥೆಯದ
ನಾರು ಪೊಗಳದವರಿಳೆಯೊಳು"(೧/೨೦)

ರಸವತ್ತಾಗಿ ಕಾವ್ಯವನ್ನು ರಚಿಸಿ, ವಾಚಿಸಿದರೆ ಯಾರಾದರೂ ಆಲಿಸದೇ ಇರಲು ಸಾಧ್ಯವಿಲ್ಲ. ಇಂತಹ ಕಾವ್ಯ ಆಸ್ವಾದಿಸಿದವರು ಮೆಚ್ಚದೇ ಇರಲು ಸಾಧ್ಯವಿಲ್ಲ ಎಂಬ ಆತ್ಮವಿಶ್ವಾಸವನ್ನು ಕವಿ ಭಾಷೆ ಬಗೆಗೆ ಹೊಂದಿದ್ದಾನೆ. ಪತ್ನಿ ಸಹೃದಯಳಾಗಿ ಕಾವ್ಯಕ್ಕೆ ಸ್ಫೂರ್ತಿಯಾಗಿ ಇದ್ದಾಳೆ.

ದೇಸಿ ಬಳಕೆಗಾಗಿ ಕಾವ್ಯದಲ್ಲಿ ನಾಣ್ನುಡಿ, ಗಾದೆ ಅಥವಾ ಕವಿಸೂಕ್ತಿಗಳು ಕಥೆಯ ಸಂದರ್ಭಕ್ಕೆ ತಕ್ಕಂತೆ ಬಳಕೆಗೊಂಡಿರುವುದನ್ನು ಈ ಮುಂದೆ ಗಮನಿಸಬಹುದು.

**೬.೨. ನಾಣ್ನುಡಿ**

'ನಾಣ್ನುಡಿ' ಎಂದರೆ ನಾಡು ನುಡಿ ಎಂದರ್ಥ. ವ್ಯಕ್ತಿಯ ಅನುಭವದಿಂದ ಉತ್ಪತ್ತಿಯಾಗಿ ಸಾರ್ವಜನಿಕ ಮನ್ನಣೆ ಪಡೆದು ಪ್ರಸಿದ್ಧಿಯನ್ನು ಹೊಂದುವ ಭಾಷಾ ಸೂಕ್ತಿಗಳೇ ಗಾದೆಗಳಾಗಿ, ಇಲ್ಲವೆ ನಾಣ್ನುಡಿಗಳಾಗಿ, ಕವಿ ಸೂಕ್ತಿಗಳಾಗಿ ರೂಪ ಪಡೆಯುತ್ತವೆ. ಪ್ರತಿಯೊಬ್ಬ ಕವಿಯೂ ಭಾಷೆಯನ್ನು ಬಳಸುವಾಗ ವಿಶೇಷವಾದ ನಾಣ್ನುಡಿಗಳನ್ನು ಬಳಸಿ ಕಾವ್ಯ ರಚಿಸಿರುವುದನ್ನು ಕಾಣಬಹುದು.

ಕಸ್ಬ್ ಎಂಬ ಒಬ್ಬ ವಿದ್ವಾಂಸರು "ನಾಣ್ಣುಡಿಯೆಂದರೆ ಹಳೆಯ ಲೋಹಕ್ಕೆ ಹೊಸ ಮುದ್ರೆಯನ್ನೊತ್ತಿ ನೂತನ ನಾಣ್ಯವೊಂದನ್ನು ತಯಾರಿಸಿದಂತೆ"[೪] ಎಂದಿದ್ದಾರೆ. ನಾಣ್ಣುಡಿಯು "ಸಾಸ್ವಿಯಲ್ಲಿ ಸಮುದ್ರವನ್ನಡಗಿಸಿಟ್ಟಂತೆ" ಎಂಬ ವಾಕ್ಯದಂತೆ ವಿಶಾಲವಾದ ಅರ್ಥ ಕೊಡುತ್ತದೆ.

ಕಸಾಪ ಕನ್ನಡ ನಿಘಂಟಿನಲ್ಲಿ 'ನಾಣ್ನುಡಿ'ಗೆ "ನಾಟ್ನುಡಿ, ನಾಣ್ಣುಡಿ, ನಾನ್ನುಡಿ, ನಾಳ್ನುಡಿ ಎಂದು ನಾಮಪದವಾಗಿ ಬಳಸಿದ್ದಾರೆ. ನಾಡಿನಲ್ಲಿ ಬಹು ಪ್ರಚಲಿತವಾಗಿರುವ ಮಾತು;

ಜನಸಾಮಾನ್ಯರಲ್ಲಿ ಬಳಕೆಯಲ್ಲಿರುವ ದೃಷ್ಟಾಂತ ವಾಕ್ಯ; ಗಾದೆ, ಲೋಕೋಕ್ತಿ"[೫] ಎಂಬ ಅರ್ಥವನ್ನು ನೀಡಲಾಗಿದೆ.

ಸೊಬಗಿನ ಸೋನೆ ಕಾವ್ಯದಲ್ಲಿ ನಾಣ್ನುಡಿ, ನಾಣ್ನುಡಿ, ಜಾಣ್ನುಡಿ, ಒಳ್ನುಡಿ ಎಂಬ ಪದಗಳು ಬಳಕೆಗೊಂಡಿದ್ದು ಇವುಗಳು ಸೂಕ್ತಿ, ಗಾದೆ, ಸುಭಾಷಿತ, ಚತುರೋಕ್ತಿ, ಒಳ್ಳೆಯ ಮಾತು ಇತ್ಯಾದಿ ಅರ್ಥಗಳೊಂದಿಗೆ ಕಾವ್ಯದಲ್ಲಿ ಬಳಸಲಾಗಿದೆ.

"ತುಱುಚೆಗಂಡಂಜಿ ಸೋಂಕದೆ ತೊಲಗುವವೊಲು
ಹೆಱಸಾರುವರುಂಟೆ ಮರುಗಕ್ಕೆ
ಅಱುವ ಸುಜಾಣ ರಸಿಕರಂತಿರಲಿ ನಾ
ನೆಱಗುವೆ ಮುನ್ನ ಖೂಳರಿಗಂಜಿ"(೧/೧೧)

ತುರುಚೆ ಗಿಡ ತಗುಲಿತೆಂದು ದೂರವಿರುವಂತೆ ಮೂರ್ಖ ಕೆಟ್ಟವರನ್ನು ಕಂಡರೆ ಮೊದಲೆ ಶರಣಾಗುವೆ. ಮರುಗದ ಹೂ ಸುವಾಸನೆಗೆ ದೂರ ಸರಿಯುವರುಂಟೇ? ತಿಳಿದ ಸುಜಾಣ ರಸಿಕರರಿಗಿಂತ ಮೂರ್ಖರಿಂದ ಎಚ್ಚರಿಕೆವಹಿಸಬೇಕೆನ್ನುತ್ತಾನೆ.

"ಯುವತಿಯ ಕಳೆಯನಱಿದು ಜಾಣ ವಿಟನನು
ಭವಿಪವೊಲಱಿವನೆ ನರಪಶು
ಕವಿತೆಯ ರಸವನಂತಱಿವ ರಸಿಕನಲ್ಲ
ದವಗುಣಿಯಱಿದು ಸುಖಿಸುವನೆ"(೧/೧೨)

ಕಾವ್ಯ ಮತ್ತು ಕನ್ಯೆ ಇವೆರಡರ ಸುಖವನ್ನು ಪಡೆಯುವವನೇ ರಸಿಕನೆನಿಸುತ್ತಾನೆ.

"ನವಿಲಾಡದ ನಂದನವನ ಕಳೆಯುಳ್ಳ
ಯುವತಿಯರಾಡದ ನೆಲೆವಾಡ
ಪವನನಾಡದ ತನು ಸುತರಾಡದಂಗಳ.......ಕಂಗೆಸವುದೆ ಪೇಳ"(೨/೨೭)

"ಈಯದಕ್ಕೈ ನನೆಯೇಱದ ಎಳೆವಳ್ಳಿ
ಕಾಯದ ಮರ ಬೆಳೆಯದ ನೆಲ
ಪ್ರಾಯದೊಳೆಳ ಬರೊಗೆಯದ ಪಾಳ್ವೊಡೆ....ಇಳೆಯೊಳಗೆಸವುದೆ"(೨/೨೮)

"ಕಂದಗೆ ಮೊಲೆಯೀವ ಸಿರಿಮುನ್ನ ನೋನದವಳ್ಗುಂಟೆ"(೨/೨೯)

"ಇಹ ಪರದಲ್ಲಿಯ ಸಿರಿ ವರಸುತರಿಂದೆ ಗೆಲ್ಲವಹುದು
ಸಂಸಾರದ ಸುಖಸಾರವಿಲ್ಲ ಬಾಲಕರಿಲ್ಲದವರಿಗೆ"(೨/೩೧)

"ಸಸಿಯಿಲ್ಲದಾಗಸ ಮೀಂಗಳಿಂ ಮೆಱವುದೆ
ನಸುಗಾಳಿ ವಸಂತ ಪೂವಿಲ್ಲದೆ ಎಸವುದೆ"(೩/೧೫)

ಈ ಉಕ್ತಿಗಳು ಕುಟುಂಬಕ್ಕೆ ಗಂಡು ಸಂತಾನದ ಪ್ರಾಮುಖ್ಯತೆಯನ್ನು ಎತ್ತಿ ತೋರಿಸುತ್ತವೆ.

"ಹೊಲಬುದಪ್ಪಿದ ಕಾವ ಪಡೆಯಂತೆ"(೩/೬೩)

"ಒಳ್ಳೆಮುನಿದು ನೇಸಱನೇಗೈವುದೊ"(೫/೧೪)

ಸೊಳ್ಳೆ ಮುನಿಸಿಕೊಂಡರೆ ಸೂರ್ಯನೇನಾಗುತ್ತಾನೆ ಎಂದರ್ಥವಿದ್ದರೆ, ಮತ್ತೊಂದು ಅರ್ಥ ವಿಷವಿಲ್ಲದ ನೀರು ಹಾವು ಅಥವಾ ಕಹಿ ಪಡುವಲಕಾಯಿ ಸೂರ್ಯನಂತವನನ್ನು ಬದಲಾವಣೆಗೆ ಕಾರಣವಾಗಲಾರದು.

"ಮಾರಿಯ ಕೆಣಕಿ ಬಾಳುವ ನಾರೆ"(೫/೧೩)
"ಪೆರ್ಬೆಕ್ಕಾಗಸದಲ್ಲಿ ವಿಹರಿಸೆ ಸಿಂಗಕೆಣೆಯೆ"(೫/೧೫)
"ಭೂಚರರಿಗೆ ಖೇಚರರಲ್ಲಿ ಸೆಣಸು ಸಲ್ಲದು
ಬಿಲ್ಲುವಿಡಿದು ನೀನುಡಿದಡೆ ಬಲ್ಲಿದನಹೆಯಾ"(೫/೪)

ಈ ಗಾದೆ ಬಿಲ್ಲು ಹಿಡಿದ ಮಾತ್ರಕ್ಕೆ ಶೂರನಾಗಲಾರ ಹಾಗೆಯೇ ಸ್ಪರ್ಧೆಯಲ್ಲಿ ಸರಿಸಮವಾದ ವ್ಯಕ್ತಿಗಳಿರಬೇಕು. ತಾರತಮ್ಯ ಇರಬಾರದು ಎಂಬರ್ಥವಿದೆ.

"ನನೆಗಣೆಗಳಿಗೆ ಜಿತೇಂದ್ರಿಯನೆನಿಸುವ ಮುನಿಯಳುಕುವನೆ"(೫/೧೭)

ಈ ಗಾದೆ ಋಷಿ ಮುನಿಗಳು ಮನ್ಮಥನ ಬಾಣಕ್ಕೆ ಸೋಲುವರೇ ಎಂಬರ್ಥವಿದೆ.

"ಪಗೆವನಾಯುಧವೆ ಪಗೆಗೆ ಪಗೆ (ಕೊಡಲಿಕಾವು ಕುಲಕ್ಕೆ ಮೃತ್ಯು)"(೫/೩೪)
"ಕಳೆಯಿಲ್ಲದರು ಕೇಳಿದರೆ ಕಬ್ಬ ಕಳೆ ಪೆರ್ಚ್ಚಿ ಬೆಳವುದು
ಕಳೆಯುಳ್ಳವರಾಲಿಸೆ ಕಬ್ಬವದು ಕಳೆದಳವು"(೫/೪)

ಈ ಗಾದೆಯಲ್ಲಿ 'ಕಳೆ' ಎಂಬುದು ಶ್ಲೇಷ ಅರ್ಥದಲ್ಲಿ ಬಳಸಿದೆ.

"ಅಜಿದು ಅಜಿದುಮನೆಗೆ ಕೂರ್ತುದಾವಾನಳನ ಕೊಂಡೊಯ್ವರೆ"(೬/೧೮)

ಈ ಗಾದೆ ಕಂಡು ತಿಳಿದು ಹಗಲು ಕಂಡ ಬಾವಿಗೆ ರಾತ್ರಿ ಬೀಳುವರೆ ಎಂಬರ್ಥವಿದೆ.

"ತಲೆಯಿಲ್ಲದೊಡಲಿದು ಪ್ರಭುವಿಲ್ಲದೊಳಲೆಂದು"(೬/೨೧)
"ಮಹಾಪುರುಷರ ಪೆರ್ಮೆಸವಡಿ ಸಾಸಿರ ಕರಿಘಟೆ"(೬/೫೧)

ಈ ಗಾದೆ ಮಹಾತ್ಮರ ಮಹಿಮೆಯನ್ನು ಸಾವಿರ ಆನೆ ಬಲದಂತೆ ಶ್ರೇಷ್ಠವಾದದ್ದು.

"ಅಳಿವುದೊಡಲು ಜಸವಳಿಜಸವೆರಡೆ ಉಳಿವವು"(೬/೬೨)

ಈ ಗಾದೆ ಕೀರ್ತಿ ಅಪಕೀರ್ತಿಗಳೆರಡೆ ಶಾಶ್ವತವಾಗಿ ಉಳಿಯುತ್ತವೆ ಆದರೆ ಶರೀರಕ್ಕೆ ಕಿಂಚಿತ್ತೂ ಬೆಲೆಯಿಲ್ಲ ಎನ್ನುತ್ತದೆ.

"ಹರಸಿ ಹಡದೆ ನಿನ್ನ ರಕ್ಕಸಗೀಯಲೇಂ ಫಲ"(೬/೬೩)

ಈ ಗಾದೆ ದೈವ ಬಲದಿಂದ ಪಡೆದ ಮಗನನ್ನು ರಾಕ್ಷಸನಿಗೆ ಕೊಟ್ಟರೇನು ಫಲ ಎಂಬರ್ಥವಿದೆ.

"ಸಿರಿ ಬರೆ ಪೊಱಗಿಕ್ಕುವರೆ"(೭/೧೯)

ಈ ಗಾದೆ ಜಗದಲ್ಲಿ ಸಂಪತ್ತನ್ನು ಕಡೆಗಣಿಸುವರಿದ್ದಾರೆಯೇ ಎಂಬರ್ಥವಿದೆ.

ಕುಡಿತೆ ನೀರ್ಕಂದ ಕಚ್ಚುವರೆ ಮುನ್ನೀರೇಕೆ
ಸೊಡರ್ಕಳ ತವಿಸೆ ಪೆರ್ಗಿಚ್ಚೇಕೆ೭/೧೮)

ಈ ಗಾದೆ ಬಾಯಾರಿಕೆಗೆ ಸಮುದ್ರದ ನೀರೇಕೆ, ದೀಪ ಬೆಳಗಿಸಲು ಜ್ವಾಲೇತಕೆ ಎಂದು ಪ್ರಶ್ನಿಸುತ್ತದೆ.

ಬಡಿದು ಭಕ್ತಿಯ ಮಾಡಿಸಬೇಡ (೭/೨೩)

ಈ ಗಾದೆ ವಚನವನ್ನು ಅನುಸರಿಸಿ ಭಕ್ತಿಗೆ ಒತ್ತಾಯವೇಕೆ ಅದು ಮನಃಪೂರ್ವಕವಾಗಿ ಮಾಡುವಂತದ್ದು ಎಂಬರ್ಥವಿದೆ.

ಮಲಗುವ ಕುವರಿ ಮಗ್ಗುಲಿಗೊಂದು
ಹಳಗಪ್ಪಡವಿಲ್ಲದೊಱಗುವಳೆ (೭/೩೨)

ಈ ಗಾದೆ ಕುವರಿಯ ಜೀವನಕ್ಕೆ ಸಂಪತ್ತಿನ ಆಧಾರವನ್ನು ಬಯಸುತ್ತದೆ.

ನೆಲೆಗೆಟ್ಟರ ನೆಲ ಹೊಱದೆಂಬ ನಾಣ್ನುಡಿ (೭/೩೫)

ಈ ಗಾದೆ ದಿಕ್ಕುದಾತಿಲ್ಲದವನಿಗೆ ನೆಲವೇ ಭಾರವೆನಿಸುತ್ತದೆ.

ಆರು ಮೀಱುವರು ವಿಧಿಯ ಬರಹವ (೭/೩೬)

ಈ ಗಾದೆ ಮಾನವರು ವಿಧಿಯ ಲಿಖಿತವನ್ನು ಮೀರಲು ಸಾಧ್ಯವಿಲ್ಲ ಅದನ್ನು ಪಾಲಿಸದೇ ಬೇರೆ ವಿಧಿಯಿಲ್ಲ ಎನ್ನುತ್ತದೆ.

ಕುಲಗೆಟ್ಟು ಹೆಂಗೊಟ್ಟು ಹೊಲಬಾಳ ಬಾಳ್ವುದು
ತಲೆಯಲಿ ಬರೆದಕ್ಕರ (೭/೩೯)

ಈ ಗಾದೆ ಕೆಟ್ಟು ಬಾಳುವುದು ವಿಧಿಯ ನಿಯಮ ಅದು ಮಾನವನ ಕೈಯಲ್ಲಿ ಇಲ್ಲ ಎಂಬುದನ್ನು ಸಾರುತ್ತದೆ.

ನೆಲನಾಗಸ ಮುನ್ನೀರೊಳು ಪೊಕ್ಕರೆ
ತಲೆಯ ಬರಹ ತಪ್ಪದು (೭/೪೯)

ಈ ಗಾದೆ ಎಲ್ಲಿಗೆ ಹೋದರೂ ಹಣೆಬರಹ ತಪ್ಪಲ್ಲ ಎಂಬ ಅರ್ಥವಿದೆ. ಇದು ಜನಸಾಮಾನ್ಯರಲ್ಲಿ ಹಣೆಬರಹಕ್ಕೆ ಹೊಣೆಯಾರು ಎಂದು ಬಳಕೆಯಿದೆ.

ಮಹಾತ್ಮರ ಮಹಿಮೆಯಚ್ಚರಿ (೭/೫೦)
ಕದಡಿದುದೆರ್ದೆ ಮೈಯೊಳು ಝುಮ್ಮನೆ ಬೆಮ
ರೊದವಿತು ಕಣ್ಣೀರು ತುಳುಕಿತು ಇದುನಾಣ್ನುಡಿ ತಪ್ಪದು (೮/೨೮)

ಪಡೆದೊಡಲಿನ ಮಱುಕವೆ ಮಱುಕಗಳಿಗೆ ಕಡೆ (೮/೩೦)

ಈ ಗಾದೆ ತಾಯಿಯಂತ ಮರುಕ ಜಗತ್ತಿನಲ್ಲಿ ಇನ್ನೊಂದಿಲ್ಲ ಎಂಬರ್ಥವಿದೆ.

ಕೆಡುವುದೊಡಲು ಜಸವಳಿಜಸ ಬೆಂಬಿಡದೊಡವಕ್ಕು (೯/೫೩)

ಪತಿಯಾಣ್ಮ ಪಿತೃವಚನವ ಮೀಱೆ ಜೇನುಂಡು ನೀರ್ಗುಡಿದವೊಲ್ (೧೦/೫೩)

ಬಿಲ್ಲಾಂತು ಬೇಡ ಮುಂದಿರೆ ಪಿಂತೆ ಪುಲಿಯಿರ್ದಪುಲ್ಲೆಯೊಲಾಂ (೧೨/೩೭)

"ಕೇಡಡಸುವ ಕಾಲಕೊದಗಿರ್ದ ಪರುಷ ಕಬ್ಬೊನ್ನಕ್ಕು
ಅಮೃತರಸ ದೊರಕಿರೆ ವಿಷವಪ್ಪುದೀ"(೧೨/೪೦)

ಈ ಗಾದೆ ಆಪತ್ಕಾಲದಲ್ಲಿ ಅಮೃತವೂ ವಿಷ, ಚಿನ್ನವೂ ಕಬ್ಬಿಣವಾಗುತ್ತದೆ ಎಂಬರ್ಥವಿದೆ.

ಕರಿಗೊಂಡ ಕವಳದ ಬೆಳಗಾಯೊಳೊಳಗೆಟ್ಟು (೧೨/೬೩)

ಮುಂಕೂಪರು ಕೆಡೆಕೆಳೆ ಪಗೆಯಕ್ಕೆಂಬ ನಾಣ್ನುಡಿ (೧೨/೭೩)

ಮೋಹದೊಳಾ ತೊಱೆವೆಣ್ಣನಗೆಂದೆಂಬ ಗಾಹೆ (೧೨/೧೦೧)

ಬಿಸಿಲ್ಗೋಂಕಿಗುಸುರ್ವಿಡುವನು ಕಾಳ್ಗಿಚ್ಚುರ್ವಿಮುಸುಕಲುಳಿವೆನೆ (೧೨/೧೦೩)

ಈ ಗಾದೆ ಬಿಸಿಲಿಗೆ ಬಾಯಿ ಬಿಡುವವನು ಕಾಳ್ಗಿಚ್ಚಿನಂತಹ ಧಗೆಯಲ್ಲಿ ಹೇಗೆ ಬದುಕುತ್ತಾನೆ ಎಂಬರ್ಥವಿದೆ.

ಮಱೆಯಿಡಬೇಕು ಮಾಡಿದ ಕೊಂಕ (೧೨/೧೦೫)

ಈ ಗಾದೆ ದೋಷವನ್ನು ಕಡೆಗಣಿಸಿ ಬಾಳು ಎಂದು ಹೇಳುತ್ತದೆ.

ಪುರಿದಂತಾಯ್ತು ಹೂಸಿದ ಚಂದನವಾಗ (೧೨/೧೦೬)

"ಪಿರಿದಪ್ಪಕೋಪಾಗ್ನಿಯಿಂ ಪಲ್ಬೆಲದೊಳಹಿ ತುದಿವಾಲದೊಳ್ ಚೇಳ್ದೋಱೆಹವೆಂದು
ಜಱಿದುತಾಳ್ದರು ಪಿಸುಣರು ತುದಿ ನಾಲಗೆಯೊಳ್‌ಪಚ್ಚಪಸಿನಂಜ" (೧೨/೧೧೩)

ಈ ಗಾದೆ ಚಾಡಿಕೋರರಲ್ಲಿ ಎಲ್ಲ ಮಾತುಗಳು ವಿಷವಾಗುತ್ತವೆ ಎಂಬರ್ಥವಿದೆ.

ಮುಗುದರು ತಮ್ಮ ಕೊಱತೆಯ ಪೊಱಗಿಡುವವರುಂಟೆ (೧೩/೨೦)

ಈ ಗಾದೆ ಮುಗ್ಧರು ಯಾವತ್ತೂ ತಮ್ಮ ಸಮಸ್ಯೆಯನ್ನು ಹೊರಹಾಕಲಾರರು ಎಂಬರ್ಥವಿದೆ.

"ಕೊಂಡೆಯರ್ ಕೊಲಲು ಕಾವವರಿಲ್ಲವೀಭೂಮಂಡಲದೊಳು
ಕೂರ್ಪರನಗಲಿಸಿ ಪುಳಿವಿಂಡುವರಮರ್ದಿನೊಳ" (೧೩/೨೫)

ಈ ಗಾದೆ ಜಗತ್ತಿನಲ್ಲಿ ಕೊಲ್ಲುವವರಿದ್ದರೆ ಕಾಯುವವರು ಇರುತ್ತಾರೆ ಎಂಬರ್ಥವಿದೆ.

ಮಾನಿಗೆ ಮಾನಭಂಗವೆಭಂಗ (೧೩/೩೨)

ಮಾನವುಳ್ಳವಳಿಗೆ ಮಾನಭಂಗ ಮಹಾಭಂಗವೆಂದು ತೋರುತ್ತದೆ.

ಜಗದೊಳು ಸುತನೇಹವೆ ನೇಹಗಳಿಗೆ ಮಿಗಿಲೆಂಬರು (೧೫/೧೩)

ಈ ಗಾದೆ ಪುತ್ರ ಸ್ನೇಹವೇ ಸ್ನೇಹ ಅಂದರೆ ಗಂಡು ಮಗುವೇ ಜೀವನಕ್ಕೆ ಆಧಾರ ಎಂಬರ್ಥವಿದೆ.

ಕಾಣಿಗೆ ಕಡವರವನು ಪೊಡೆಗಾಜಿಗೆ ಮಾಣಿಕವನು ಮಾಱದಿರು (೧೫/೭೮)

ಮೊಗಕೊಪ್ಪುವ ಕೈಪಿಡಿಗೆಟ್ಟ ಪುರಿಯೋಡಿಗೆ ಪಲ್ಗಿರಿವಭಂಡುಗರುಂಟೆ (೧೫/೧೧೭)

ನಂಬಿದರ್ಗೆರಡನೆಣಿಸಿದರ್ಗೆ ಬಯಲ್ಗೇಡು (೧೫/೧೨೩)

ಈ ಗಾದೆ ನಂಬಿದವರಿಗೆ ದ್ರೋಹ ಬಗೆದರೆ ಬಯಲೇ ಕೇಡಾಗುತ್ತದೆ ಅಂದರೆ ಕೇಡು ತನ್ನ ಹಿಂದೆ ಹಿಂಬಾಲಿಸುತ್ತದೆ ಎಂಬರ್ಥವಿದೆ.

"ಕಾವ್ಯಕೆ ಕವಿ ಸೋಲ್ವೊಲು ಬೀದಿಗಸೋ೯ಲ್ವರೆ

ಅರಸಂಚೆ ಸಾಧಿಸಿ ಪಾಲ್ಗೊಳ್ವುದಲ್ಲದೆ ಕಾಕನೊಲಿದರಿಪುದೆ ಬಲಿಪಿಂಡವ" (೧೬/೩)

ಈ ಗಾದೆ ಹಂಸವು ಸಾಧಿಸುವುದೇ ಹೊರೆತು ಕಾಗೆಯೊಂದಿಗೆ ಬಲಿಪಿಂಡಕ್ಕೆ ಆಸೆ ಪಡುವುದಿಲ್ಲ ಎಂಬರ್ಥವಿದೆ.

ಕೈಪಿಡಿ ಬೆಳಪಳಿಯೆ ಮಾರ್ಪೊಳಪು ಪಜ್ಜಳಿಪುದೆ (೧೬/೨೪)

ಈ ಗಾದೆ ಒಡೆದ ಕನ್ನಡಿಯಲ್ಲಿ ಬಿಂಬ ಪ್ರಕಾಶಿಸಲಾರದು ಹಾಗೆಯೇ ಮೂರ್ಖರಿಂದ ನ್ಯಾಯವನ್ನು ನಿರೀಕ್ಷಿಸಬಾರದು ಎಂಬರ್ಥವಿದೆ.

"ಪೆಚ್ಚಿರ್ದ ಪೆರ್ಗ್ಗಳ (ತಮವನೂ) ಸ್ಫುರಿಸುವ ದೀಪಾಂಕುರ ಕಳಿವೊಲು

ಪೆರ್ಗೊರಡಿಂದಲಳಿವುದೆ ಪೇಳಾ"(೧೬/೨೮)

ಈ ಗಾದೆ ಕತ್ತಲೆಯನ್ನು ದೀಪದಿಂದ ಕಳೆಯಬಹುದೇ ಹೊರೆತು ಕೊರಡಿನಿಂದ ಸಾಧ್ಯವಿಲ್ಲ ಹಾಗೆಯೇ ಜ್ಞಾನದಿಂದ ಅಜ್ಞಾನವನ್ನು ಕಳೆಯಬಹುದು ಎಂಬರ್ಥವಿದೆ.

ಅರಳೆಯ ರಾಸಿಯೊಳ್ಕಿಚುಗಿಡಿ ಬಿರ್ದಂತೆ (ಸಿಡಿವಂತೆ) (೧೬/೬೪)

"ಕುಲವುಳ್ಳವನಾದಡೆ ಕಾರ್ಯಬಾತೆಗೆ ಹೊಲೆಯನ ಕೆಳೆಗೊಳ್ಳಬೇಹುದು

ಸಲೆಕಾರ್ಯಾಂತಕೆ ವಸುದೇವ ಕತ್ತೆ ಕಾಲ್ಗಳದನೆಂದೆಂಬ ನಾಣ್ನುಡಿಯುಂಟು" (೧೮/೬೨)

ಈ ಗಾದೆ ಸಮಯ ಬಂದಾಗ ಕತ್ತೆಯ ಕಾಲನ್ನು ಹಿಡಿದು ಕಾರ್ಯ ಸಾಧಿಸಿಕೊಳ್ಳಬೇಕು ಎಂಬರ್ಥವಿದೆ.

"ಪಗೆಯೊಳು ಕೆಳೆ ಬಾಳ್ದವರುಂಟೆ

ಚೇಳಿನ ಪಗದೊಳು ಬಿದ್ದು ಸುಖಿಪರುಂಟೆ

ಪೊಗೆಗೊಂಡ ಮಾಳಿಗೆಯೊಳು ಮಲಗಿದರುಂಟೆ

ಸೊಗಸುಂಟೆ ಜಾರೆಯಾಳ್ದನಬಾಳು"(೧೮/೮೬)

"ಪಜ್ಜೆಯಿರಲು ಪರಿಕಿಸಲೇಕೆಯಂದೆಂಬ

ಸಜ್ಜನಿಕೆಯ ಸಾರ್ಚುವುದೊಂದು ಉಜ್ಜುಗ"(೨೦/೫೧)

ಕ್ಷಣದೊಳು ಸುಖ ಕ್ಷಣದೊಳು ದುಃಖ ಮನುಜರ್ಗೆ(೨೦/೬೬)

ತೊಡರ್ಚಿದ ತೊಡಕ ಬಿಡಿಸಪೋಗಿ ಕಪ್ಪಿನೊಳ್ಕೆಡದೊಲಾಯ್ತು (೨೦/೬೯)

"ಪಾವಗಿದೊಡೆ ಪಾಡಿದಡಿಳಿವುದೆ ವಿಷ
ವೇದವೋದಿದಡಾ ವಿರಹದ ವಿಷವಿಳಿವುದೆ" (೨೪/೨೧)
ಅವಲೋಕಿಸಿದಕ್ಷಿಗಂಜನವೇಕೆ (೨೪/೫೬)

ಅಗಲ್ವರಿಗಿನಿಯರ ದೆಸೆಗಥೆ ಕಿವಿಗಿಂಪು ಸೊಗಸು (೨೪/೨೪)
ಕರಬಡವಾದ ಲೋಭಿಗೆ ಭೋಂಕನ್ನೈವಣ ದೊರಕೊಂಡೊಲಾಯಿತು (೨೪/೪೮)
"ಅವನಕ್ಕರ ವೊಪ್ಪುವ ನಿಟಿಲಕೆ ತಿಲಕವಿದೇಕೆ
ಕೂರ್ತೋಱಪನೆಯ್ತರೆ ಅವಕಿಸಿದಕ್ಷಿಗಂಜನವೇಕೆ"(೨೪/೫೬)

ಈ ಎಲ್ಲ ಸೂಕ್ತಿಗಳನ್ನು ಕವಿ ಕಾವ್ಯದಲ್ಲಿ ಬಳಸಿದ್ದಾನೆ. ಪ್ರಮುಖವಾಗಿ ಸ್ತ್ರೀ ಮಕ್ಕಳು, ವೇಶ್ಯೆ, ಚಾಡಿಕೋರರು, ಇನ್ನು ಮುಂತಾದವರ ಕುರಿತ ಗಾದೆಗಳು ಪ್ರಮುಖವಾಗಿ ಅಂದಿನ ಜನಸಾಮಾನ್ಯರ ಬದುಕಿನಲ್ಲಿ, ವ್ಯವಹಾರದ ಸಂದರ್ಭದಲ್ಲಿ ಬಳಕೆಯಾಗಿವೆ. ನಿದರ್ಶನಕ್ಕೆ ಸಿರಿಬರೆಪೊರೆಗಿಕ್ಕುವರೆ, ನೆಲಗೆಟ್ಟರೆ ನೆಲಹೊರದು, ಹೆಜ್ಜೆಗುರುತು ಇರುವಾಗ ಸಂಶಯವೇಕೆ? ಎಂಬ ಉಕ್ತಿಗಳು ಜನರ ದಿನನಿತ್ಯದ ಮಾತುಗಳಾಗಿವೆ ಎನಿಸುತ್ತದೆ. ಈ ಸೂಕ್ತಿಗಳು ಕಾವ್ಯದ ಅರ್ಥ ಸ್ಪಷ್ಟತೆಗಾಗಿ ಬಳಸಿದ್ದು ಇವುಗಳು ಕವಿಯ ಲೋಕಾನುಭವಕ್ಕೆ ಸಾಕ್ಷಿಗಳಾಗಿ ಕವಿಯ ಭಾಷಾ ಪ್ರೌಢಿಮೆಗೆ ಸಮರ್ಥನೀಯವಾಗಿ ಬಳಕೆಗೊಂಡಿವೆ.

### ೬.೩: ಶೈಲಿ

ಒಬ್ಬ ವ್ಯಕ್ತಿಯನ್ನು ಮತ್ತೊಬ್ಬ ವ್ಯಕ್ತಿಯಿಂದ ಭಿನ್ನವೆಂದು ಗುರುತಿಸುವಾಗ ಅವನ ಭಾಷೆಯ ಜೊತೆಗೆ ಶೈಲಿಯನ್ನು ಗಮನದಲ್ಲಿಟ್ಟುಕೊಂಡು ನಿರ್ಧರಿಸುತ್ತೇವೆ. ಶೈಲಿ ಪ್ರತಿಯೊಬ್ಬನ ಗುಣ ಸ್ವಭಾವವಾಗಿದೆ. ಶೈಲಿ ಜೀವನದ ಎಲ್ಲ ರಂಗಗಳಲ್ಲೂ ವ್ಯಾಪಿಸಿದೆ. ಕವಿ ಪ್ರಸಿದ್ಧಿಗೆ ಬರುವುದು ಶೈಲಿಯಿಂದ. ಪ್ರಪಂಚದಲ್ಲಿ ಎಷ್ಟು ಕವಿಗಳಿರುವರೋ ಅಷ್ಟೊಂದು ಶೈಲಿಗಳಿರುವುದನ್ನು ಕಾಣಬಹುದು. ಕನ್ನಡ ಸಾಹಿತ್ಯದಲ್ಲಿ ಪ್ರತಿಯೊಬ್ಬ ಕವಿಯೂ ವಿಶಿಷ್ಟವಾದ ಶೈಲಿಯಿಂದ ಪ್ರಸಿದ್ಧಿಗೆ ಬಂದಿರುವುದನ್ನು ಗಮನಿಸಬಹುದು.

"ಇಂಗ್ಲೀಷಿನ ಸ್ಟೈಲ್ ಎಂಬುದಕ್ಕೆ ಸಂವಾದಿಯಾಗಿ ಬಳಸುತ್ತಿರುವ ಪದವೇ 'ಶೈಲಿ', ಆದರೆ ಭಾರತೀಯ ಕಾವ್ಯಮೀಮಾಂಸೆಯಲ್ಲಿ 'ಶೈಲಿ' ಎಂಬ ಪಾರಿಭಾಷಿಕ ಪದದ ಬಳಕೆಯಿಲ್ಲ. styleನ ಪರಿಕಲ್ಪನೆಗೆ ಹತ್ತಿರವಿರುವ ಪದಗಳೆಂದರೆ 'ರೀತಿ' ಮತ್ತು ಮಾರ್ಗ"[೬] ಎಂದು ಕಾವ್ಯಾರ್ಥ ಪದಕೋಶದಲ್ಲಿ ಶೈಲಿ ಕುರಿತ ವಿವರಣೆ ನೀಡಿದೆ. ಶೈಲಿಯ ಸ್ವರೂಪ ಕುರಿತು ಎಸ್.ವಿ. ರಂಗಣ್ಣ ಅವರು "ಕೃತಿಯ ಉದ್ದೇಶ ಕಥನ, ವರ್ಣನೆ, ವಿವರಣ, ಉಪದೇಶಗಳಲ್ಲಿ ಒಂದು ತಾನೆ; ಅದಕ್ಕೆ ಬೇಕಾದ ವಿಷಯ ಸಾಮಗ್ರಿಯನ್ನು ಕೊಡಿಸಲಿ; ಅದಕ್ಕೆ ಅನುರೂಪವಾದ ಶಬ್ದಗಳನ್ನು ಹುಡುಕಿ ತರಲಿ; ಅವನ್ನು ಯುಕ್ತ ಕ್ರಮದಲ್ಲಿ ಪೋಣಿಸಲಿ; ವಾಕ್ಯವೆಲ್ಲದರಲ್ಲಿಯೂ ಇಡೀ ವಿರಚನೆಯಲ್ಲಿಯೂ ಸ್ಪಷ್ಟತೆ ಶಕ್ತಿ ಸೌಂದರ್ಯಗಳನ್ನು ಪ್ರತಿಪಾದಿಸಲು ಪ್ರಯತ್ನಿಸಲಿ; ಹೀಗೆ ಸಾಗಿದಲ್ಲಿ ಶೈಲಿ ತಾನಾಗಿ ಉದ್ಭವಿಸುತ್ತದೆ"[೭] ಎಂಬ ಅಭಿಪ್ರಾಯಪಟ್ಟಿದ್ದಾರೆ.

ಕನ್ನಡ ಸಾಹಿತ್ಯದಲ್ಲಿ ಪಂಪ, ರನ್ನ, ರಾಘವಾಂಕ, ಕುಮಾರವ್ಯಾಸ, ಲಕ್ಷ್ಮೀಶ, ಹರಿಹರ ಮುಂತಾದ ಕವಿಗಳು ತಮ್ಮ ತಮ್ಮ ಶೈಲಿಯಿಂದ ಪ್ರಸಿದ್ಧಿಗೆ ಬಂದಿರುವಂತೆ ದೇಪರಾಜನು ಸೊಬಗಿನ ಸೋನೆ ಕಾವ್ಯದ ಮೂಲಕ ವಿಶಿಷ್ಟವಾದ ಶೈಲಿಯನ್ನು ಅಳವಡಿಸಿರುವುದನ್ನು ಕಾಣಬಹುದು. ಬಿ.ಎಸ್. ಸಣ್ಣಯ್ಯ ಅವರು ಈ ಕೃತಿಯ ಶೈಲಿ ಕುರಿತು "ಕವಿಯ ಪರಿಣಾಮಕಾರಿಯಾದ ಶೈಲಿ ಮನಮುಟ್ಟುವಂತಿದೆ. ಈ ಕಾವ್ಯವು ಕೆಲವು ಕಥೆಗಳಿಂದ ಕೂಡಿದ್ದರೂ ಎಲ್ಲವೂ ಒಂದಕ್ಕೆ ಒಂದರಂತೆ ಬೆಸುಗೆಯಾಗಿ ಒಂದೇ ಕಥೆಯಾಗಿ ಹೆಣೆದುಕೊಂಡಿದೆ. ಕವಿಯ ರಚನೆಯಲ್ಲಿ ಕುಶಲತೆಯಿದೆ, ಬಿಗಿಯಿದೆ. ಪದ್ಯಗಳು ದೇಶ್ಯಶಬ್ದಗಳನ್ನೊಳಗೊಂಡು ಸರಳವಾಗಿ ನೇರವಾಗಿ ಒಡಮೂಡಿವೆ"[೮] ಎಂದು ಹೇಳಿದ್ದಾರೆ. ಹಂಪನಾ ಅವರು "ದೇಪರಾಜ ಉತ್ತಮ ವರ್ಗದ ಕವಿ. ಅವನಿಗೆ ವರ್ಣನೆಯಲ್ಲಿ ಆಸಕ್ತಿ; ಸಮೆದ ಹೇಳಿಕೆಗಳು ಹೇರಳವಾಗಿದ್ದೂ, ಅಲ್ಲಲ್ಲಿ ಕಡಿಮೆ ಸೊಗಸು ಕಂಡುಬಂದರೂ ಕೆಲವೊಮ್ಮೆ ಅವನ ಪವಾಡಗಳೂ ಇಲ್ಲಿ ಲೀಲಾಜಾಲವಾಗಿ ಜರುಗುತ್ತವೆ"[೯] ಎಂದಿದ್ದಾರೆ. ವೀರಣ್ಣ ರಾಜೂರ ಅವರು ವರ್ಣನೆ, ಛಂದಸ್ಸು, ಶೈಲಿ ಕಥಾನಿರೂಪಣೆ, ಪಾತ್ರಚಿತ್ರಣ, ರಸಪ್ರತಿಪಾದನೆ ಎಲ್ಲ ದೃಷ್ಟಿಯಿಂದಲೂ ಇದೊಂದು ವಿಶಿಷ್ಟ ಉತ್ತಮ ಕೃತಿಯೆಂದು"[೧೦] ಅಭಿಪ್ರಾಯಪಟ್ಟಿದ್ದಾರೆ.

ಕೆ.ನಾಗೇಂದ್ರಪ್ಪ ಅವರು ದೇಪರಾಜನ ಶೈಲಿ ಕುರಿತು "ಕವಿಗೆ ಅಷ್ಟಾದಶವರ್ಣನೆಗಳಲ್ಲಿ ವ್ಯಾಮೋಹವಿದೆ. ಶಬ್ದ ಚಮತ್ಕಾರ, ಪಾಂಡಿತ್ಯಾದಿಗಳನ್ನು ಪ್ರದರ್ಶಿಸುವ ಹುಚ್ಚು ಇದೆ. ಹಳಗನ್ನಡ ಭಾಷೆ ಪ್ರೌಢವಾಗಿರುವುದರಿಂದ ಹಾಡುಗಬ್ಬವಾದ ಸಾಂಗತ್ಯಕ್ಕೆ ಅದು ಹೊಂದಿಕೊಂಡಿಲ್ಲ, ಲಯ ಅಲ್ಲಲ್ಲಿ ಕುಂಠಿತವಾಗಿದೆ"[೧೧] ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಆದರೆ ಕವಿಯೇ ಕಾವ್ಯದ ರೀತಿಯನ್ನು ಕುರಿತು ಈ ಕೆಳಕಂಡಂತೆ ಹೇಳಿದ್ದಾನೆ.

"ಪದ ಪದ್ಧತಿ ಹೋಲುವ ಬಿನ್ನಣ ರೀತಿ

ಚದುರತೆ ಬೆಡಗು ಬಿನ್ನಣ ರೀತಿ"(೧/೧೪) ಎಂಬುದಾಗಿ ಹೇಳಿಕಂಡಿದ್ದಾನೆ. ಅಂದರೆ ಇಲ್ಲಿ 'ಪದ ಪದ್ಧತಿ' ಎಂಬ ಪದವು ಪದ್ಯನಿಯಮ, ಪದ ಪ್ರಯೋಗ ಕ್ರಮ, ಪದ ಹೇಳುವ ಸಂಪ್ರದಾಯ, ವಿಧಾನ ಎಂಬ ಅರ್ಥದಲ್ಲಿ ಬಳಕೆ ಆಗಿದೆ. 'ಬಿನ್ನಣ ರೀತಿ' ಎಂದರೆ ಪಾಂಡಿತ್ಯ, ವಿದ್ವತ್ ಕ್ರಮ ಎಂದರ್ಥವಿದೆ. ಸೊಗಸಾದ, ರಮ್ಯವಾದ ರೀತಿಯಲ್ಲಿ ಕಥೆಯನ್ನು ವರ್ಣಿಸುವ ಕ್ರಮವನ್ನು ಕುರಿತು ಹೇಳಿದ್ದಾಗಿದೆ. ಇಲ್ಲಿ ಕಾವ್ಯ ವಾಚಿಸುವ ಮತ್ತು ಹಾಡುವ ಕ್ರಮವನ್ನು ಗಮಕಿಗಳು ತಿಳಿದಿರಬೇಕು.

"ನಾರಿ ಕೇಳ್ವಳು ಕಳಾವಿದೆ ಪೇಳುವ
ನಾ ರಸಿಕನು ದೇಪನೃಪ ನೆನೆ
ಆರಾಲಿಸರಾರೋದರು ಕಥೆಯದ
ನಾರು ಪೊಗಳದವರಿಳೆಯೊಳು"(೧/೨೦)ನ ಎಂಬುದು

ಸೊಬಗಿನ ಸೋನೆ ಕಾವ್ಯದ ಶೈಲಿಯು ಬಹುಮುಖ್ಯವಾಗಿ ಸತಿ-ಪತಿ ಸಂಭಾಷಣಾ ಕ್ರಮದಲ್ಲಿ ವರ್ಣಿತವಾಗಿದೆ. ಕವಿ ರಸಿಕನಂತೆ ವರ್ಣನಾ ಪ್ರಧಾನವಾಗಿ ಕತೆಯನ್ನು ಹೇಳುತ್ತಿದ್ದರೆ, ಪತ್ನಿ ಸಹೃದಯಳಾಗಿ ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತ ಆಲಿಸುತ್ತಾಳೆ. ಇಂತಹ ಸಂಭಾಷಣಾ

ಪ್ರಧಾನವಾದ ಕಾವ್ಯವನ್ನು ಯಾರು ತಾನೆ ಮೆಚ್ಚದೇ ಇರುತ್ತಾರೆ ಎಂದು ಕವಿ ಕಾವ್ಯ ಕುರಿತು ಅಭಿಪ್ರಾಯಪಟ್ಟಿದ್ದಾನೆ. ಕಾವ್ಯದ ಪ್ರತಿಸಂಧಿಯ ಆರಂಭದಲ್ಲಿ, ಕಥೆ, ಉಪಕಥೆಗಳ ಆರಂಭದಲ್ಲಿ ವಿಶೇಷ ಘಟನೆಗಳ ಸಂದರ್ಭದಲ್ಲಿ ಪತ್ನಿಯನ್ನು ಇನಿಯಳೆ, ಪ್ರಿಯಳೆ, ಅಸಿಯಳೆ, ಕೂರ್ಪಳೆ, ಕೋವಿದೆ, ಕಳಾವಿದೆ, ಕಳಾಧರೆ, ಅಂಗನೆ, ಅಮರ್ದುಟಿಯಳೆ ಮುಂತಾದ ವಿಶೇಷಣಗಳಿಂದ ಸಂಬೋಧಿಸುತ್ತ ಕವಿ ಕತೆ ವಿಸ್ತರಿಸುತ್ತಾನೆ. ಪತ್ನಿಯೂ ಸಹಿತ ಕವಿಯನ್ನು "ನಲ್ಲನೆ ನಯನಾನಂದನೆ ಬಲ್ಲರಬಲ್ಲಹನೆ"(೨/೩) ಅಂದರೆ ಇನಿಯನೆ, ರಮಣನೆ, ಮನಸಿಜರೂಪನೆ, ನಗೆಮೊಗದವನೆ, ದೇಪನೃಪನೆ, ಮುಂತಾದ ಕಾಂತಾ ಸಂಹಿತದಂತೆ ಸಂಬೋಧಿಸುವ ಧಾಟಿ ಸ್ವಾರಸ್ಯವಾಗಿ ಮೂಡಿಬಂದಿದೆ. ಅಲ್ಲದೇ ಸತಿ–ಪತಿ ಸಂಭಾಷಣೆ ಕಾವ್ಯದಲ್ಲಿ ವ್ಯಕ್ತಗೊಂಡ ಪರಿಯೂ ವಿಶೇಷವಾಗಿರುವುದನ್ನು ಗುರುತಿಸಿದೆ.

ಸತಿ: "ದೇಪನೃಪ ಮುನ್ನರಿಯದ ಮಂಗಳವಪ್ಪೊಂದು ಕಥವೇಳ (೧/೧೭)

ಪತಿ: "ಎಲೆ ಪ್ರಿಯೆ ಕೇಳು ತೊಳದ ಮುತ್ತು ಕರತಳಾಮಳಕವೀಕಥೆ ಸೊಬಗಿನ ಸೋನೆ" (೧/೨೧) ಎಂದಿದ್ದಾನೆ.

ಸತಿ: ನಲ್ಲನೆ ನಯನಾನಂದನೆ ಬಲ್ಲರ ಬಲ್ಲಹನೆ....ಸೊಲ್ಲಿಸು ನಿನ್ನ ಜಾಣ್ನುಡಿ ರನ್ನಗನ್ನಡಿಯಲ್ಲದೆ ನಾಡಾಡಿ ನುಡಿಯಲ್ಲ (೨/೩) ಎಂದಿದ್ದಾಳೆ.

ಪತಿ: ಮೇಲಣ ಕಥೆಯನು ನಲ್ಲನೆ ದೇಪ ಭೂ
ಪಾಲ ಹೇಳೆಂದೆನ್ನ ಬೆಸಗೊಂಡೆ
ಕೇಳನ್ನೆರ್ದೆ ತಿಳಿಗೊಳನಂಚೆ ಕಣ್ದುಂಬಿ
ಬಾಳುವ ಪೂವಲ್ಲಿ ಮಯ್ಯಳೆ (೨/೪)

ಹೀಗೆ ಕಾವ್ಯದುದ್ದಕ್ಕೂ ಸತಿಪತಿಯನ್ನು, ಪತಿಸತಿಯನ್ನು ಸಂಬೋಧಿಸುತ್ತಾ ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತ ಸಾಗುವ ಪರಿ ಓದುಗರಲ್ಲಿ ಕುತೂಹಲವನ್ನು ಮೂಡಿಸುತ್ತದೆ. ಹಾಗಾಗಿ ಇಲ್ಲಿ ಜನಪದ ಕಥೆಗಳ ಶೈಲಿಯನ್ನು ಅನುಸರಿಸಿರುವುದು ಸ್ಪಷ್ಟವಾಗುತ್ತದೆ.

ಕಂಜರೆ, ವಸಂತೆ, ಸುರಭಿಶೇಖರ, ನಾಗರಪಕ್ಷಿ, ಈ ಪಾತ್ರಗಳು ತಮ್ಮ ವೃತ್ತಾಂತವನ್ನು ವಿಕ್ರಮ ಅಥವಾ ಜಸಗಂಪನಿಗೆ ವಿಸ್ತರಿಸುತ್ತಾ ಪರಿಹಾರವನ್ನು ಕಂಡುಕೊಂಡು ಮುಕ್ತಿಯನ್ನು ಹೊಂದುತ್ತವೆ. ಈ ಎಲ್ಲ ಕತೆಗಳನ್ನು ಕವಿ ಪತ್ನಿಗೆ ಹೇಳುವಾಗ ನೀತಿಯನ್ನು ಧರ್ಮವನ್ನು ಹೇಳುತ್ತ ಸುರಭಾವತಿ–ಜಯಶೇಖರ, ರಾಜಸೌಂದರ–ರಾಣಿ, ಕಂಜರೆ–ಮಾಳವ, ರಾಜಕುಹಳ–ನಳಿನಿ ರಾಣಿ, ವಸಂತೆ–ಮಧುರ, ಶಿವ–ಪಾರ್ವತಿ, ನಾಗರಿಕಪಕ್ಷಿ ಪತಿ–ಪತ್ನಿ, ಬೇಡ–ಬರಗೆ, ಪೀತಾನನೆ–ಮಕರಶೇಖರ, ಪತ್ರಿಣಿ–ವಿಕ್ರಮ ಈ ಎಲ್ಲಾ ಪಾತ್ರಗಳನ್ನು ಕಾವ್ಯದ ಹಿನ್ನೆಲೆಯಲ್ಲಿ ಅವಲೋಕಿಸಿದಾಗ ಸತಿ–ಪತಿ ಸಾಮರಸ್ಯ, ಪ್ರೀತಿ–ಪ್ರೇಮವನ್ನು ಕವಿ ವರ್ಣಿಸಿದ್ದಾನೆ. ಹಂಪನಾ ಅವರು "ಕವಿ ದಂಪತಿಗಳು ಪ್ರತ್ಯಕ್ಷವಾಗಿ ಪಾಲ್ಗೊಂಡು ಓದುಗರ ಪರವಾಗಿ ಮಾತನಾಡುತ್ತಾ ಓದುಗರೋಲೆಯಾಗಿ ನುಡಿದಿರುವ ಮೊದಲ ಹಿರಿಮೆ ಈ ಕವಿಗೆ ಸಲ್ಲಬೇಕು"[೧] ಎಂದು ದೇಪರಾಜನ ಕಾವ್ಯ ನಿರೂಪಣಾ ಶೈಲಿಯನ್ನು ಕುರಿತು ಹೇಳಿದ್ದಾರೆ.

**ವರ್ಣನೆಗಳು**

ಸೊಬಗಿನಸೋನೆ ವರ್ಣನಾ ಪ್ರಧಾನವಾದ ಕಥನ ಕಾವ್ಯ. ಇಂದ್ರಿಯ ಗೋಚರವಾದ ಸೌಂದರ್ಯವು ಮಹೋಜ್ವಲವಾಗಿ ವರ್ಣಿಸಲ್ಪಟ್ಟಿರುವುದು ಈ ಕಾವ್ಯದ ಪ್ರತ್ಯೇಕ ಗುಣವೆಂದೇ ಹೇಳಬಹುದು. ಸ್ತ್ರೀಯರ ಸೊಬಗು ಸೌಂದರ್ಯದ ವರ್ಣನೆಗಳಿಂದ ಕಾವ್ಯವನ್ನು ಹೃದಯ ಸಂವೇದ್ಯವಾಗುವಂತೆ ಕವಿ ರಚಿಸಿದ್ದಾನೆ. ಅದು ಸುರಭಾವತಿ, ಕಂಜರೆ, ವಸಂತೆ, ನಾಗರಿಕ ಪಕ್ಷಿ ಪತ್ನಿ, ಬೇಡತಿ, ಪತ್ರಿಣಿ, ಲಲಿತೆ, ಅರಮನೆ ಸ್ತ್ರೀಯರು, ದಾಸಿಯರು, ಮುಂತಾದ ಸ್ತ್ರೀ ಪಾತ್ರಗಳ ವರ್ಣನೆಯಲ್ಲಿ ಕಾಣಬಹುದಾಗಿದೆ. ಪ್ರಕೃತಿ ವರ್ಣನೆಗಳಲ್ಲಿ ಕವಿ ಕಥಾವಸ್ತುವನ್ನೇ ಮೊಟುಕುಗೊಳಿಸಿ ವರ್ಣನೆಗೆ ಪ್ರಾಧಾನ್ಯತೆ ನೀಡಿದ್ದಾನೆ ಎನ್ನಬಹುದು. ಹಾಗೆಯೇ ಕವಿ ಮತ್ತು ಕಾವ್ಯ ಹೇಗಿರಬೇಕು ಎಂದು ದೇಪರಾಜ ಹೀಗೆ ಹೇಳಿದ್ದಾನೆ.

> ಕೇಳಿದ ಸಭೆ ತಲೆದೂಗಿಯಜಕೆವ
> ಟ್ಪಾಲಿಸದಂತೆ ಮೈಪುಳಕವೆ
> ತಾಳದೆ ಸಂತಸಗಂಬನಿಯೊಗದಂತೆ
> ಪೇಳುವವನು ಕಬ್ಬಿಗನಲ್ತು (೧/೧೬)

ಅರಮನೆ, ಸಭೆ ಸಮಾರಂಭಗಳಲ್ಲಿ ಕಾವ್ಯ ಹಾಡುವ ಪದ್ಧತಿ ಪ್ರಚಲಿತವಾಗಿದ್ದು ಅಲ್ಲಿ ಕಾವ್ಯ ಜನ ಮೆಚ್ಚುಗೆ ಪಡೆಯದಿದ್ದರೆ ಅದು ಕಾವ್ಯವಾಗಲಾರದು ಎನ್ನುತ್ತಾನೆ. ಹಾಗಾಗಿ ಇದೊಂದು ಹಾಡುಗಬ್ಬವೇ ಸರಿ ಎಂದು ಕವಿಯ ನಿಲುವು.

ರಾಕ್ಷಸಿಯ ವರ್ಣನೆ, ಮಹಾಕಾಳಿದೇವಿಯ ಚಿತ್ರಣ, ರೋಷಭಾಸ್ಕರ ಮುನಿಯ ಶಾಪ, ಬೇಟೆ ವರ್ಣನೆ, ಶಿವಸಾಗರೇಶ್ವರನ ವರ್ಣನೆಗಳು ಕವಿ ಪ್ರತಿಭೆಗೆ ಸಾಕ್ಷಿಗಳಾಗಿವೆ.

ಬಿ.ಎಸ್. ಸಣ್ಣಯ್ಯ ಅವರು "ಇಲ್ಲಿ ಶೃಂಗಾರ ವರ್ಣನೆಗೆ ಪ್ರಾಶಸ್ತ್ಯ ಸಂದಿದೆ. ವರ್ಣನೆಗಳು ಅಧಿಕವಾಗಿದ್ದು, ಕೆಲವೆಡೆ ಅತಿಯೆನಿಸಿದರೂ, ಕೆಲವು ವರ್ಣನೆಗಳು ರಸದಾಣಗಳಾಗಿದ್ದು, ಕವಿಯ ಪ್ರತಿಭಾಶಕ್ತಿಯ ದ್ಯೋತಕವಾಗಿಯೂ ಕಂಗೊಳಿಸುತ್ತವೆ"[೧೩] ಎಂದು ಕಾವ್ಯದ ವರ್ಣನೆ ಕುರಿತು ಹೇಳಿದ್ದಾರೆ. ಎಂ.ವಿ. ಸೀತಾರಾಮಯ್ಯ ಅವರು ವರ್ಣಕ ಎಂದರೆ ಹಾಡುಗಬ್ಬ ಎಂಬುದನ್ನು ಕುರಿತು ಹೇಳುತ್ತ "ಮಹಾಕಾವ್ಯ ಲಕ್ಷಣಗಳೆಲ್ಲವನ್ನು ಬಿಟ್ಟುಕೊಟ್ಟು ಮಹಾಕಾವ್ಯದ ಮಟ್ಟಕ್ಕೆ ಏರಬಲ್ಲ ಪ್ರಾಶಸ್ತ್ಯವನ್ನು ಹಾಡುಗಬ್ಬಕ್ಕೆ ದೊರಕಿಸಿಕೊಟ್ಟು, ಹಾಡುಗಬ್ಬದ ಹೊಲವನ್ನು ಹುಲುಸುಗೊಳಿಸಿದ 'ಸೊಬಗಿನ ಸೋನೆ'ಯ ದೇಪರಾಜ ಮತ್ತು ಇತರ ಸಾಂಗತ್ಯ ಕವಿಗಳಿಗೂ ಸಲ್ಲುತ್ತದೆ"[೧೪] ಎಂದಿದ್ದಾರೆ. ಕೆ.ನಾಗೇಂದ್ರಪ್ಪ ಅವರು "ದೇಪರಾಜನಿಗೆ ಉತ್ತಮ ವರ್ಣನಾ ಶಕ್ತಿಯಿದೆ, ಹಾಗಾಗಿ ಕವಿಗೆ ವರ್ಣನೆಯ ಗೀಳು ಹೆಚ್ಚು. ಆ ಹುಚ್ಚಿರುವುದರಿಂದ ಅನೇಕ ವೇಳೆ ಕಥೆ ರಭಸವಾಗಿ ಓಡಬೇಕಾಗಿದ್ದಾಗಲೂ ನಿಧಾನವಾಗಿ ವರ್ಣನೆ ಮಾಡಲು ತೊಡಗಿ ದೋಷಕ್ಕೆ ಪಕ್ಕಾಗಿದ್ದಾನೆ. ಇಷ್ಟೆಲ್ಲಾ ಇದ್ದರೂ ಕಾವ್ಯ ಸುಂದರವಾಗಿದೆ"[೧೫] ಎಂಬ ಅಭಿಪ್ರಾಯ ಪಟ್ಟಿದ್ದಾರೆ.

ಕವಿಯ ಪತ್ನಿಯು ಸೊಬಗಿನ ಸೋನೆಯ ವರ್ಣನೆಗೆ ಹೀಗೆ ಪ್ರತಿಕ್ರಿಯಿಸಿದ್ದಾಳೆ.

“ಆಹಾ ನುಡಿಯಡಗದು ಪದ ಪದಕೊಮ್ಮೆ
ಓಹೋಯೆಂಬ ಸೊಲ್ಲುಡುಗದು
ಏಂ ಹರುಷವೊ ದೇಪಭೂಪ ನಿನ್ನೊಳುನುಡಿ
ಮೋಹನ ತಲೆದೂಕದ ಸುಗ್ಗಿ” (೫/೩) ಇಲ್ಲಿ ಪತ್ನಿ ಮತ್ತು ಸಹೃದಯದವರಿಂದ ಪ್ರಶಂಸೆ ವ್ಯಕ್ತವಾಗಿದೆ.

**೬.೪. ಸೊಬಗಿನ ಸೋನೆ ಶಬ್ದದ ವಿಶ್ಲೇಷಣೆ**

ಪ್ರಸ್ತುತ ಕಾವ್ಯಕ್ಕೆ ಕವಿ ಇಟ್ಟ ಹೆಸರು ಸೊಬಗಿನ ಸೋನೆ (೧/೨೧, ೨೪, ೮/೪) ಎಂದು ಕಾವ್ಯದ ಮೂಲಕ ಗ್ರಹಿಸಬಹುದು ಆರಂಭದ ಪದ ಸೊಬಗು ಎಂಬುದನ್ನು ಕುರಿತು ರೆವರೆಂಡ್ ಜೆ.ಎಫ್. ಕಿಟಲ್ ತಮ್ಮ ಕನ್ನಡ ಇಂಗ್ಲೀಷ್ ನಿಘಂಟಿನಲ್ಲಿ ‘ಸೊಬಗು’ ಎಂಬ ಪದವನ್ನು “Beauty, Charm, loveliness”[೧೬] ಎಂದು ಅರ್ಥೈಸಲು ಪ್ರಯತ್ನಿಸಿದ್ದಾರೆ. ಅಂದರೆ ಸುಂದರತೆ, ಅಚ್ಚುಕಟ್ಟು, ಚೆಲುವಿಕೆ ಎಂದು ಅರ್ಥ. ಕನ್ನಡ ಸಾಹಿತ್ಯ ಪರಿಷತ್‌ನ ನಿಘಂಟಿನಲ್ಲಿ “ಸೊಬಗು ನಾಮಪದವಾಗಿ ಅರ್ಥೈಸಿದೆ. ಅಂದ, ಚೆಲುವು, ಅತಿಶಯ, ಹೆಚ್ಚುಗಾರಿಕೆ”[೧೭] ಎಂದು ಅರ್ಥ ನೀಡಲಾಗಿದೆ. ಇದಕ್ಕೆ ಪರ್ಯಾಯ ಪದ “ಸುಬಗು”[೧೮] ಇದೇ ನಿಘಂಟಿನಲ್ಲಿ ‘ಸಂಪತ್ತು ಐಶ್ವರ್ಯ’ ಎಂದು ಅರ್ಥೈಸಲಾಗಿದೆ. ದ್ರಾವಿಡ ಜ್ಞಾತಿ ಪದಕೋಶದಲ್ಲಿ “ತುಳುವಿನಲ್ಲಿ ಸೊಬಗ್, ತೆಲುಗಿನಲ್ಲಿ ಸೊಬಗು”[೧೯] ಎಂಬ ಪದ ಬಳಕೆ ಇದ್ದು ಇವಕ್ಕೆಲ್ಲ ಸೊಬಗು, ಐಶ್ವರ್ಯ, ಸಂಪತ್ತು ಎಂದು ಮುಂತಾಗಿ ಅರ್ಥ ನೀಡಲಾಗಿದೆ.

‘ಸೋನೆ’ ಎನ್ನುವುದನ್ನು ಕಿಟೆಲ್ ಅವರು “A thin, light, But long continued rain, a incessant drizzle, an incessant rain”[೨೦] ಎಂಬ ವಿವರಣೆ ನೀಡಿದ್ದಾರೆ. ಅಂದರೆ ಕನ್ನಡದಲ್ಲಿ ಸೋನೆ ಎಂಬ ಪದಕ್ಕೆ ತೆಳುವಾದ, ಹಗುರವಾದ, ನಿರಂತರವಾಗಿ ಸುರಿಯುವ ಜಡಿಮಳೆ, ಎಡೆಬಿಡದೆ ಸುರಿವ ಹನಿಮಳೆ, ಅವಿಚ್ಛಿನ್ನ ಜಿನುಗುಮಳೆ ಬರು ಎಂಬ ಅರ್ಥವನ್ನು ನೀಡಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್‌ನ ಕನ್ನಡ ನಿಘಂಟು ‘ಸೋನೆ’ ಎಂಬ ಪದಕ್ಕೆ “ಮಳೆ, ವೃಷ್ಠಿ, ಎಡಬಿಡದೆ ಸುರಿಯುವ ಸಣ್ಣಹನಿಗಳ ಮಳೆ, ಜಿನುಗು ಮಳೆ, ಜಡಿಮಳೆ ಎಂಬ ಅರ್ಥಗಳ ಜೊತೆಗೆ ಹೂ ಹಣ್ಣು ಮುಂತಾದ ತೊಟ್ಟಿನಿಂದ ಸುರಿಯುವ ರಸ”[೨೧] ಎಂಬ ಮತ್ತೊಂದು ರೀತಿಯಲ್ಲಿ ಅರ್ಥೈಸಿದೆ. ಇದೇ ನಿಘಂಟಿನಲ್ಲಿ ಮತ್ತೊಂದು ಕಡೆಗೆ ಸೋಣೆ, ಸೋನೆ ಎಂಬ ಪದ ಸಾಮ್ಯದ ಹಿನ್ನೆಲೆಯಲ್ಲಿ “ಶ್ರಾವಣ ಮಾಸದಲ್ಲಿ ಗದ್ಯಯಂಚಿನಲ್ಲಿ ಬೆಳೆಯುವ ಗಿಡ ಮತ್ತು ಅದರ ಹೂ”[೨೨] ಎಂದು ಅರ್ಥೈಸಿದೆ. ಸೋನೆ ಎಂಬ ಪದಕ್ಕೆ ಜಿನುಗು ಮಳೆ ಎಂಬ ಅರ್ಥವಿದ್ದು ಅದಕ್ಕೆ ದ್ರಾವಿಡ ಜ್ಞಾತಿ ಪದಕೋಶದಲ್ಲಿ ವಿವಿಧ ಅರ್ಥಗಳನ್ನು ನೀಡಲಾಗಿದೆ. ಕನ್ನಡದಲ್ಲಿ ಸೋನೆ ಎಂದರೆ “ಮಳೆ, ವೃಷ್ಠಿ, ಎಡೆಬಿಡದೆ ಸುರಿಯುವ ಸಣ್ಣ ಹನಿಗಳ ಮಳೆ, ಜಿನುಗು ಮಳೆ, ಜಡಿಮಳೆ ಎಂಬಿತ್ಯಾದಿ ಅರ್ಥ ನೀಡಿದೆ. ತಮಿಳು ಭಾಷೆಯಲ್ಲಿ ‘ಚೋನ್ಯೆ’ ಎಂದು ಬಳಕೆಯಲ್ಲಿದೆ. ‘ಚೋನ್ಯೆ’ ಎಂದರೆ ಮಳೆ, ವೃಷ್ಠಿ, ಎಡಬಿಡದೆ ಸುರಿಯುವ ಸಣ್ಣಹಸಿಗಳ ಮಳೆ, ಜಿನುಗುಮಳೆ, ಜಡಿಮಳೆ ಎಂದು ಕನ್ನಡದಲ್ಲಿರುವ ಅರ್ಥಗಳನ್ನೇ ಹೊಂದಿದೆ. ಆದರೆ ಕನ್ನಡದಲ್ಲಿ ಇಲ್ಲದೇ ಇರುವ ಜಲಭರಿತವಾದ ಕಪ್ಪಾದ ಮೋಡಗಳು ಎಂಬ ಅರ್ಥವನ್ನು

ತಮಿಳು ಭಾಷೆಯಲ್ಲಿ ಈ ಪದಕ್ಕೆ ಅರ್ಥವನ್ನು ನೀಡಿರುವುದು ವಿಶೇಷವಾಗಿದೆ. ತೆಲುಗು ಭಾಷೆಯಲ್ಲಿ ಸೋನೆ ಎನ್ನುವ ಪದ 'ಸೋನಾ' ಎಂಬ ಪದವಾಗಿ ಬಳಕೆ ಆಗುತ್ತದೆ. ತೆಲುಗಿನಲ್ಲಿ ಇದರ ಅರ್ಥ ನಿರಂತರವಾಗಿ ಸುರಿಯುವ ಸಣ್ಣ ಹನಿಗಳ ಮಳೆ, ಜಿನುಗು ಮಳೆ"[೨೩] ಎಂದು ಕನ್ನಡ ಮತ್ತು ತಮಿಳು ಭಾಷೆಯಲ್ಲಿರುವ ಅರ್ಥಗಳನ್ನೇ ತೆಲುಗು ಭಾಷೆ ಹೊಂದಿದೆ. "ಸಾಂಗತ್ಯಕ್ಕೆ ಮೊದಲು 'ಸೋನೆ' ಎಂದು ಹೆಸರಿರಬಹುದು?ಎಂದು ದೇ. ಜವರೇಗೌಡ ಅಭಿಪ್ರಾಯಪಟ್ಟಿದ್ದಾರೆ.'[೨೪]

ಈ ಮೇಲಿನ ಜ್ಞಾತಿ ಪದಗಳ ಅರ್ಥ ಗಮನಿಸಿದಾಗ ಪ್ರಸ್ತುತ ಸೋನೆ ಎಂಬ ಪದಕ್ಕೆ ಕಾವ್ಯದ ಪರಿಭಾಷೆಯಲ್ಲಿ ಇದಕ್ಕೆ ಅರ್ಥವನ್ನು ನೀಡಲಾಗಿಲ್ಲ. ಕಾವ್ಯದ ಪರಿಭಾಷೆಯಲ್ಲಿ ಸೋನೆ ಎಂದರೆ ಕಾವ್ಯದ ಲಯ, ವಿಶಿಷ್ಟಕ್ರಮ, ಕಾವ್ಯಶೈಲಿ, ವರ್ಣನೆ, ಹಾಡುಗಬ್ಬ, ದೇಸಿಮಟ್ಟು, ಸಾಂಗತ್ಯದ ಛಂದಸ್ಸಿನ ಮಟ್ಟು ಹೀಗೆ ಹತ್ತು ಹಲವು ರೀತಿಯಲ್ಲಿ ಅರ್ಥಗಳನ್ನು ಕಂಡುಕೊಳ್ಳಲು ಸಾಧ್ಯವಿದೆ. ಒಟ್ಟಾರೆಯಾಗಿ ಸೊಬಗಿನ ಸೋನೆ ಎನ್ನುವ ಪದವನ್ನು ಕವಿ "ತೊಳದ ಮುತ್ತು"(೧/೨೧) ಎಂದು ಉಲ್ಲೇಖಿಸಿದ್ದಾನೆ. ಈ ಪದವನ್ನು ಶಬ್ದಶಃ ಅರ್ಥೈಸುವುದಾದರೆ ಸೊಗಸಿನ ವರ್ಣನೆ, ಸೌಂದರ್ಯದ ವರ್ಣನೆ, ಸೊಗಸಾದ ಮಳೆ, ಸಮೃದ್ಧಮಳೆ, ಚೆಲುವಿನ ವರ್ಣನೆ, ಚೆಲುವಿನ ಸಂಪತ್ತು ಇನ್ನು ಮುಂತಾಗಿ ಅರ್ಥೈಸಬಹುದು. ಇದರ ಅಂತರಾರ್ಥವನ್ನು ಗಮನಿಸಿದರೆ ಸೊಬಗನ್ನು ಹೇಳುವ, ಕೇಳುವ ಗೇಯತೆ ಅಥವಾ ಲಯಗಾರಿಕೆ ಎಂದು ಅರ್ಥಹೊರಡುತ್ತದೆ. ವಸ್ತುವಿನ ಆಯ್ಕೆ ಮತ್ತು ಅದನ್ನು ಹೇಳುವ, ಕೇಳುವ ಚಮತ್ಕಾರಿಕೆ ಎಂಬ ಭಾವಾರ್ಥವನ್ನು ನೀಡಬಹುದು.

'ಸೊಬಗಿನ ಸೋನೆ' ಎಂಬ ಹೆಸರು ಈ ಕಾವ್ಯಕ್ಕೆ ಹೇಗೆ ಬಂತು ಎನ್ನುತ್ತ ಆರ್. ರಾಚಪ್ಪ ಅವರು "ಆಂಡಯ್ಯನ ಕಬ್ಬಿಗರ ಕಾವ್ಯ 'ಸೊಬಗಿನ ಸುಗ್ಗಿ' ಎಂಬ ಹೆಸರಿರುವುದು ಸರ್ವವಿಧಿತ. ಸೊಬಗಿನ ಸುಗ್ಗಿ ಎಂಬ ಮಾತಿನಿಂದ ಉತ್ತೇಜಿತನಾದ ದೇಪರಾಜ 'ಸೊಬಗಿನ ಸೋನೆ' ಎಂಬ ಹೆಸರನ್ನು ಕಾವ್ಯಕ್ಕೂ ಛಂದಸ್ಸಿಗೂ ಅದೇ ಹೆಸರನ್ನು ಬಳಸಿಕೊಂಡು ಕೃತಿ ರಚಿಸಿರಬಹುದು"[೨೫] ಎಂದು ಊಹೆ ಮಾಡಿರುವುದನ್ನು ಆರ್. ರಾಚಪ್ಪ ಅವರು 'ಸೊಬಗಿನ ಸೋನೆ' ಎಂಬ ಹೆಸರು ಕಾವ್ಯಕ್ಕೂ ಛಂದಸ್ಸಿಗೂ ಏಕಾರ್ಥವಾಗಿ ಅದೇ ಹೆಸರನ್ನು ಕವಿ ಬಳಸಿದ್ದಾರೆ ಎಂದು ಕೃತಿಯನ್ನು ಉದಾಹರಿಸಿ ಹೇಳಿದ್ದನ್ನು ವೀರಣ್ಣ ರಾಜೂರ ಅವರು ಒಪ್ಪದೆ ಆಕ್ಷೇಪಿಸುತ್ತಾರೆ. "ಸೊಬಗಿನ ಸೋನೆ ಎಂಬುದು ಛಂದಸ್ಸಿನ ಹೆಸರಲ್ಲ, ಕಾವ್ಯದ ಹೆಸರು ಮಾತ್ರ ಎಂದು ಖಚಿತವಾಗಿ ಹೇಳಬಹುದು"[೨೬] ಎಂದಿದ್ದಾರೆ.

ಕೆ. ನಾಗೇಂದ್ರಪ್ಪ ಅವರು ಕೃತಿಹೆಸರಿನ ಕುರಿತು ಪ್ರಸ್ತಾಪಿಸುತ್ತ "ಸೊಬಗಿನ ಸೋನೆ ಎಂಬುದು ಒಂದು ಗ್ರಂಥದ ಹೆಸರಲ್ಲ, ಒಂದು ಛಂದಸ್ಸಿನ ಹೆಸರು. ಸಾಂಗತ್ಯದ ಒಂದು ಪ್ರಭೇದದ ಹೆಸರು; ಒಂದು ಮಟ್ಟಿನ ಹೆಸರು; ದೇಪರಾಜ ಈ ಪ್ರಬೇಧದಲ್ಲಿ ಕೃತಿರಚನೆ ಮಾಡಿದ ಮೊದಲ ಕವಿ. ಬೇರೆ ಹೆಸರಿಲ್ಲದ ಕಾರಣ 'ಸೊಬಗಿನ ಸೋನೆ' ಎಂದೇ ಕರೆಯುತ್ತ

ಹೋಗಬಹುದು."[೨೭] ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಕೆ. ನಾಗೇಂದ್ರ ಅವರು ವೀರಣ್ಣ ರಾಜೂರ ಅವರ ಅಭಿಪ್ರಾಯಕ್ಕೆ ಸಹಮತವನ್ನು ವ್ಯಕ್ತಪಡಿಸಿದ್ದಾರೆ.

ಜಿ.ಜಿ. ಮಂಜುನಾಥನ್ ಅವರು 'ಮೋಹನ ತರಂಗಿಣಿ'ಯನ್ನು ಸಂಪಾದಿಸಿದ್ದಾರೆ. ಈ ಕೃತಿಯ ಪ್ರಸ್ತಾವನೆಯಲ್ಲಿ "ನಾಗವರ್ಮ ಛಂದೋಂಬುಧಿಯನ್ನು ತನ್ನ ಹೆಂಡತಿಗೆ ಹೇಳಿದಂತೆ ದೇಪರಾಜ ಸೊಬಗಿನ ಸೋನೆಯನ್ನು ತನ್ನ ಹೆಂಡತಿಗೆ ಹೇಳಿದ್ದಾನೆ. ಇದೇ ಸಂಪ್ರದಾಯವನ್ನು ಕನಕದಾಸರು ಮೋಹನತರಂಗಿಣಿಯಲ್ಲಿ ಅನುಸರಿಸಿರುವುದರಿಂದ ಸೊಬಗಿನ ಸೋನೆ ಎನ್ನುವ ಹೆಸರು ಮೋಹನ ತರಂಗಿಣಿ ಕೃತಿಗೆ ಅಳವಡುತ್ತದೆ"[೨೮] ಎಂದಿದ್ದಾರೆ. ಈ ಅಭಿಪ್ರಾಯ ಕಾವ್ಯದ ಶೈಲಿಯನ್ನು ಕುರಿತು ಹೇಳಿದ್ದಾಗಿದೆ.

ದೇಪರಾಜ 'ಸೊಬಗಿನ ಸೋನೆ'ಯಲ್ಲಿ ಕಾವ್ಯದ ಶೈಲಿ ಕುರಿತು "ಪದಪದ್ಧತಿ ಹೋಲುವ ಬಿನ್ನಣ ರೀತಿ ಚದುರತೆ ಬೆಡಗು ಬಿನ್ನಣ ರೀತಿ"(೧/೧೪) ಎಂದಿದ್ದಾನೆ. ಇದು ಹಾಡುಗಬ್ಬದ ವೈಶಿಷ್ಟ್ಯವೆಂದು ಹೇಳುತ್ತ ಇದರಲ್ಲಿ ಕನ್ನಡ ನುಡಿಯ ಪ್ರಯೋಗ ಪದ್ಧತಿಯು "ಕೇಳ್ವಕೋವಿದರಿಗೆ ಸೊಗಸೋಜೆವೊಲು ಸಕ್ಕಜ ಕನ್ನಡ ವೊಪ್ಪು"(೧/೧೮) ಎಂಬಂತೆ ಇದೆ ಎಂದು ಕವಿ ಹೇಳಿದ್ದಾನೆ.

ಅಷ್ಟಾದಶವರ್ಣನೆಗಳು ಈ ಕಾವ್ಯಕ್ಕೆ ಶೃಂಗಾರವೆಂಬಂತೆ ಇವೆ ಎನ್ನುತ್ತ "ಗಿರಿಜೇಶನೊಲವಿಂದ ಎನಿತೊದವಿಸಿದನಿತನು ಪೇಳ್ವೆನೀ ಸೊಬಗಿನ ಸೋನೆಯೊಳು ಕವಿಗಳ ನೋಂತು"(೧/೨೪) ಎಂದಿರುವ ಮಾತುಗಳು ಕಾವ್ಯದ ಸೊಬಗಿನ ಶೈಲಿಯನ್ನು ಕುರಿತು ಹೇಳಿರುವುದು ಸ್ಪಷ್ಟವಾಗುತ್ತದೆ. ಮುಂದುವರಿದು ಕವಿಯು

> "ಎಲೆಪ್ರಿಯೆ ಕೇಳುತೊಳದ ಮುತ್ತು ಕರತಳಾ
> ಮಳಕವೀ ಕಥೆ ಸೊಬಗಿನ ಸೋನೆ
> ತಿಳಿಯದೆ ಸುಯ್ದು ಮಗುಳೆ ಓದಿಬೇಸತ್ತು
> ತಲೆಗೊಡುಹುವ ಕಬ್ಬದೊಳಗಲ್ಲ"(೧/೨೧)

ಎಂದು ಕವಿ ಪತ್ನಿಯನ್ನು ತಾ ಹೇಳುವ ಕತೆಯ ಕಡೆಗೆ ಗಮನ ಸೆಳೆಯುತ್ತ 'ಸೊಬಗಿನ ಸೋನೆ' ಎಂಬ ಕಥೆಯನ್ನೇ ಹೇಳುತ್ತೇನೆ ಎಂದಿದ್ದಾನೆ. ಇದು ಕಾವ್ಯದ ಹೆಸರನ್ನು ಕುರಿತು ಹೇಳಿದ್ದಾಗಿದೆ ಎನ್ನಿಸುತ್ತದೆ. ಏಕೆಂದರೆ ಇಲ್ಲಿ ಬರುವ ಏಳು ಕಥೆಗಳು ಸ್ತ್ರೀ ಸಂವೇದನೆಗಳಿಗೆ ಸಂಬಂಧಿಸಿವೆ. ಈ ಎಲ್ಲಾ ಕಥೆಗಳನ್ನು ಸೊಗಸಾದ ರೀತಿಯಲ್ಲಿ ಪತ್ನಿಗೆ ಹೇಳಿದ್ದರಿಂದ ಈ ಛಂದಸ್ಸಿಗೆ ಸೊಬಗಿನ ಸೋನೆ ಎಂಬ ಹೆಸರು ಬಂದಿರಬೇಕು

ಬಿ.ಎಂ. ಶ್ರೀ ಅವರು ಕನ್ನಡ ಛಂದಸ್ಸು ಕುರಿತು ಹೇಳಿರುವುದು ಮುಖ್ಯವೆನ್ನಿಸುತ್ತದೆ ಅದು ಸಂಸ್ಕೃತ ಪ್ರಾಕೃತಗಳಲ್ಲಿಲ್ಲದ, ದ್ರಾವಿಡ ಭಾಷೆಗಳಲ್ಲಿ ಮಾತ್ರ ಇರುವ, ಎರವಲಲ್ಲದ, ದೇಶ್ಯ ಛಂದಸ್ಸು; ವಿದ್ಯಾವಂತರಲ್ಲಿ ಮತಗ್ರಂಥಗಳೂ ವ್ಯಾಖ್ಯಾನಗಳೂ ಪ್ರಚಾರದಲ್ಲಿದ್ದರೆ ಸಾಮಾನ್ಯ ಜನರಲ್ಲಿ, ಹೆಂಗಸರಲ್ಲಿ ಈ ದ್ರಾವಿಡ ಛಂದಸ್ಸಿನ ಕವಿತ್ವಗಳು ಬಳಕೆಯಲ್ಲಿದ್ದು ಕ್ರಮೇಣ ಉತ್ತಮ ಗ್ರಂಥಗಳಲ್ಲಿಯೂ ತಮ್ಮ ಲಕ್ಷಣಗಳನ್ನು ಸೇರಿದವು. ದೇಸೀಮಾರ್ಗ ಎಂದು ಕವಿಗಳು ಹೇಳುವುದು ಇದೇ ಎಂದು ತೋರುತ್ತದೆ. ಜೈನ ಪಾಂಡಿತ್ಯದ ಉರುಬು ಕಡಿಮೆಯಾಗಿ, ವೀರಶೈವರು

ಕವಿತ್ವಕ್ಕೆ ಹೊರಟಾಗ ಈ ಸ್ವದೇಶದ ಕನ್ನಡ ಹಾಡುಗಳ ಛಂದಸ್ಸನ್ನೇ ಬಲಪಡಿಸಿ, ಹೊಸ ಹೊಸ ಪದ್ಯಗಳನ್ನು ಸೃಷ್ಟಿಸಿದರು"[೨೯] ಎಂದಿದ್ದಾರೆ.

ಬಿ.ಎಂ.ಶ್ರೀ ಅವರ ಮಾತನ್ನು ಸಾರರೂಪದಲ್ಲಿ ಲಕ್ಷಿಸಿ ಎಂ.ವಿ. ಸೀತಾರಾಮಯ್ಯ ಅವರು "ಜನ ಜೀವನವನ್ನು ಪ್ರತಿಬಿಂಬಿಸುವ ಆಡುನುಡಿ, ನುಡಿಗಟ್ಟು, ನಾಣ್ನುಡಿ, ಹಾಡುಗಳು, ಹಾಡಿನ ಛಂದಸ್ಸು ಬದುಕಿನ ರೀತಿ ನೀತಿ ಇವೇ ಮುಂತಾದ ಅಂಶಗಳೆಲ್ಲ 'ದೇಸಿ'ಯಲ್ಲಿ ಸೇರುತ್ತವೆ"[೩೦] ಎಂಬುದಾಗಿ ಹೇಳಿದ್ದಾರೆ. ಈ ಮೇಲಿನ ಅಂಶಗಳಿಂದ ಸೊಬಗಿನ ಸೋನೆ ಕಾವ್ಯದಲ್ಲಿ ಕವಿ ಮತ್ತು ಪತ್ನಿ ಹೇಳಿರುವ ಅಭಿಪ್ರಾಯಗಳನ್ನು ಲಕ್ಷಿಸಿ ಹೇಳುವುದಾದರೆ 'ಸೊಬಗಿನ ಸೋನೆ' ಎನ್ನುವುದು ಒಂದು ಛಂದಸ್ಸು ಎಂಬುದು ಸ್ಪಷ್ಟವಾಗುತ್ತದೆ. ಇದನ್ನೇ ಕಾವ್ಯದ ಹೆಸರಾಗಿ ಕವಿ ಕರೆದಿರಬೇಕೆನ್ನಿಸುತ್ತದೆ.

**೬.೫. ಸೊಬಗಿನ ಸೋನೆಯಲ್ಲಿ ಬರುವ ಛಂದಸ್ಸಿನ ಕುರಿತ ವಿದ್ವಾಂಸರ ಅಭಿಪ್ರಾಯಗಳು**

ಛಂದಸ್ಸು ಪದ್ಯದ ನಿಯಮ, ಲಕ್ಷಣವನ್ನು ಕುರಿತ ಶಾಸ್ತ್ರ. ಅಷ್ಟೇ ಅಲ್ಲ ಕಾವ್ಯದ ಸೌಂದರ್ಯವನ್ನು ಕಟ್ಟಿಕೊಡುವ ಒಂದು ಚೌಕಟ್ಟು. ಇದು ಕವಿಯ ಭಾವನೆಗಳನ್ನು ಶಬ್ದಗಳ ಮೂಲಕ ಲಯಬದ್ಧವಾಗಿ ಹೊರಹಾಕುವ ಪ್ರಕ್ರಿಯೆ. ಲಯವನ್ನು ಅಕ್ಷರ, ಮಾತ್ರೆ, ಇಲ್ಲವೆ ಅಂಶಗಳ ಆಧಾರದಲ್ಲಿ ರಚಿಸಿರುವುದನ್ನು ಕಾಣುತ್ತೇವೆ. ದೇಪರಾಜ ಅಂಶ ಛಂದಸ್ಸನ್ನು ಬಳಸಿ ಸೊಬಗಿನ ಸೋನೆ ಕಾವ್ಯ ರಚಿಸಿದ್ದಾನೆ.

'ಸೊಬಗಿನ ಸೋನೆ' ಕಾವ್ಯದ ಛಂದಸ್ಸು ಕುರಿತಂತೆ ವಿದ್ವಾಂಸರಲ್ಲಿ ಹಲವು ಕುತೂಹಲವನ್ನು ಉಂಟುಮಾಡಿದೆ. ಜೊತೆಗೆ ಚರ್ಚೆಗೆ ಒಳಪಟ್ಟು ಭಿನ್ನವಾದ ಅಭಿಪ್ರಾಯಗಳು ಮೂಡಿಬಂದಿರುತ್ತವೆ. ಎಲ್ಲ ವಿದ್ವಾಂಸರ ಅಭಿಪ್ರಾಯಗಳನ್ನು ಕ್ರೋಢೀಕರಿಸಿ ಚರ್ಚಿಸಲಾಗಿದೆ.

"ತ್ರಿಪುರದಹನ ಸಾಂಗತ್ಯವನ್ನು ರಚಿಸಿದ ಶಿಶುಮಾಯಣನ ಕಾಲ ೧೨೩೩ ಎಂದು ಕರ್ಣಾಟಕ ಕವಿಚರಿತೆಯಲ್ಲಿ ಹೇಳಲಾಗಿತ್ತು. ನಂತರ ಈ ಕವಿಯ ಕಾಲ ೧೪೭೨ ಎಂದು ಎಂ. ಗೋವಿಂದ ಪೈಯವರು ನಿರ್ಧರಿಸಿದರು."[೩೧] ಈ ಕುರಿತು ಬಿ.ಎಸ್. ಸಣ್ಣಯ್ಯ ಅವರು "ಈ ಮೊದಲು ಕವಿಚರಿತೆಕಾರರು ಶಿಶುಮಾಯಣನೇ ಸಾಂಗತ್ಯದ ಆದಿಕವಿಯೆಂದು ನಿರ್ಣಯಿಸಿದ್ದರು. ಆದರೆ ಈಚೆಗೆ ಇದು ಬದಲಾಗಿ ದೇಪರಾಜನೇ ಸಾಂಗತ್ಯದ ಆದಿ ಕವಿ"[೩೨] ಎಂದು ಭಾವಿಸಿದ್ದಾರೆ. ಹಂಪನಾಗರಾಜಯ್ಯ ಅವರು ಇದೇ ಅಭಿಪ್ರಾಯವನ್ನು ನೀಡಿದ್ದಾರೆ.[೩೩]

"ಸೊಬಗಿನ ಸೋನೆಯನ್ನು ಸಾಂಗತ್ಯವೆಂದು"[೩೪] ಕರ್ಣಾಟಕ ಕವಿಚರಿತೆಕಾರರು ಕರೆದಿದ್ದಾರೆ.

ಡಿ.ಎಸ್. ಕರ್ಕಿಯವರು ಕನ್ನಡ ಛಂದೋವಿಕಾಸದಲ್ಲಿ ಸಾಂಗತ್ಯದ ಉಗಮ ಕುರಿತು ಚರ್ಚಿಸುತ್ತ "ಸಾಂಗತ್ಯವು ತ್ರಿಪದಿಯಿಂದ ಹೊರಟಮಟ್ಟೆಂದು ತ್ರಿಪದಿಯ ಎರಡನೆಯ ಚರಣವನ್ನು ಆವೃತ್ತಿ ಮಾಡಿ ಹಾಡುವ ರೂಢಿಯು ಸಾಂಗತ್ಯದ ರೂಪ ನಿರ್ಮಾಣಕ್ಕೆ ದಾರಿಯನ್ನು ಮಾಡಿತು"[೩೫] ಎಂದು ಉದಾಹರಣೆ ಸಹಿತ ತೋರಿಸಿದ್ದಾರೆ. ಮುಂದುವರೆದು "ಸಾಂಗತ್ಯಗಳು ಹೆಚ್ಚಾಗಿ ವರ್ಣನೆಗೆ ಮೀಸಲಾದ ಕಾವ್ಯಗಳೆಂಬುದಕ್ಕೆ ಸಾಂಗತ್ಯದಲ್ಲಿ ರಚಿತವಾದ ದೇಪರಾಜನ 'ಸೊಬಗಿನ

ಸೋನೆ' ಪದ್ಮರಸನ 'ಶೃಂಗಾರಕಥೆ' ವಾದಿರಾಜನ ವೈಕುಂಠ ವರ್ಣನೆ ಮೊದಲಾದ ಕೃತಿಗಳಲ್ಲಿ ಕಾವ್ಯಗಳ ಹೆಸರುಗಳು ಸೂಚನೆಯನ್ನೊದಗಿಸುತ್ತವೆ"[೩೬] ಎಂದಿದ್ದಾರೆ. ಸಾಂಗತ್ಯ ಎಂಬುದು "ಒಂದು ಆಖ್ಯಾನಕ್ಕೂ ಅದರ ನಿರೂಪಣೆಗಾಗಿ ಆಯ್ದ ಛಂದಬಂಧಕ್ಕೂ ಒಂದೇ ಹೆಸರು ಈ ರೀತಿಯಾಗಿ ಬಳಕೆಗೊಂಡಿದೆ"[೩೭] ಎಂಬುದಾಗಿ ಅಭಿಪ್ರಾಯಪಟ್ಟಿದ್ದಾರೆ. ಸಾಂಗತ್ಯದ ಛಂದಸ್ಸು ಕುರಿತು ಹೇಳಿರುವ ಈ ಅಭಿಪ್ರಾಯವು ಸೊಬಗಿನ ಸೋನೆ ಛಂದಸ್ಸಿಗೂ ಅನ್ವಯಿಸಿ ಕೊಳ್ಳಬಹುದೆನ್ನಿಸುತ್ತದೆ.

ಜನಪ್ರಿಯ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಸೊಬಗಿನ ಸೋನೆ ಕಾವ್ಯ ಕುರಿತು "ಇದು ಸಾಂಗತ್ಯದಲ್ಲಿದೆ, ಶೈಲಿ ಛಂದಸ್ಸುಗಳ ದೃಷ್ಟಿಯಿಂದ ಬಹುಶಃ ಇವನೇ ಮೊದಲನೆಯ ಸಾಂಗತ್ಯಕಾರನೆಂದೂ ತಿಳಿಯಬಹುದು"[೩೮] ಎಂದು ಹೇಳಲಾಗಿದೆ.

ಸೇಡಿಯಾಪು ಕೃಷ್ಣಭಟ್ಟರು "ಸಾಂಗತ್ಯವು ರೂಪಾಂತರಗೊಂಡು ಸಿದ್ಧವಾದ ಒಂದು ದಾಟಿಯೆಂದೂ ಅದರಲ್ಲಿ ಪ್ರಾದೇಶಿಕವಾಗಿ ಎರಡು ಪ್ರಬೇಧಗಳು ಕಂಡುಬರುತ್ತವೆ. ವಿಷ್ಣುಗಣ ಪ್ರಧಾನವಾದ ಪದ್ಯಗಳು ಹಾಡಲು ಸುಗಮವಲ್ಲವಾದುದರಿಂದ ಪ್ರಚಾರಕ್ಕೆ ಬರಲಿಲ್ಲ"[೩೯] ಎಂದಿದ್ದಾರೆ. ೨ ಮತ್ತು ೪ನೇ ಸಾಲಿನಲ್ಲಿ ವಿಷ್ಣುಗಣ ಮತ್ತು ಬ್ರಹ್ಮಗಣವಿರುವ ಪ್ರಬೇಧಗಳು ಇವೆ. ಇಲ್ಲಿ ವಿಷ್ಣು ಗಣ ಪ್ರಧಾನವಾದ ಪ್ರಕಾರವು ಸೋನೆ ಸಾಂಗತ್ಯಕ್ಕೆ ಅನ್ವಯಿಸಿ ಹೇಳಿದ್ದಾರೆ.

ಜಿ. ವರದರಾಜರಾವ್ ಅವರು ಸೊಬಗಿನ ಸೋನೆ ಛಂದಸ್ಸು ಕುರಿತು "ಸಾಂಗತ್ಯದ ಮೊದಲನೆಯ ಕೃತಿಯೆಂದು ಭಾವಿಸಲಾಗಿರುವ ದೇಪರಾಜನ ಸೊಬಗಿನ ಸೋನೆಯ ರಚನೆಯ ರೀತಿಯನ್ನು "ಸೊಬಗಿನ ಸೋನೆ ವರ್ಣ" ಎಂದು ನಿರ್ದೇಶಿಸಿರುವುದು ಸಾಂಗತ್ಯದ ನಿರ್ಮಾಣದಲ್ಲಿ ಇದನ್ನು ವಿಶಿಷ್ಟವಾದ ಪ್ರಯೋಗವೆಂದು ಇಟ್ಟುಕೊಳ್ಳಬಹುದು"[೪೦] ಎಂದಿದ್ದಾರೆ.

ರಂ.ಶ್ರೀ ಮುಗಳಿ ಅವರು ಸೊಬಗಿನ ಸೋನೆ ಕಾವ್ಯದ ಛಂದಸ್ಸನ್ನು ಕುರಿತು "ಸಾಂಗತ್ಯದ ಇದೊಂದು ಪ್ರಕಾರವೆಂಬುದು ಸ್ಪಷ್ಟ, ಉದ್ದಂಡ ಷಟ್ಪದಿ ಹೇಗೆ ವಾರ್ಧಕದ ಒಂದು ಪ್ರಕಾರವಾಗಿ ಪ್ರಯೋಗ ರೂಪದಲ್ಲಿ ಬಂದಿತೋ ಹಾಗೇ ಇದು ಸಾಂಗತ್ಯದ ಪ್ರಕಾರವಾಗಿದೆ"[೪೧] ಎಂದಿದ್ದಾರೆ.

ಟಿ.ವಿ. ವೆಂಕಟಾಚಲಶಾಸ್ತ್ರೀ ಅವರು "ದೇಪರಾಜನ ಸೊಬಗಿನ ಸೋನೆ ಕೃತಿಯ ಛಂದಸ್ಸಿನ ಬಗೆಗೆ ಹೇಳಿದ ಲಕ್ಷಣಾಂಶಗಳು ಇತರ ಕೃತಿಗಳ ಛಂದಸ್ಸಿನ ವಿಷಯದಲ್ಲಿಯೂ ಅನುಸರಿಸಿ 'ಸೊಬಗಿನ ಸೋನೆ'. 'ಸೊಬಗಿನ ಸೋನೆ ವರ್ಣ'. 'ಸೊಬಗಿನ ಸೋನೆ ಮಟ್ಟು' ಎಂದು ಮುಂತಾಗಿ ಕರೆಯುವುದು ಒಪ್ಪತಕ್ಕದ್ದೆ ಆಗಿದೆ ಎನ್ನುತ್ತಾ ಕವಿಚರಿತೆಕಾರರು ಮತ್ತು ಇತರರನ್ನು ಅನುಸರಿಸಿ 'ಸೊಬಗಿನ ಸೋನೆ'ಯನ್ನು ಸಾಂಗತ್ಯವೆಂದೇ ವ್ಯವಹರಿಸಬಹುದು"[೪೨] ಎನ್ನುತ್ತಾರೆ.

ಎಂ. ಚಿದಾನಂದಮೂರ್ತಿ ಅವರು ತ್ರಿಪದಿ:ಅದರ ಸ್ವರೂಪ ಮತ್ತು ಇತಿಹಾಸ ಎಂಬ ಪ್ರಬಂಧದಲ್ಲಿ ಅನುಷಂಗಿಕವಾಗಿ ಕೆಲವು ಮಾತುಗಳನ್ನಾಡಿದ್ದಾರೆ. "ಸಾಂಗತ್ಯ ಬಹು ಈಚಿನಮಟ್ಟು, ನಾಗವರ್ಮ ಜಯಕೀರ್ತಿಯರಿಗೆ ಅದು ತಿಳಿಯದು. ನಮಗೆ ತಿಳಿದ ಮಟ್ಟಿಗೆ ಮೊದಲ ಸಾಂಗತ್ಯ ಕೃತಿ ಸು. ೧೪೧೦ರಲ್ಲಿದ್ದ ದೇಪರಾಜನ 'ಸೊಬಗಿನ ಸೋನೆ"[೪೩] ಎಂಬ ಹೇಳಿಕೆ ನೀಡಿದ್ದಾರೆ.

ಎಚ್. ದೇವೀರಪ್ಪ ಅವರು ಸೊಬಗಿನ ಸೋನೆ ಛಂದಸ್ಸಿನ ಕುರಿತಾಗಿ "ಇದು ಸಾಂಗತ್ಯವಲ್ಲ, ಇದೇ ಒಂದು ವಿಶಿಷ್ಟವಾದ ಛಂದಸ್ಸು, ಇದು ಹಾಡುಗಬ್ಬ ಎಂಬ ಅಭಿಪ್ರಾಯಪಡುತ್ತಾ ಇದಕ್ಕೆ ಕೆಲವರ ಅಭಿಮತವಿದೆ"[೪೪] ಎನ್ನುತ್ತಾರೆ.

ಎಚ್. ದೇವೀರಪ್ಪನವರ ಅಭಿಪ್ರಾಯಕ್ಕೆ ಪೂರಕವಾಗಿ ಆರ್. ರಾಚಪ್ಪನವರು "ದೇಪರಾಜನ 'ಸೊಬಗಿನ ಸೋನೆ'ಯ ಛಂದಸ್ಸು ಸಾಂಗತ್ಯದಿಂದ ಭಿನ್ನವಾದುದು. ಅದೇ ವಿಶಿಷ್ಟವಾದ ಛಂದೋಲಯವುಳ್ಳ ಹಾಡುಗಬ್ಬವೆಂದೂ, ಸೊಬಗಿನ ಸೋನೆಯಲ್ಲಿ ಏಳನೇ ಮತ್ತು ಹದಿನಾಲ್ಕನೇ ಸ್ಥಾನದಲ್ಲಿ ವಿಷ್ಣುಗಣನಿತ್ಯ ಹಾಗೂ ಸಾಂಗತ್ಯದಲ್ಲಿ ಏಳನೇ ಮತ್ತು ಹದಿನಾಲ್ಕನೇ ಸ್ಥಾನದಲ್ಲಿ ಬ್ರಹ್ಮಗಣನಿತ್ಯ. ಇವೆರಡರಲ್ಲಿ ಹಾಡುಗಾರಿಕೆಯಲ್ಲಿ, ತಾಳದಲ್ಲಿ ಸೂಕ್ಷ್ಮವ್ಯತ್ಯಾಸವಿದೆ. ಹಾಗಾಗಿ ಇದೊಂದು ಸ್ವತಂತ್ರ ಛಂದೋಬಂಧನವೆಂದು"[೪೫] ಅಭಿಪ್ರಾಯಪಟ್ಟಿದ್ದಾರೆ.

ರು.ನಾ. ವಿಜಯಲಕ್ಷ್ಮಿಯವರು ಸೊಬಗಿನ ಸೋನೆ ಕಾವ್ಯದ ಛಂದಸ್ಸಿನ ಕುರಿತಾಗಿ "ದೇಪರಾಜನೆಂಬ ಕವಿ ಬರೆದ ಸೊಬಗಿನ ಸೋನೆ ಕೃತಿಯನ್ನು ಸಾಂಗತ್ಯ ಸಾಹಿತ್ಯದ ಮೊದಲ ಕೃತಿಯೆಂದು ತಿಳಿಯಲಾಗಿತ್ತು. ಆದರೆ ಕ್ರಿ.ಶ. ೧೪೫೦ರ ಕಲ್ಯಾಣ ಕೀರ್ತಿಯನ್ನು ಸಾಂಗತ್ಯ ಸಾಹಿತ್ಯದ ಮೊದಲ ಕವಿ ಎಂದೂ ಅವನ ಕೃತಿ ಕಾಮನ ಕಥೆ 'ಸಾಂಗತ್ಯ' ಸಾಹಿತ್ಯದ ಮೊದಲ ಕೃತಿಯೆಂದು ತಿಳಿಯಲವಕಾಶವಿದೆ. ಸಾಂಗತ್ಯದಲ್ಲಿರುವ ೭ ಮತ್ತು ೧೪ರ ಸ್ಥಾನದ ಬ್ರಹ್ಮಗಣಗಳನ್ನು ದೇಪರಾಜ ವಿಷ್ಣುಗಣಗಳನ್ನಾಗಿ ಬದಲಿಸಿದ್ದಾನೆ. ಈ ನವೀನ ರೀತಿಯ ಸಾಂಗತ್ಯ ವಿನ್ಯಾಸವನ್ನು ನಂತರದ ಕೆಲವು ಕವಿಗಳು ಅನುಮೋದಿಸಿ ಪ್ರಯೋಗಿಸಿರುವರು ಇದು ಮೂಲ ಸಾಂಗತ್ಯವಲ್ಲ, ಇದನ್ನು ಸಾಂಗತ್ಯದ ಪ್ರಭೇಧವೆಂದು"[೪೬] ಅಭಿಪ್ರಾಯಪಟ್ಟಿದ್ದಾರೆ.

ಸಿ.ಯು. ಮಂಜುನಾಥ ಅವರು "ದೇಪರಾಜನ ಸೊಬಗಿನ ಸೋನೆಯನ್ನು ಸಾಂಗತ್ಯದಿಂದ ಭಿನ್ನ ಛಂದಸ್ಸಿನ ಕೃತಿಯೆಂದು ಭಾವಿಸಲು ಸಾಧ್ಯತೆಗಳಿವೆ. ಅದು 'ಸೊಬಗಿನ ಸೋನೆ ವರ್ಣ', 'ಸೊಬಗಿನ ಸೋನೆ ಸಾಂಗತ್ಯ'ವೆಂದೂ ಅದು ಸಾಂಗತ್ಯದ ಒಂದು ಒಳಭೇದವೆಂದು ಭಾವಿಸಿ ದೇಪರಾಜನನ್ನು ಆ ಛಂದಸ್ಸಿನ ಆದ್ಯಕೃತಿಕಾರನೆಂದು"[೪೭] ಭಾವಿಸಿದ್ದಾರೆ.

ತೆಕ್ಕುಂಜೆ ಗೋಪಾಲಕೃಷ್ಣಭಟ್ಟ ಅವರು "ದೇಪರಾಜನು ಬರೆದುದು ಸಾಂಗತ್ಯವಲ್ಲ, ಸೊಬಗಿನ ಸೋನೆ. ಸಾಂಗತ್ಯದ ನಡೆ ರೂಪಕ ತಾಳದಲ್ಲಿದೆ. ಸೊಬಗಿನ ಸೋನೆ ನಡೆ ಅಷ್ಟತಾಳದಲ್ಲಿದೆ. ಹಾಡುವುದಕ್ಕೆ ಸೊಬಗಿನ ಸೋನೆಗಿಂತ ಸಾಂಗತ್ಯವೇ ಹೆಚ್ಚು ರಂಜಕ"[೪೮] ಎಂದಿದ್ದಾರೆ.

ಮೈಸೂರು ವಿಶ್ವವಿದ್ಯಾಲಯದ ಕನ್ನಡ ಛಂದಸ್ಸಿನ ಚರಿತ್ರೆಯಲ್ಲಿ ಸಾಂಗತ್ಯದ ಉಗಮ, ಹೆಸರು, ಲಕ್ಷಣ, ಇತಿಹಾಸ ಕುರಿತು ಸಿ.ಪಿ. ಕೃಷ್ಣಕುಮಾರ್ ಅವರು ವಿವರಿಸಿ "ಮೊತ್ತಮೊದಲಿಗೆ ನೂತನ ಛಂದ ಪ್ರಕಾರವನ್ನು ಬಳಸಿರಬಹುದಾದ ದೇಪರಾಜನು ಎಲ್ಲಿಯೂ 'ಸಾಂಗತ್ಯ', ಇಲ್ಲವೆ 'ಸಂಗತಿ' ಎಂಬ ಹೆಸರನ್ನು ಸೂಚಿಸಿಲ್ಲ. ಇದೇ ಬಂಧವನ್ನು ಹೋಲುವ ಕೆಲವು ಬಿಡಿ ಪದ್ಯಗಳು ಯಕ್ಷಗಾನಗಳಲ್ಲಿ ಕಂಡುಬರುವುದುಂಟು ಅಲ್ಲಿ ಅವನ್ನು 'ಸೊಬಗಿನ ಸೋನೆಯ ವರ್ಣ' ಎಂದು ನಿರ್ದೇಶಿರುವುದು ಕಂಡುಬರುತ್ತದೆ. ಬಹುಶಃ ಈ ಯಕ್ಷಗಾನಗಳು ಇತ್ತೀಚಿನವು ಗಳಾಗಿದ್ದು, ಪ್ರಕೃತ ಸೊಬಗಿನ ಸೋನೆಯ ದಾಟಿಯನ್ನೇ ಅನುಸರಿಸಿ ಹೇಳಿರಬಹುದಾದ

ಮಾತಿರಬಹುದು"[೪೯] ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ನಂತರ ಇವರು ಕೆಲವು ಕಾವ್ಯಗಳ ಛಂದಸ್ಸನ್ನು ಪರಿಶೀಲಿಸಿ ಈ ರೀತಿಯ ಅಭಿಪ್ರಾಯ ಪಟ್ಟಿದ್ದಾರೆ. "ತ್ರಿಪದಿಯ ಮೂಲಕವಾಗಿ ರೂಪುಗೊಂಡಿರಬಹುದಾದ 'ಸೊಬಗಿನ ಸೋನೆ'ಯ ಲಯ ಹಂತ ಹಂತವಾಗಿ ಮಾರ್ಪಟ್ಟು ಸಾಂಗತ್ಯದ ಸಿದ್ಧರೂಪಕ್ಕೆ ಎಡೆಮಾಡಿಕೊಟ್ಟಿರಬಹುದೆಂದು ತೋರುತ್ತದೆ. ದೇಪರಾಜನ ಕಾವ್ಯವನ್ನೇ ಗಮನಿಸಿದರೆ, ಸಾಂಗತ್ಯದ ಲಕ್ಷಣಕ್ಕೆ ಅನುಗುಣವಾದ ಅಂಶಗಳು ಅದರಲ್ಲಿಯೇ ಹುದುಗಿರುವಂತೆ ತೋರಿಬರುತ್ತದೆ"[೫೦] ಎಂದಿದ್ದಾರೆ. ಮತ್ತೊಂದೆಡೆಯಲ್ಲಿ "ಎರಡು ಸಾಲಿನ ಎಳೆಯ ಮೂಲಕ ಮೂರು ಸಾಲಿನ ತ್ರಿಪದಿ ರೂಪಗೊಂಡು ಆ ತರುವಾಯ ತ್ರಿಪದಿಯನ್ನು ಹಾಡುವಲ್ಲಿನ ಎರಡನೆಯ ಪಂಕ್ತಿಯ ಪುನರಾವರ್ತನೆಯ ಪದ್ಧತಿಯನ್ನು ಅವಲಂಬಿಸಿ, 'ಸೊಬಗಿನ ಸೋನೆ ವರ್ಣ' ಜನ್ಮತಾಳಿ, ಅದು ಶುದ್ಧ ಸಾಂಗತ್ಯಕ್ಕೆ ಎಡೆಮಾಡಿಕೊಟ್ಟಿತು ಎನ್ನಬಹುದು"[೫೧] ಎಂದಿದ್ದಾರೆ.

ವೀರಣ್ಣ ರಾಜೂರ ಅವರು 'ಕನ್ನಡ ಸಾಂಗತ್ಯ ಸಾಹಿತ್ಯ' ಸಂಶೋಧನಾ ಪ್ರಬಂಧದಲ್ಲಿ "ಸಾಂಗತ್ಯ ಕೃತಿಗಳನ್ನು ಶುದ್ಧಸಾಂಗತ್ಯ, ಸೋನೆಸಾಂಗತ್ಯ ಹಾಗೂ ಷಟ್ಪದ ಸಾಂಗತ್ಯ ಎಂದು ಮೂರು ವಿಧವಾಗಿ ವಿಂಗಡಿಸಿ"[೫೨] ಇವುಗಳ ಲಕ್ಷಣಗಳನ್ನು ವಿವರಿಸಿದ್ದಾರೆ. ದೇಪರಾಜನ ಸೊಬಗಿನ ಸೋನೆ ಕಾವ್ಯದ ಲಕ್ಷಣಗಳನ್ನು ಕುರಿತು ವಿವರಿಸುತ್ತ 'ಸೊಬಗಿನ ಸೋನೆ' ಸಾಂಗತ್ಯ ಛಂದಸ್ಸಿನಲ್ಲಿ ರಚಿತವಾದ ಕಾವ್ಯವೆಂಬುದು ನಿಶ್ಚಿತವಾದ ಮಾತು ಆದರೆ ಅದು ಇಂದು ನಾವು ಹೆಚ್ಚಿನ ಸಂಖ್ಯೆಯ ಸಾಂಗತ್ಯ ಕೃತಿಗಳಲ್ಲಿ ಕಾಣುವ ಶುದ್ಧರೂಪವಲ್ಲ ಒಂದು ವಿಶಿಷ್ಟರೂಪ. ಇದರಲ್ಲಿ ಬರುವ ತಾಳ, ಲಯ, ಯತಿ, ಗಣವಿಭಜನೆ, ರಾಗಾಲಾಪಕ್ರಮ ಎಲ್ಲವೂ ಸಾಂಗತ್ಯಕ್ಕಲ್ಲದೆ ಮತ್ತಾವ ಅಂಶಗಣಘಟಿತ ದೇಶೀ ಛಂದಸ್ಸಿಗೂ ಹೊಂದಿಕೆಯಾಗುವುದಿಲ್ಲ. ಈ ಕಾರಣದಿಂದ ಇದೊಂದು ಸಾಂಗತ್ಯದ ಪ್ರಕಾರವೆಂದು ಗಣಿಸಿ ಸೊಬಗಿನ ಸೋನೆಯೇ ಈ ಪ್ರಕಾರದಲ್ಲಿ ರಚನೆಗೊಂಡ ಪ್ರಥಮ ಕೃತಿಯಾದುದರಿಂದ, ಈ ಪ್ರಕಾರದಲ್ಲಿ ಬರೆದ ಇತರ ಕೃತಿಗಳ ಹಸ್ತಪ್ರತಿಗಳಲ್ಲಿ 'ಸೊಬಗಿನ ಸೋನೆ ವರ್ಣ' ಎಂದು ಅವುಗಳ ಛಂದಸ್ಸನ್ನು ಸೂಚಿಸಿರುವುದರಿಂದ ಇದಕ್ಕೆ 'ಸೋನೆ ಸಾಂಗತ್ಯ' ಎಂದು ಹೆಸರಿಸಲಾಗಿದೆ."[೫೩] ಮುಂದುವರಿದು "ಸೊಬಗಿನ ಸೋನೆ ವರ್ಣವನ್ನು ಅನುಸರಿಸಿದ ಕಾವ್ಯಗಳಿಗೆ 'ಚೌಪದಿ' ಅಥವಾ 'ಘನಚೌಪದಿ' ಎಂದೂ ಕರೆಯುತ್ತಿದ್ದರೆಂಬ ವಿಷಯ ವ್ಯಕ್ತವಾಗುತ್ತದೆ"[೫೪] ಎಂದಿದ್ದಾರೆ.

ಕೆ. ನಾಗೇಂದ್ರಪ್ಪ ಅವರು "ಸೊಬಗಿನ ಸೋನೆ ಎಂಬುದು ಒಂದು ಗ್ರಂಥದ ಹೆಸರಲ್ಲ; ಒಂದು ಛಂದಸ್ಸಿನ ಹೆಸರು; ಸಾಂಗತ್ಯದ ಒಂದು ಪ್ರಭೇದದ ಹೆಸರು: ಒಂದು ಮಟ್ಟಿನ ಹೆಸರು ಎನ್ನುತ್ತ ಸೊಬಗಿನ ಸೋನೆಯೂ ಸಾಂಗತ್ಯವೇ ಎಂದು ಹೇಳಬಹುದು"[೫೫] ಎಂದು ನಾಗರತ್ನಮ್ಮ ಅವರು 'ಸಾಂಗತ್ಯ ಸಾಹಿತ್ಯ' ಎಂಬ ಗ್ರಂಥದಲ್ಲಿ ಸೊಬಗಿನ ಸೋನೆ ಛಂದಸ್ಸಿನ ಕುರಿತಂತೆ ವೀರಣ್ಣ ರೂಜೂರ ಅವರ ಅಭಿಪ್ರಾಯಗಳನ್ನು ಅನುಸರಿಸಿ ಸಂಕ್ಷಿಪ್ತವಾಗಿ ವಿವರಿಸಿದ್ದಾರೆ. ಆದರೆ "ಸೊಬಗಿನ ಸೋನೆಯೆಂಬ ಹೆಸರನ್ನು ಕವಿ ದೇಪರಾಜ ಕಾವ್ಯಕ್ಕೂ ಹಾಗೂ ಅದರ ಛಂದಸ್ಸಿಗೂ ಏಕಾರ್ಥವಾಗಿ ಬಳಸಿದಂತೆ ತೋರುತ್ತದೆ ಎನ್ನುತ್ತ ಶುದ್ಧ ಸಾಂಗತ್ಯದ ಬ್ರಹ್ಮಗಣವನ್ನು ವಿಷ್ಣುವಾಗಿಸಿ ಒಂದು ಛಂದೋರೂಪವನ್ನು ರೂಢಿಗೆ ತಂದಿದ್ದಾನೆ"[೫೬] ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ನಾಗರತ್ನಮ್ಮ ಅವರು ಸೊಬಗಿನ ಸೋನೆ ಕಾವ್ಯದ ಹೆಸರು ಹಾಗೂ ಛಂದಸ್ಸಿಗೆ ಏಕಾರ್ಥವಾಗಿ ಕವಿದೇಪರಾಜ 'ಸೊಬಗಿನ ಸೋನೆ' ಎಂಬ ಹೆಸರು ಬಳಸಿದ್ದಾರೆ ಎಂಬುದನ್ನು ಕೃತಿಯ ಆಧಾರದಿಂದ ಒಪ್ಪಬಹುದು. ಆದರೆ ದೇಪರಾಜ ಶುದ್ಧ ಸಾಂಗತ್ಯದ ಬ್ರಹ್ಮಗಣವನ್ನು ವಿಷ್ಣುವಾಗಿಸಿ ಒಂದು ಛಂದೋರೂಪವನ್ನು ರೂಢಿಗೆ ತಂದಿದ್ದಾನೆ ಎಂಬುದನ್ನು ಒಪ್ಪಲಾಗುವುದಿಲ್ಲ. ಏಕೆಂದರೆ ಅವರ ಅಭಿಪ್ರಾಯಕ್ಕೆ ಯಾವುದೇ ಉದಾಹರಣೆ ನೀಡಿರುವುದಿಲ್ಲ. ಜೊತೆಗೆ ದೇಪರಾಜನಿಗಿಂತಲೂ ಮುಂಚೆ ಯಾವುದೇ ಸಾಂಗತ್ಯ ಕಾವ್ಯಗಳು ಅಲಭ್ಯವಾಗಿವೆ.

ಎಂ.ಎಂ. ಕಲಬುರ್ಗಿ ಅವರು ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯದ ಛಂದಸ್ಸು ಕುರಿತು ಚರ್ಚಿಸುವಾಗ ಸೊಬಗಿನ ಸೋನೆ ಛಂದಸ್ಸಿನ ಕುರಿತಂತೆ ವ್ಯಕ್ತಪಡಿಸಿರುವ ಅಭಿಪ್ರಾಯವು ಮುಖ್ಯವೆನಿಸುತ್ತದೆ. "ಸಾಂಗತ್ಯದ ಸುಗ್ಗಿ ಸಮಯಕ್ಕೆ ಮೊದಲು ಆಗಿ ಹೋದವನೆಂದು ಭಾವಿಸಲಾದ ದೇಪರಾಜನ ಸೊಬಗಿನ ಸೋನೆಯ ಎಲ್ಲ ವಿಷ್ಣುಗಣವುಳ್ಳ ವಿನ್ಯಾಸದ ವೃತ್ತಗಳನ್ನು ಕವಿಚರಿತೆಕಾರರು ಸಾಂಗತ್ಯವೆಂದೇ ಕರೆದುದು ವಿದ್ವಾಂಸರು ದಾರಿತಪ್ಪುವಂತೆ ಮಾಡಿತು. ಆಗ ಈ ಸರ್ವ ವಿಷ್ಣುವುಳ್ಳದಾಗಿದ್ದ ಸಾಂಗತ್ಯವೇ ಮುಂದೆ ೭ ಮತ್ತು ೧೪ನೆಯ ಸ್ಥಾನಗಳಲ್ಲಿ ಬ್ರಹ್ಮಗಣವಾಗಿ ಸಾಂಗತ್ಯವಾಗಿ ಪರಿವರ್ತನೆಗೊಂಡಿತೆಂದು ಭಾವಿಸಿದರು. 'ಕನ್ನಡ ಛಂದೋವಿಕಾಸ' ಮೊದಲಾದ ಕೃತಿಗಳು ಈ ಅಭಿಪ್ರಾಯವನ್ನು ಮತ್ತೆ ಮತ್ತೆ ಪೋಷಿಸಿದವು. ಆದರೆ ಇತ್ತೀಚೆಗೆ ಸರ್ವ ವಿಷ್ಣುವುಳ್ಳ ದೇಪರಾಜಾದಿಗಳ ವೃತ್ತದ ಹೆಸರು 'ಸಾಂಗತ್ಯ'ವಲ್ಲ ಸೊಬಗಿನ ಸೋನೆ ವರ್ಣವೆಂದು ಹೇಳಿ ಎರಡನ್ನೂ ಪ್ರತ್ಯೇಕವಾಗಿ ಭಾವಿಸುತ್ತಲಿದ್ದಾರೆ. ಸೊಬಗಿನ ಸೋನೆಯ ವರ್ಣದೊಂದಿಗೆ ಏರ್ಪಟ್ಟಿದ್ದ ತೊಡಕನ್ನು ಬಿಡಿಸಿಕೊಂಡು ಇತ್ತೀಚೆಗೆ ಸಾಂಗತ್ಯದ ಉಗಮ, ಲಕ್ಷಣ ಇತ್ಯಾದಿ ದೃಷ್ಟಿಯಿಂದ ಈಗ ಸ್ವತಂತ್ರವಾಗಿ ಚರ್ಚಿಸುತ್ತಲಿರುವರು. ಈ ವಿಷಯವಾಗಿ ಎಚ್. ದೇವೀರಪ್ಪ ಅವರು ನೀಡಿದ

ವಿ.ವಿ। ವಿ.ವಿ। ವಿ.ವಿ.ಬ್ರ ವಿ.ವಿ। ವಿ.ವಿ। ವಿ.ವಿ.ಬ್ರ

ಆರು ಸಾಲಿನ ಗಣಗಳ ಈ ನಿರ್ಣಯ ತುಂಬ ಉಪಯುಕ್ತವೆನಿಸಿದೆ ಎನ್ನುತ್ತ ಒಳಪ್ರಾಸದ ಸಾಂಗತ್ಯದಿಂದ ಒಳಪ್ರಾಸವಿಲ್ಲದ ಸಾಂಗತ್ಯಗಳು ಹುಟ್ಟಿಕೊಳ್ಳುವಲ್ಲಿ ಮೂಲತಃ ಇದು 'ಆರುಪಾದಗಳ ಪದ್ಯ' ಎಂಬ ಅಂಶವೇ ಮರೆತುಹೋಗಿ, ನಾಲ್ಕು ಪಾದಗಳ ಒಳಪ್ರಾಸವಿಲ್ಲದ ಸಾಂಗತ್ಯಗಳು ರೂಢಗೊಂಡಿರಬೇಕೆಂದು"[೫೭] ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಈ ಎಲ್ಲಾ ವಿದ್ವಾಂಸರ ಅಭಿಪ್ರಾಯಗಳಿಂದ ತಿಳಿದುಬರುವುದೇನೆಂದರೆ, ಸೊಬಗಿನ ಸೋನೆ ಛಂದಸ್ಸು ಸಾಂಗತ್ಯದ ಪ್ರಕಾರವೆಂದು, ಈ ಪ್ರಕಾರಕ್ಕೆ ದೇಪರಾಜ ಮೊದಲಿಗನಾಗಿದ್ದು, ಈತನ ಕಾವ್ಯ ಸೊಬಗಿನ ಸೋನೆಯೇ ಮೊದಲನೆಯದೆಂದು ಸ್ಪಷ್ಟವಾಗುತ್ತದೆ. ನಡುಗನ್ನಡ ಕಾಲದ ಕಾವ್ಯದಲ್ಲಿ ಪ್ರಸಿದ್ಧಿಗೆ ಬಂದ ದೇಸೀ ಛಂದೋಪ್ರಕಾರಗಳಾದ ರಗಳೆ, ಷಟ್ಪದಿ, ತ್ರಿಪದಿಯಂತೆ ಸಾಂಗತ್ಯ ಶಿಷ್ಟ ಸಾಹಿತ್ಯದಲ್ಲಿ ಮೊದಲ ಬಾರಿಗೆ ಕಾವ್ಯ ರೂಪದಲ್ಲಿ ಪ್ರಯೋಗಗೊಂಡಿರುವುದು

ಹಾಗೂ ಸಾಂಗತ್ಯದಂತಹ ಚಿಕ್ಕ ಗಾತ್ರದ ಛಂದಸ್ಸನ್ನು ಈ ತೆರನಾದ ಮಹಾಕಾವ್ಯ ರಚನೆಗೆ ಅಳವಡಿಸಿ ನಾಂದಿ ಹಾಡಿರುವುದು ಸೊಬಗಿನ ಸೋನೆಯ ವಿಶೇಷವಾಗಿದೆ. ಜಾನಪದ ಅಂಶಗಳ ಸೊಗಡು ಒಳಗೊಂಡ ಪದ್ಯಗಳನ್ನು ಗಮನಿಸಬಹುದು. ನಿದರ್ಶನಕ್ಕೆ

ಕಂದನೆ ಜೋ ಕಣ್ಣಿಗೆ ಮಧುಋತುಮಾ
ಕಂದನೆ ಜೋ ನಾರಿ ಹೃದಯಕೆ
ಕಂದರ್ಪನೆ ಜೋ ವಂಶೋರ್ಜಿತ ತಿಲಕಾ
ನಂದ ಜೋಯೆಂದು ಪಾಡಿದರೆಂದು (೪/೨೯)

ಈ ತೆರನಾದ ಪದ್ಯದಲ್ಲಿ ಮಹಿಳೆಯರ ಹಾಡಿನ ಗೇಯ ಗುಣವಿದೆ. ಹೆಣ್ಣು ಮಕ್ಕಳ ಸಾಹಿತ್ಯವೆಂದು ಪ್ರಸಿದ್ಧಿ ಪಡೆದ ಈ ಸಾಂಗತ್ಯವನ್ನು ಹದಿಬದೆಯ ಧರ್ಮ, ಭರತೇಶ ವೈಭವ ಕಾವ್ಯಗಳು ಹಾಡುಗಬ್ಬಗಳಾಗಿ ಪ್ರಸಿದ್ಧಿಗೆ ಬಂದಿವೆ. ಈ ಛಂದೋಪ್ರಕಾರ ಪ್ರಾರಂಭದಲ್ಲಿ ಲಿಂಗಭೇದವಿಲ್ಲದೆ ಜನಸಾಮಾನ್ಯರಿಗೆ ಕಾವ್ಯರೂಪದಲ್ಲಿ ತಲುಪಬೇಕೆಂಬ ಆಶಯವನ್ನು ಹೊಂದಿರುವುದು ಗಮನಾರ್ಹವಾಗಿದೆ.

ಸೊಬಗಿನ ಸೋನೆ ಕಾವ್ಯದ ಆರಂಭ ಮತ್ತು ಅಂತ್ಯದ ಸ್ತುತಿ ಪದ್ಯಗಳಲ್ಲಿ ಖ್ಯಾತ ಕರ್ಣಾಟಕ ಒಟ್ಟು ೪೧ ವೃತ್ತಗಳನ್ನು ಬಳಸಲಾಗಿದೆ. ಈ ವೃತ್ತಗಳಲ್ಲಿ ೧೦ ಚಂಪಕಮಾಲಾ, ೬ ಉತ್ಪಲಾಮಾಲಾ, ೪ ಶಾರ್ದೂಲವಿಕ್ರೀಡಿತ, ೨೦ ಮತ್ತೇಭವಿಕ್ರೀಡಿತ, ೧ ಮಹಾಸ್ರಗ್ಧರಾ ವೃತ್ತಗಳು ಇವೆ. ಆದರೆ ಸ್ರಗ್ಧರಾ ವೃತ್ತ ಪದ್ಯಗಳಿಲ್ಲ. ಪಂಡಿತರನ್ನು ಮೆಚ್ಚಿಸುವ ಸಲುವಾಗಿ ಹಾಗೂ ಇದೊಂದು ಮಹಾಕಾವ್ಯವೆಂದು ಗುರುತಿಸಲೆಂಬ ಉದ್ದೇಶದಿಂದ ವೃತ್ತಗಳನ್ನು ಬಳಸಿರಬೇಕೆನಿಸುತ್ತದೆ. ಈ ವೃತ್ತಗಳ ಭಾಷೆಯಿಂದ ಕವಿ ಸಂಸ್ಕೃತ ಭಾಷೆಯಲ್ಲಿ ಪ್ರಭುತ್ವ ಹೊಂದಿದ್ದಾನೆ ಎನಿಸುತ್ತದೆ.

**ಛಂದಸ್ಸು**

ಸೊಬಗಿನ ಸೋನೆ ಕಾವ್ಯದ ಛಂದಸ್ಸು ಸಾಮಾನ್ಯವಾಗಿ ಎಲ್ಲಾ ವಿಷ್ಣುಗಣಗಳೇ ಇರುತ್ತವೆ. ಅಂದರೆ ೧ ಮತ್ತು ೩ನೇ ಸಾಲಿನಲ್ಲಿ ನಾಲ್ಕು ವಿಷ್ಣುಗಣಗಳು ಮತ್ತು ೨ ಮತ್ತು ೪ನೇ ಸಾಲಿನಲ್ಲಿ ೩ ವಿಷ್ಣು ಗಣಗಳು ಇರುವುದನ್ನು ಗಮನಿಸಬಹುದು. ಉದಾಹರಣೆಗೆ.

ಕರದನರಸ ವಿಕ್ರಮನೆಂದು ಕೀರ್ತಿಯ
ಪರಿಮಳದಿಂದ ಮೂಜಗವನು
ಪೊರೆವನೆಂದಜೆವರಿಟ್ಟರು ಜಸಗಂಪನೆಂ
ಬೆರಡನೆ ಪೆಸರನಾ ಕುವರಗೆ (೪/೨೩)

ಆದರೆ ಕೆಲವೊಮ್ಮೆ ವಿಷ್ಣುಗಣಕ್ಕೆ ಬದಲಾಗಿ ಬ್ರಹ್ಮ ಇಲ್ಲವೆ ರುದ್ರಗಣ ಬಂದಿರುವುದುಂಟು. ಉದಾಹರಣೆಗೆ.

ಅಜೆದು ಮಜೆದುವೊಮ್ಮೆನೆನವವರೆಡರನು।
ಪಜೆದಿಕ್ಕಿಬಯಸುವಸುಖವನು।
ಕಜಿವ ತ್ರಿಯಂಬಕದೇವರ। ಹೆಮ್ಮಗನಪ್ಪ
ತೊಜಿಂಗಲ ಬೆನಕಗೆ ಶರಣೆಂಬೆ (೧/೫)

೧/೪೯, ೫೨, ೧೨/೪೦ ಮುಂತಾದ ಪದ್ಯಗಳನ್ನು ಗಮನಿಸಬಹುದು. ಬ್ರಹ್ಮಗಣಕ್ಕೆ ಉದಾಹರಣೆಯಾಗಿ ೧/ ೮, ೯, ೧೧, ೧೫, ೧೬, ೧೭, ೧೮, ೧೯, ೨೦, ೨೨ ಮುಂತಾದ ಪದ್ಯಗಳಲ್ಲಿ ಬೇರೆ ಬೇರೆ ಸ್ಥಾನಗಳಲ್ಲಿ ಬ್ರಹ್ಮಗಣ ಬಂದಿದೆ. ಇದು ಹಸ್ತಪ್ರತಿಯ ಸ್ಖಾಲಿತ್ಯಗಳಿಂದ ಗಣ ವ್ಯತ್ಯಾಸ ಆಗಿರಬಹುದೆನಿಸುತ್ತದೆ.

### ೬.೬. ಪ್ರಾಸ

ಪ್ರಾಸವಿಲ್ಲದ ಪದವು ತಾಸು ಹಾಡಿದರೇನು ಎನ್ನುವ ಸರ್ವಜ್ಞನ ಮಾತು ಗಮನಿಸಿದಾಗ ಕಾವ್ಯ ರಚನೆಯಲ್ಲಿ ಪ್ರಾಸ ಎಂತಹ ಪ್ರಾಮುಖ್ಯತೆ ಪಡೆದಿದೆ ಎಂಬುದನ್ನು ಗಮನಿಸಬಹುದು. ಪ್ರಾಸವಿಲ್ಲದೆ ಕಾವ್ಯ ರಚಿಸಿದರೆ ಅದು ಸೊಗಸಿನಿಂದ ಕೂಡಿರುವುದಿಲ್ಲ ಎಂಬುದು ಸರ್ವಜ್ಞನ ನಿಲುವಾಗಿದೆ. ಪದ್ಯವನ್ನು ಹಾಡುವಾಗ ಇಲ್ಲವೆ ನೆನಪಿನಲ್ಲಿಟ್ಟುಕೊಳ್ಳಲು ಪ್ರಾಸ ಉಪಯುಕ್ತವಾಗಿದೆ. 'ಪ್ರಾಸ' ಎಂದರೆ "ಪದ್ಯದ ನಿಯತ ಸ್ಥಳಗಳಲ್ಲಿ ಬರುವ ನಿಯತಾಕ್ಷರ, ಪದ್ಯದ ಪ್ರತಿ ಪಾದದ ಆದಿಯಲ್ಲಿ ಮೊದಲ ಎರಡು ಸ್ವರಗಳ ನಡುವೆ ಒಂದೇ ವಿಧವಾದ ವ್ಯಂಜನವಿರುವುದು. ಇದು ಹರಿ, ಕರಿ, ವೃಷಭ, ತುರಗ, ಶರಭ ಮತ್ತು ಅಜ ಎಂದು ಆರು ವಿಧ"[೫೮] ಎಂದು ಕ.ಸಾ.ಪ. ಕನ್ನಡ ನಿಘಂಟಿನಲ್ಲಿ ವಿವರಿಸಿದೆ. ಸೊಬಗಿನ ಸೋನೆ ಕಾವ್ಯ ಆದಿ ಪ್ರಾಸವನ್ನೇ ಕಡ್ಡಾಯವಾಗಿ ಅನುಸರಿಸಿ ರಚಿಸಲ್ಪಟ್ಟಿದೆ. ಅಂತ್ಯ ಪ್ರಾಸ ಕೆಲವೊಂದು ಕಡೆಗಳಲ್ಲಿ ಮಾತ್ರ ಇರುವುದನ್ನು ಕಾಣಬಹುದು.

**ಆದಿಪ್ರಾಸ**

ಕಾಳಿದಾಸಗೆ ದಾಸನಪ್ಪೆನುಳಿದ ಕವಿ
ಜಾಲವ ಜಯಯೆಂದು ಬಲಗೊಂಬೆ ೧/೧೩

ಎಲ್ಲೆ ಪ್ರಿಯೆ ಕೇಳು ತೊಳದ ಮುತ್ತು ಕರತಳಾ
ಮಳಕವೀಕಥೆ ಸೊಬಗಿನ ಸೋನೆ
ತಿಳಿಯದೆ ಸುಯ್ದು ಮಗುಳೆ ಓದಿ ಬೇಸತ್ತು
ತಲೆಗೊಡಹುವ ಕಬ್ಬದೊಳಗಲ್ಲ ೧/೨೧

ಎಲೆ ನಲ್ಲಳೆ ಸಕ್ಕಜವಿನಿಸಜೆವನ
ಬಳಕೆಯ ಬೆಳುಗನ್ನಡಿಗನ ೧/೨೨

ಬೆಳಗೆಯಿಗಳು ಕರ್ಪುದೋಂಟ ತೀವಿದ ಕೆಜೆ
ಕೊಳ ಮಡು ಕವುಂಗೇಜೆದೆಳವಳ್ಳಿ
ಫಲತೀವಿದ ನಾನಾ ತರುಗಳೊಳಾ ಪೊ
ಳಲ ಪೊಜಗು ಕಂಗೊಳಿಸಿತು ೧/೩೬

ಕಳಮಕ್ಕೆ ಕವಿವ ಗಿಳಿವಿಂಡ ಸೋವಾಡು
ವೆಳೆವೆಂಗಳೆಸದರಬಲೆ ಕೇಳ
ಒಲವಿಂದಲವ ಝುಂಕಿಸಿ ತಮ್ಮ ಮೆಲ್ಲುಲಿ
ಗಲಿಪಂತೆ ಶಾಳಿವನಗಳೊಳು ೧/೩೭

ಇಳೆಯೊಳೆಮ್ಮರಸನೊಳಿದಿರೆತ್ತಿ ಕಾದುವ
ಕಲಿಗಳಿಲ್ಲೆಂದು ಸಗ್ಗದರನು
ಕಲಹಕ್ಕೆ ಕೈವೀಸಿ ಕರವವೊಲು ಡೆಂಕಣಿ
ಗಳ ಪಳವಿಗೆಗೈಗಳೆಸವವು ೧/೪೨

ತಳಿರಡಿದಳದ ಲತೆಗೆ ಹತ್ತಿ ಕೆಂಪೇಱೆ
ತಲೆವೆಱೆ ನೇಹಗಲಹವಾಂತು
ಛಳಿವೆಟ್ಟು ಮಗಳ ಕಾಲ್ಗೆಱಗಿ ತಿಳುಪಿಗೊಡಿ
ನಲಿವ ಮಾದೇವ ಸಲಹುಗೆಮ್ಮ ೧/೬೬

ಆದಿಪ್ರಾಸವನ್ನು ಕಡ್ಡಾಯವಾಗಿ ಬಳಸಲ್ಪಟ್ಟಿದೆ. ಆದರೆ ಆದಿಪ್ರಾಸದಲ್ಲಿ 'ಲ'ಕಾರ 'ಳ'ಕಾರಗಳನ್ನು ಭೇದವಿಲ್ಲದಂತೆ ಕೆಲವೊಂದು ಕಡೆಗಳಲ್ಲಿ ಬಳಸಿರುವುದನ್ನು ಈ ಮೇಲಿನ ಉದಾಹರಣೆಗಳಿಂದ ತಿಳಿದುಬರುತ್ತದೆ.

**ಆದಿ-ಅಂತ್ಯ ಪ್ರಾಸ:** ಇಲ್ಲಿ ಆದಿಪ್ರಾಸದ ಜೊತೆಗೆ ಅಂತ್ಯ ಪ್ರಾಸವನ್ನು ಅನುಸರಿಸಲಾಗಿದೆ.

ಅಱಿದು ಮತ್ಸರದಿಂದ ಬೆರತಿಹನವ**ನೊರ್ವ**
ನಱಿಯದೆ ಚುನ್ನವಾಡುವ**ನೊರ್ವ** ೧/೯

ಪದಪದ್ಧತಿ ಹೋಲುವ **ಬಿನ್ನಣ ರೀತಿ**
ಚದುರತೆ ಬೆಡಗು **ಬಿನ್ನಣ ರೀತಿ** ೧/೧೪

ಕೇಳಿದ ಸಭೆ ತಲೆದೂಗಿಯಱ**ಕವ**
ಟ್ಟಾಲಿಸದಂತೆ ಮೈಪುಳ**ಕವ** ೧/೧೬

ಸಂಗಮೇಂದ್ರನ ಕುಲದಿಂಗಡಲಿಗೆ ನೆಱೆ
ದಿಂಗಳೆನಿಪ ಕಂಪಸುತ **ಕೇಳ**
ಕಂಗೊಳಿಸುವ ದೇಪನೃಪ ಮುನ್ನಱಿಯದ
ಮಂಗಳವಪ್ಪೊಂದು ಕಥೆ**ವೇಳ** ೧/೧೭

೧/೨೯, ೩೦, ೩೧ 'ಲ್ಲ' ಅಂತ್ಯಪ್ರಾಸವಿದೆ

ಅಂತು ಪೂಕಾಯಿವಣ್ಣಮಿಗವಕ್ಕಿ ಕೊಳಗಳು
ತಿಂಥಿಣೆಯಾಗಿರ್ದಬನದೊಳು ೩/೨೧

ನೆರದಲ್ಲಿ ಗುಜುಗುಜಿ**ಸುವ** ಬೆಱಗಾ**ಗುವ**
ಮಱವಟ್ಟಳು**ವ** ಸು**ಯಿವ** ಮಱು**ಗುವ**
ಪರಕೆಗಳ**ವ** ರಕ್ಷೆಗಟ್ಟು**ವ** ಬಲಿ**ಯೀವ**
ಬ್ಬರವಾದುದಾ ಪುರದೊಳಗಂದು ೬/೩೬

ಅಳಿವುದೊಡಲು ಜಸವಳಿಜಸವೆರಡೆ
ನಿಲುವವು ನಿಮ್ಮಡಿಗಳ **ಬಿಡೆ** ೬/೬೨
ಅಜೆಯಿರೆ ಮುನಿದಡೀರೇಳು ಲೋಕಂಗಳ
ಮುಜಿದು ಮೋದುವ **ಕೂರ್ತಡೆ ಕೇಳ** ೭/೯

ಕುಡಿತೆ ನೀರ್ಕಂದ ಕಚ್ಚುವರೆ ಮುನ್ನೀರೇಕೆ
ಸೊಡರ್ಕಳ ತವಿಸೆ ಪೆರ್ಗಿಚ್ಚೇಕೆ ೭/೧೮

ನಗುವೆ ಬೆಳ್ನಗೆಯನಾರ್ನುಡಿಸಿದಡೇ**ನೆಂಬೆ**
ಬಗೆಗಾಣೆ ಬಜೆದೆ ಹೂಹೂ**ಯೆಂಬೆ**
ಬೆಡಗಾಂತು ಕಂಡರ ವಾರತೇಯೆ**ನೆಂದು**
ಹಗರಣ ಮರುಳಂತೆ ಬೆಸ**ಗೊಂಬೆ** ೧೨/೬೪

ಹರಿಯನೆ ಶಂಖಚಕ್ರಾಂಕಿತ **ಶಿವನೆನೆ**
ಸುರಸಿಂಧುಧರನಬ್ಜ**ಭವನೆನೆ** ೧೫/೩೫

ವಣಿಜರ ಮರ್ಮಜ್ಞರ **ವಾಗುರಿಗರ**
ಮಣಿಗಾಜಿರ **ಮಾಂದುರಿಗರ** ೨೩/೧೭

ಈ ಮೇಲಿನ ಉದಾಹರಣೆಗಳಲ್ಲಿ ಅಂತ್ಯಪ್ರಾಸವು ಎರಡೆರಡು ಸಾಲುಗಳ ಒಂದು ಘಟಕದಲ್ಲಿ ಪಾಲಿಸಿಕೊಂಡು ಬಂದಿರುವುದು ಸ್ಪಷ್ಟವಾಗುತ್ತದೆ.

ಈ ಉದಾಹರಣೆಗಳಿಂದ ಕನ್ನಡ ಕಾವ್ಯಗಳು ಸಾಂಪ್ರದಾಯಿಕವಾಗಿ ಪಾಲಿಸಿಕೊಂಡು ಬಂದಿರುವ ಪ್ರಾಸದ ನಿಯಮಗಳನ್ನು ಕಡ್ಡಾಯವಾಗಿ ಅನುಸರಿಸಿರುವುದು ಸ್ಪಷ್ಟವಾಗುತ್ತದೆ.

### ೬.೭. ಅಲಂಕಾರ

ಕವಿಗಳು ತಮ್ಮ ಕಾವ್ಯದ ಭಾಷೆ ಸೊಗಸಾಗಿ ವ್ಯಕ್ತಗೊಳ್ಳಲು ಅಲಂಕಾರಗಳನ್ನು ಬಳಸಿಕೊಂಡು ಬಂದಿದ್ದಾರೆ. ಕನ್ನಡ ಕೈಪಿಡಿಯಲ್ಲಿ ಅಲಂಕಾರ ಕುರಿತು "ಸಾಹಿತ್ಯದಲ್ಲಿ ಅಲಂಕಾರವೆಂದರೆ ಅನುಪ್ರಾಸ ಉಪಮೆ ಮುಂತಾದ ಶಬ್ದಾರ್ಥ ವೈಚಿತ್ರ್ಯಗಳೆಂದು ಒಂದು ಅರ್ಥ. ಕಾವ್ಯದಲ್ಲಿರುವ ಸೌಂದರ್ಯ ಎಂದು ಮತ್ತೊಂದು ಅರ್ಥ"[೫೯] ನೀಡಿದೆ. ವ್ಯವಹಾರಿಕ ಭಾಷೆಯನ್ನು ಹೊರತುಪಡಿಸಿ ಕಾವ್ಯದಲ್ಲಿ ಅಲಂಕಾರಗಳು ಮೂಡಿಬರುತ್ತವೆ. ಕವಿ ತನ್ನ ಭಾವನೆಗಳ ಸ್ಪಷ್ಟತೆಗಾಗಿ ಮತ್ತು ಅವು ಓದುಗರಲ್ಲಿ ರಸಾನಂದ ಉಂಟುಮಾಡುವಲ್ಲಿ ಅಲಂಕಾರಗಳನ್ನು ಅವಲಂಬಿಸುತ್ತಾನೆ. ದೇಪರಾಜ ಕಥೆಯ ವರ್ಣನೆಯನ್ನು ಮಾಡುವಾಗ ಅಲಂಕಾರಗಳನ್ನು ಬಳಸಿಕೊಂಡಿದ್ದಾನೆ. ಕೆಲವೊಂದು ಅಲಂಕಾರಗಳನ್ನು ಈ ಮುಂದಿನಂತೆ ಗಮನಿಸಬಹುದು.

ಶಬ್ದಾಲಂಕಾರಗಳಲ್ಲಿ ಛೇಕಾನುಪ್ರಾಸ, ವೃತ್ತ್ಯಾನುಪ್ರಾಸ, ಯಮಕಗಳನ್ನು ಪದ್ಯಗಳೊಂದಿಗೆ ತಿಳಿಸಿದೆ. ಅರ್ಥಾಲಂಕಾರಗಳಲ್ಲಿ ಉಪಮೆ, ಉತ್ಪ್ರೇಕ್ಷೆಗಳನ್ನು ತಿಳಿಸಿದೆ.

**ಛೇಕಾನುಪ್ರಾಸ:** "ಶಬ್ದಾಲಂಕಾರಗಳಲ್ಲಿ ಒಂದು ಪ್ರಕಾರ ಅನುಪ್ರಾಸ. ಅನುಪ್ರಾಸದಲ್ಲಿ ಎರಡು ಅಕ್ಷರಗಳು ಜತೆಜತೆಯಾಗಿ ಹಲವು ಕಡೆ ಬಂದರೆ 'ಛೇಕಾನುಪ್ರಾಸ'ವೆಂದೂ ಹೆಸರು."[೬೦]

**ಕಂ**ಜಜ **ಕಂಜಾ**ಕ್ಷನತ ಮಂಜುಳಪಾದ
**ಕಂಜ**ಕುಂಜರ ದೈತ್ಯಭಂಜನ
ನಂಜು ಭಾಜನ **ಕಂಜ** ಬಾಂಧವ ರಾಜಧ
ನಂಜ**ಯಾಂಬಕ ತ್ರಿಯಂಬಕ** ಜಯ ೧/೩

ಜಡಿ**ನುಡಿ**ಯುಯ್ಯಲೆಗಳೊತ್ತು ಬಿಗಿಕಟ್ಟು
ಕಡು**ನುಡಿ** ಕರ್ಬುಜೂಜುಗಳಲ್ಲಿ
ಬಡ**ನುಡಿ** ನಡುಗಳೊಳಲ್ಲದೆಯಾ ನೆಲ
ದೆಡೆಯಲ್ಲಿ ಬಿಜೆವಾತುಗಳಿಲ್ಲ ೧/೩೦

**ಉಲಿಯವು** ಪಿಕಗಳೋದವು ಗಿಳಿ ಪಾರಿವ
**ಕೆಲೆಯವು** ಮೊರೆಯವಾಜಿಡಿಗಳು ೨/೧೧

**ಮೊರೆದವು** ದೇವದುಂದುಭಿಯರಳಿನ ಸರಿ
**ಸುರಿದವು** ರಾಯನ ಪಿತೃಗಳು ೩/೮

ಅಳಿಯಿಲ್ಲದರಳರಳಿಲ್ಲದ **ಲತೆ ಲತೆ**
ಬಳಸಿ ಪರ್ಬಿದ **ಫಲಿತೊಳ್ಗೊಂಬು**
**ಫಲಿತೊಳ್ಗೊಂಬಿಲ್ಲದ** ಮರ ಮರಸುತ್ತ
ಬೆಳೆಯದ ಕೊಳನಿಲ್ಲ ಬನದೊಳು ೩/೧೪

**ಓಂಕಾರ** ಮಾರಮಂತ್ರದ ಕಬ್ಬುವಿಲ್ಲನ
**ಟಂಕಾರ** ಕಾಮನ ಕೊಳಲಿನ ೩/೨೦

**ಕವಿಕವಿ**ಯಲೆಲೆ ತೊಲಗದಿರಿ ಸಿಂಗವಿ
ದವಗಡಿಗನು ಕೈಮಾಡದೆ
ಅವನಿಪನಿರ್ದ ತಾಣಕ್ಕೆ **ಹೊಡೆಹೊಡೆ**ಯೆಂ
ದವರು ಮಗುಳೆ ಮುಕ್ಕುರಿದರು ೫/೪೯

ಮತ್ತೆ ಕೇಳದು **ಕೆಲ**ಬರ ಕೂರುಗುರಿಂದ
ಕತ್ತರಿಸಿತು **ಕೆಲಕೆಲ**ಬರ
ನೆತ್ತರನೀಂಟ **ಕೆಲ**ರ ಕವಿಕವಿದಟ್ಟಿ
ತೊತ್ತಳದುಳಿದುದು ಜಸಗಂಪ ೫/೫೦

ಹಾ ಹಾ **ಹಸಿದೆ ಹಸಿದೆ** ನೀಡು ನೀಡೆನ
ಗಾಹುತಿಯೇನೆಂದು ಬೆಸಗೊಳ್ಳ ೬/೩೦

**ಅಲ್ಲಲ್ಲಿ** ಶಾಂತಿಕರ್ಮವ ಮಾಡಿಸುವರಂ
**ತಲ್ಲಲ್ಲಿ** ಹೋಮವ ಬೇಳ್ವರು
**ಅಲ್ಲಲ್ಲಿ** ದೈವಜ್ಞರ ಬೆಸಗೊಂಬ ಮಾ
**ತಲ್ಲದೆ** ಬೇರೆ ಕಜ್ಜಗಳಿಲ್ಲ ೬/೩೫

**ಜಯ ಜಯ** ಮಾತೆಯಂಬಿಕೆ ಶಕ್ತಿ ಸಾವಿತ್ರಿ
**ಜಯ ಜಯ** ರಕ್ತರಣಪ್ರಿಯೆ
**ಜಯ ಜಯ** ವೀಣಾವತಿ ಮಾಧವಿ ಯಕ್ಷಿ
ಣಿಯೆ ಕಿನ್ನರಕುವರಿಯೆ **ಜಯ** ೯/೪೦

ಪದ್ಯ ೯,೪೦, ೯/೪೧, ೪೨,೪೩,೪೪ ವರೆಗೆ ಇರುವ ಒಂದೊಂದು ಪದ್ಯದಲ್ಲಿ 'ಜಯ' ಎಂಬ ಶಬ್ದ ಏಳು ಇಲ್ಲವೆ ಒಂಬತ್ತು ಬಾರಿ ಪುನರಾವರ್ತನೆಯಾಗಿದೆ.

ಎನ್ನಯ್ಯಯೆನ್ನಾಳ್ದನೆ ಯೆನ್ನ ಸೊಕ್ಕಾನೆ
ಯೆನ್ನಱಕೆಯೊ ಯೆನ್ನೊಲವೇನು
ಎನ್ನಳ್ತಿಯುಸುರುಸುರೆಂದನ್ನ ಬಿಗಿಯಪ್ಪಿ ಭೂ
ಭೃನ್ನಾಥ ಕೇಳು ಕೇಳ್ದಳು ಮಾತೆ ೧೬/೮೦

**ಮೃಗಗಳ ಮೃಗಮಾಂಸವ ಮೃಗಚರ್ಮವ**
**ಮೃಗದಂತವ ಮೃಗಶಿಶುಗಳ**
**ಮೃಗಮಸ್ತಕ ಮುತ್ತಮುಕ್ತಾ ಫಳರತ್ನವ**
ಮಿಗೆ ಮಾಱುವರೆಲ್ಲೆಡೆಯಲ್ಲಿ ೧೮/೨೨

**ನುಡಿವಕ್ಕಿಯ ನೆಲವಕ್ಕಿಯ ನಟಣೆಯ**
**ನಡೆವಕ್ಕಿಯ ಕುಣಿವಕ್ಕಿಯ**
**ಜಡೆವಕ್ಕಿ ಮೊದಲಾದ ಪಲವಕ್ಕಿ ಮಾಱುವ**
ಮಡದಿಯರೊಪ್ಪವನೇನೆಂಬೆ ೧೮/೨೪ 'ಯ' ಅಂತ್ಯಪ್ರಾಸವಿದೆ

**ಅಳಿಮಯ** ಸಾರಂಗಮಯವಂಚೆಮಯ **ಕೋ**
**ಗಿಲೆಮಯ** ಕೋಕಮಿಥುನಮಯ
**ಗಿಳಿಮಯ** ಪಾರಿವಮಯ ಸೋಗೆಮಯವಾಯಿತು
ನೆಲನೆಣ್ಣೆಸೆಯಾಗಸವೆಲ್ಲ ೨೧/೨೧

ವಣಿಜರ ವರ್ಮಜ್ಞರ ವಾಗುರಿಗರ
ಮಣಿಗಾಱರ ಮಾಂದುರಿಗರ
ಗಣಿಕೆಯರಕ್ಕರಿಗರ ಶಿಲ್ಪಿಗರ ಪೆ
ಕ್ಕಣಿಗರ ಗೃಹವೀದಿಯ ಕಂಡ ೨೩/೧೭ 'ರ' ಅಂತ್ಯಪ್ರಾಸವಿದೆ

ಇವನಮೇರೇಂದ್ರನಾಗಲಿ ವಿಷ್ಣುವಾಗಲಿ
ಶಿವನಾಗಲಿ ಕಾಮನಾಗಲಿ
ದಿವಿಜರೊಳಾವನಾಗಲಿ ವಿಕ್ರಮನಲ್ಲ
ದವನೆನ್ನ ಪಿತನೆಂದಳೆರ್ದೆಯೊಳು ೨೬/೨೭ 'ಲಿ' ಅಂತ್ಯಪ್ರಾಸವಿದೆ

**ವೃತ್ತ್ಯಾನುಪ್ರಾಸ:** "ಶಬ್ದಾಲಂಕಾರಗಳಲ್ಲಿ ಒಂದು ಪ್ರಕಾರ ಅನುಪ್ರಾಸ. ಅನುಪ್ರಾಸವೆಂದರೆ ಅಕ್ಷರಗಳ 'ಆವೃತ್ತಿ'ಯೇ ಅನುಪ್ರಾಸ, 'ಅನುಪ್ರಾಸ'ದಲ್ಲಿ ಒಂದೋ ಎರಡೋ ಮೂರೋ ಅಕ್ಷರಗಳು ಮತ್ತೆ ಮತ್ತೆ ಬಂದರೆ ಅದಕ್ಕೆ 'ವೃತ್ತ್ಯಾನುಪ್ರಾಸವೆಂದೂ, ಎರಡು ಅಕ್ಷರಗಳು ಜತೆಜತೆಯಾಗಿ ಹಲವು ಕಡೆ ಬಂದರೆ 'ಛೇಕಾನುಪ್ರಾಸ'ವೆಂದೂ ಹೆಸರು."[೨೧] ಅಂದರೆ ಒಂದು ಪದ್ಯದಲ್ಲಿ ಈ ರೀತಿಯಾಗಿ ಪುನರಾವರ್ತನೆ ಆದರೆ ಅದನ್ನು ಪ್ರಾಸಂಗಿಕವಾಗಿ ಹೇಳಲಾಗಿದೆ.

**ಕಂಜಜ** **ಕಂಜಾ**ಕ್ಷನತ ಮಂಜುಳ ಪಾದ
**ಕಂಜ**ಕುಂಜರ ದೈತ್ಯಭಂಜನ
ನಂಜುಭಾಜನ **ಕಂಜ**ಬಾಂಧವ ರಾಜಧ
ನಂಜಯಾಂಬಕ ತ್ರಿಯಂಬಕ ಜಯ೧/೩ 'ಜ', 'ಕಂ' 'ಕಂಜ' ಇವು ಪುನರಾವರ್ತನೆಯಾಗಿವೆ.

**ವಾಣಿ** **ವ**ರದೆ ವೀ**ಣಾ**ಪಾ**ಣಿ** ಬೊಮ್ಮನ
ರಾ**ಣಿ** ಗೀರ್ವಾ**ಣ** **ವ**ಂದಿತ ಪಾದೆ
ಜಾ**ಣಿ** ಕಲ್ಯಾ**ಣಿ** ಜನನಿ ಬಂದು ನೀ ಕೂರ್ತು೧/೬ 'ಣಿ' 'ವ' ಇವು ಪುನರಾವರ್ತನೆಯಾಗಿವೆ.

**ಮಡಿ**ಯೆಂಬ **ನುಡಿ** ಮಡಿವಳರಲ್ಲಿ ಎಡೆ**ವಿಡಿ**
ನಡೆಯೆಂಬ **ನುಡಿ** ದೂತೆಯರಲ್ಲಿ
ತೊಡಕೆಂಬ **ನುಡಿ** ನಾನಾ ಚಿತ್ರ ಬಂಧಗ
ಳೆಡೆಯೊಳುಂಟಲ್ಲಿ ಭಾವಿಪಡಿಲ್ಲ ೧/೩೧
'ಡಿ' ವೃತ್ತ್ಯಾನುಪ್ರಾಸ, 'ನುಡಿ' ಛೇಕಾನುಪ್ರಾಸ, 'ಲ್ಲಿ' ಅಂತ್ಯಪ್ರಾಸವಿದೆ.

ಅಂಗನೆ **ಕಂಗಳ** ಮಂಗಳೆ **ಪೊಂಗಳ**
ಸಂಗಳ ಸಿಂಗರ ಮೊಲೆಯಳೆ
ಅಂಗಜನಿಂಗಡಲಿಂಗದಿರಂಗದ
ಹೆಂಗಳ ರನ್ನವೆ ಕಥೆಗೇಳ ೩/೩
'ಗ' ವೃತ್ತ್ಯಾನುಪ್ರಾಸ, 'ಗಳ' ಛೇಕಾನುಪ್ರಾಸ, 'ಳ' ಅಂತ್ಯಪ್ರಾಸವಿದೆ

**ಮುಜಿಯೆನೆ** ಮಾಣಿಕ್ಯದ ವಿಳೆನೇಸಜಿ
**ಮಜಿಯೆನೆ** ಪೊಸ ಚಿಪ್ಪಿನಿಂದಾಗ ೪/೨೦

ಸಿರಿಯಿಂ**ದ** ಬಲದಿಂ**ದ** ಬಲುಹಿಂ**ದ** ಗೆಲವಿಂ**ದ**
ಧರೆಯಿಂ**ದ** ಜಸದಿಂದಧಟನಿಂದ
ಸರಿಯಿಲ್ಲದುಜಬಾಳಿ**ದ** ಜಯವತಿಯೆಂಬ
ಪುರದೊಳ್ ಸೌಂದರ ಪಲಪಗಲಿಂತು ೫/೩೮ 'ದ' ಪುನರಾವರ್ತನೆಯಾಗಿದೆ.

ನೋ**ಡು**ವ ಕಣ್ಮುಚ್ಚುವ ತಲೆದೂಗುವ
ಪಾಡಳಿದೊಲೆವ ಪುಳಕಿಸುವ

ಕೂಡೆ ಮಗುಳೆ ನಿಟ್ಟಪ ಬೆಮರುವನೊಬ
ದಾಡುವ ಭಕ್ತಿಯೊಳ್ಗಡಲೊಳು ೧೦/೬

ಈ ಪದ್ಯದಲ್ಲಿ 'ವ' ಪುನರಾವರ್ತನೆಯಾಗಿ ವೃತ್ತ್ಯಾನುಪ್ರಾಸವೆನಿಸಿದೆ.

ಅಳಿ ತುಳಿಯದ ಬಿಟ್ಟಲರದ ಬಂಡೋಡಿ
ಕಳಿಯದ ಮುಗುಳ್ಗಳಲ್ಲದ ಬಲ್ಪಿಂ
ದಲರ್ಚದ ಗಾಳಿಗಂ ಪಾಱದ ಪೊಸ ಬಿರಿ
ವಲರ್ಗಳ ತಂದೀವೆನನುದಿನ ೧೨/೨೭

ಈ ಪದ್ಯದಲ್ಲಿ 'ದ' ಪುನರಾವರ್ತನೆಯಾಗಿ ವೃತ್ತ್ಯಾನುಪ್ರಾಸವೆನಿಸಿದೆ.

ತೆರೆಯಿವು ನೀರ್ವಾವಿವು ಸಲಿಲದಮದ
ಕರಿಯಿವು ಜಲಗೊಳ್ವ ಮುಗಿಲಿವು
ನೊರೆಯಿವು ಶಂಕಿವು ಮುತ್ತಿವು ಸಿಡಿದ ನೀ
ರುರುಳಿಯೆಂದಱಿವರಿಗರಿದವು ೧೫/೩೧

ಈ ಪದ್ಯದಲ್ಲಿ 'ವು' ಪುನರಾವರ್ತನೆಯಾಗಿ ವೃತ್ತ್ಯಾನುಪ್ರಾಸವೆನಿಸಿದೆ.

ಪಾಡುವಾಡುವ ಪೊಗಳುವ ಮಱಹವಾಂತೊಡಲ್
ನೀಡುವ ಪೊಂಗಿ ಪೊಂಪುಳಿವೋಪ
ನೋಡುವ ಬಲವಂದುಬ್ಬುವ ಕೊಬ್ಬುವ
ಗಾಡಿಯಬ್ಬರವಪ್ಪುದಾಗಲ್ಲಿ ೧೫/೪೫

ಈ ಪದ್ಯದಲ್ಲಿ 'ವ' ಪುನರಾವರ್ತನೆಯಾಗಿ ವೃತ್ತ್ಯಾನುಪ್ರಾಸವೆನಿಸಿದೆ.

ಈಯಜೆವೀ ವಾಗ್ವಿಸ್ತರ ವೀಗುಣ
ವೀಯರ್ಪಿತ ವೀಕಳೆಯೀನಯಾ
ಈಯಿಂಪು ಚಿತ್ತ ಸಾರ್ದಂದವನಱುಪೆಂದು
ರಾಯನಾ ಪಕ್ಕಿಗೆಂದನು ಪ್ರಿಯೆ ೧೬/೧೮

ಈ ಪದ್ಯದಲ್ಲಿ 'ಈ' ಪುನರಾವರ್ತನೆಯಾಗಿ ವೃತ್ತ್ಯಾನುಪ್ರಾಸವೆನಿಸಿದೆ.

ಕಾವವಡೆಯೊ ಕರ್ವುವಿಲ್ಲಣೆಯಾ ಪೊಸ
ಪೂವಿನೋಳಿಯಾ ಪೊಂಪುತ್ಥಳಿಗಳ
ದಾವಣಿಯೊ ಥಾಳಿಪ ಮಿಂಚಿನೇಳ್ಗೆಯ
ಲಾವಣಿಯೊ ಲತಾಂಗಿಯರೊಗ್ಗೊ ೨೧/೧೯

ಈ ಪದ್ಯದಲ್ಲಿ 'ಯೋ' ಪುನರಾವರ್ತನೆಯಾಗಿ ವೃತ್ತ್ಯಾನುಪ್ರಾಸವೆನಿಸಿದೆ.

ಗರ್ಭದ ಮರ್ಬಿಂದ ದುರ್ಬೋಧೆಯುರ್ಬಿಂದ
ಪರ್ಬಿದ ಸಿರಿಯ ಪೆರ್ಗರದಿಂದ
ಕರ್ಬೊನ್ನ ಕಱುವಿನಂತಿಟ್ಟಸರಾಲಿಸರ್
ನಿರ್ಬಂಧಿಸರೊಮ್ಮೆ ನುಡಿಯರು ೨೧/೪೭

**ಮಂ**ಡಿಸಿದನು **ಮಂ**ಜುಗುಣ ಮಣಿಗಣ ಫಣಿ
**ಮಂ**ಡಿತ **ಮಂ**ಚದೊಳೊಯ್ಯನೆ ೨೩/೩೩
ಈ ಪದ್ಯದಲ್ಲಿ 'ಮಂ' ಪುನರಾವರ್ತನೆಯಾಗಿ ವೃತ್ತ್ಯಾನುಪ್ರಾಸವೆನಿಸಿದೆ.

ಉಲಿ**ವ** ಕೊಳ**ವ** ನೋಡು**ವ** ಗಿಳಿ ಮೊರವಳಿ
ಕೆಲ**ವ** ಪಱಮೆ ಕೇಗು**ವ** ಸೋಗೆ ೨೪/೮
ಈ ಪದ್ಯದಲ್ಲಿ 'ವ' ಪುನರಾವರ್ತನೆಯಾಗಿ ವೃತ್ತ್ಯಾನುಪ್ರಾಸವೆನಿಸಿದೆ.

**ಯಮಕ:** "ಶಬ್ದಾಲಂಕಾರಗಳಲ್ಲಿ ಒಂದು ಪ್ರಕಾರ ಯಮಕ, ಮೂರು ಅಥವಾ ಅದಕ್ಕಿಂತ ಹೆಚ್ಚಿನ ಅಕ್ಷರಗಳುಳ್ಳ ಪದವೋ, ಪದಭಾಗವೋ ಒಂದು ಪದ್ಯದ ಆದಿ ಮಧ್ಯ ಅಂತ್ಯ ಈ ಸ್ಥಾನಗಳಲ್ಲಿ ನಿಯತವಾಗಿ ಪುನಃ ಪುನಃ ಬಂದರೆ ಅದಕ್ಕೆ ಯಮಕವೆಂದು ಹೆಸರು."[೬]

**ಕಂದನೆ ಜೋ** ಕಣ್ಣಿಗೆ ಮಧುಋತುಮಾ
**ಕಂದನೆ ಜೋ** ನಾರಿ ಹೃದಯಕೆ
**ಕಂದರ್ಪನೆ ಜೋ** ವಂಶೋರ್ಜಿತ ತಿಲಕಾ
**ನಂದಜೋ**ಯೆಂದು ಪಾಡಿದರಂದು ೪/೨೯

ಗುರುವಿ**ನಾಜ್ಞೆಯ** ಶಿಷ್ಯನು ಪಿತ**ನಾಜ್ಞೆಯ**
ವರಸುತನೊಡಯ**ನಾಜ್ಞೆಯ** ಬಂಟ
ಪುರುಷ**ನಾಜ್ಞೆಯ** ಹೆಂಡತಿ ಮೀಱಿ ರೌರವ
ನರಕ ತಪ್ಪದು ಕೇಳೆಂದ ೬/೬೫

**ಸುಮನೋ ಮಕರಂದ ಸಂದೋಹ** ಕಾಸಾರ
**ಸುಮನೋ ಮಕರಂದ ಸಂದೋಹ**
**ಕಮಲ ಕುವಲಯ ವಿರಾಜಿತ** ಕಣ್ಗೆದು
**ಕಮಲ ಕುವಲಯ ವಿರಾಜಿತ** ೧೧/೧೧

**ಕುಮುದ ಕುಮುದ ಕುಮುದೇಶ** ಜನನ ವಾರ್ಧಿ
**ಕಮಲ ಕಮಲ ಕಮಲಾಶ್ರಯ**
**ವಿಮದ ವಿಮದ ವಿಮದಾಶ್ರಯಮಿಂತಿದು**
**ಹಿಮ ಹಿಮ ಹಿಮರೋಚಿ** ಕಾಸಾರ ೧೧/೧೨

**ಸುಮನೋ**ಹರ ಗಾತ್ರಗೆ ಬಿಡದಾನೀವೆ
**ಸುಮನೋ**ಜಾತ ವಂಶನೆ ಕೇಳ
**ಸುಮ**ನೈಕ್ಯವ ನೋಡಿ ಸುರಭಿಶೇಖರನೆಂದು
**ಸುಮನೇ**ಶನೆನೆಗೆ ನಾಮವನಿತ್ತ ೧೨/೨೮

ಅರಲ್ **ಬೀಯದ** ಸಂಪಗೆ ತಳಿರ್ **ಬೀಯದ**
ಸಿರಿಖಂಡ ಕಾಯ್ **ಬೀಯದ**ಿಮ್ಮಾವು
ಪರಿಮಳ**ಬೀಯದ**ಲರು ರಸ **ಬೀಯದ**
ಸರವರವೆಸದವೆಲ್ಲೆಡೆಯೊಳು ೧೪/೪೦

ಪಿಂದೈತಪ್ಪನೆಂಬೆನೊ ತಾಯಿ ಕೇಳ್ದಡೆ
ಮುಂದಾಗಲೆಯ್ತಂದನೆಂಬೆನೊ
ನೊಂದೆನೆಂಬೆನೊ ಬೆಂದನೆಂಬೆನೊ ತಾ ನುಂಗಿ
ಬಂದೆನೆಂಬೆನೊ ಬಾಯಾಲುವೆನೆಂತೊ ೧೫/೮೯

ಅಲರ್ಗಂಗಳೆ ನಿಡುಗಂಗಳ ತುಱುಗೆವೆ
ಯೊಳುಗಂಗಳ ಸೋಗೆಗಂಗಳ
ತಳಪಗಂಗಳ ಚಲ್ಲೆಗಂಗಳೆ ಸಳುಗಂಗ
ಳೆಳವೆಂಡಿರೆಸದರೆಲ್ಲೆಡೆಯೊಳು ೨೧/೧೭

ಮೊಳೆಮೊಲೆಯರು ಪರಲ್ಮೊಲೆಯರು ಬೆಳಗಾಯಿ
ಮೊಲೆಯರು ಮುಗುಳ ಪೊಂದಾವರೆ
ಮೊಲೆಯರು ತೆಂಗಾಯಿ ಮೊಲೆಯರಲ್ಲದ ಹೆಂ
ಗಳ ಕಾಣೆನವಳಾಳಿಯರೊಳು ೨೧/೧೮

**ಉಪಮೆ:** ಅರ್ಥಾಲಂಕಾರಗಳಲ್ಲಿ ಒಂದು ಅಲಂಕಾರ. ಉಪಮೇಯಗಳನ್ನು ವರ್ಣಿಸುವಾಗ ಕವಿ ಸ್ಪಷ್ಟತೆಗಾಗಿ ಉಪಮಾನಗಳನ್ನು ಬಳಸಿ ವರ್ಣಿಸಿರುವುದು ಮತ್ತಷ್ಟು ಸೊಬಗು ಬಂದಿದೆ. ಸೊಬಗಿನ ಸೋನೆ ಕಾವ್ಯದಲ್ಲಿ ಅನೇಕ ಕಡೆ ಉಪಮೆಗಳನ್ನು ಬಳಸಿದೆ. ಉದಾಹರಣೆಗೆ ಕೆಲವೊಂದು ಈ ಕೆಳಕಂಡಂತೆ ಗಮನಿಸಬಹುದು.

ತುಱುಚೆಂಗಂಡಂಜಿ ಸೋಂಕದೆ ತೊಲಗುವವೊಲು...ನಾ
ನೆಱಗುವೆ ಮುನ್ನ ಖೂಳರಿಗಂಜಿ ೧/೧೧

ಯುವತಿಯ ಕಳೆಯನಱಿದು ಜಾಣವಿಟನನು
ಭವಿಪವೊಲಱಿವನೆನರಪಶು
ಕವಿತೆಯ ರಸವನಂತಱಿವ ರಸಿಕನಲ್ಲ
ದವಗುಣಿಯಱಿದು ಸುಖಿಸುವನೆ ೧/೧೨

ತೆಗದ ಬಗೆಗೆ ಬಪ್ಪೊಲು ಚಿತ್ರ ಮೇಲೆ ಮೇ
ಲೊಗುವೊಲು, ಕೇಳ್ವಕೋವಿದರಿಗೆ
ಸೊಗಸೂಱಿವೊಲು ಸಕ್ಕಜ ಕನ್ನಡವೊಪ್ಪೆ
ನಗೆಮೊಗದನೆ ಬಂದು ಕಥೆವೇಳ ೧/೧೮

ಆ ನೆಲ ವೆಣ್ಣೆಟ್ಟಯಿದೆ ದಾಳಿಯವೊಲು
ತಾನೆಸವುದು ಸಸಿವೊಳಲೆಂಬ ೧/೩೨

ಎಲರಾಡದ ಬನದಂತಿದೆ ಸೊಬಗುಳ್ಳ
ಕೆಳೆಯಕೋವಿದ ೨/೧೮
ಪುಟವಿಟ್ಟ ಮಿಸುನಿಯ ಪೊಸ ಪುತ್ಥಳಿಯಂತೆ ೩/೬

ರನ್ನದೊಳಿದ್ದಲಹರಿ ಪೊಳೆವೊಲು ಪೊಸ
ಪೊನ್ನೊಳೊಪ್ಪುವ ಮಿನುಗಿನೊಲು
ಚೆನ್ನೆಯ ತೆಳುವಸುಜೊಳು ಬೆಳೆವೆಳೆ ಗರ್ಭ
ಜೊನ್ನದುರುಳಿಯಂತೆ ಪೊಳೆದುದು ೪/೧೫

"...... ಕಾರ್ಮುಗಿಲಿಂದ ಕೆನ್ನೀರು ಸುರಿವೊಲು ಸೂಸಿತು ಬಿಸಿರಕ್ತ" ೭/೪೮

ಮದನನಸಿಯ ಬೆಳಗುವವೊಲು ಮೈಗೆ ಪೂ
ಸಿದೆಯೇಕೆ ಪೊಸಭಸಿತವ ನೀನು
ಚದುರೆ ಕೇಳ್ತನುಪಾಶದವೊಲು ಜಡೆಗ
ಟ್ಟದ ಕಾರಣವ ಪೇಳನಗೆಂದ ೮/೧೩

ಜೊನ್ನದ ದೇವತೆಯೊಲು ಪಾಲ್ದುಳುಕುವ
ಮುನ್ನೀರೊಳಗೆವ ಸಸಿಯವೊಲೂ
ಚೆನ್ನೆ ಬಸಂತೆಯಿದ್ದಳು ಕುಹಳನ ತೊಡೆ
ಯನ್ನೇಜೆದು ಗಲವಸನವಾಂತು ೮/೧೯

ಮಸುಳಿದ ಮೊಗಕೆ ಮೇಲುದನಿಟ್ಟು ಮಗ್ಗುಲ
ಮಿಸುಕಳು ಪೊಸೆದೀಡಾಡಿದ
ಅಸುಗೆಯಲರ ಮಾಲೆಯವೊಲುಕಳಲ್ದುಚಿಂ
ತಿಸಿ ನಸುದೂಕಡಿಸಿದಳಾಗ ೮/೩೭

ಮೂಡವೆಣ್ಣಿನ ಬೈತಲೆಯ ಮಾಮಣಿಯೊಲು
ಮೂಡಿತು ಮುನ್ನೇಸಱಬಟ್ಟು ೧೦/೨೭

ಪಂದಿಯೊಳ್ಸರಿಗವಡೆಯಾಡುವವೊಲೊದಗಿದರಾಗ ೧೨/೫

ಕಾಲಮೃತ್ಯುವೆ ರೂಪುವಡೆದಂತೆ ೧೨/೬

ಬಿಲ್ಲಾಂತು ಬೇಡ ಮುಂದಿರೆ ಪಿಂತೆ ಪುಲಿಯಿರ್ದ
ಪುಲ್ಲೆಯೊಲಾಂ ಕೂಳ್ಗುದಿಗೊಂಡೆ ೧೨/೩೭

ಮೇಲಹಿಯಡರ್ದ ಚಂದನವಲ್ಲರಿಯಂತೆ
ಹಾಲಾಹಲವಿರ್ದಮೃತವ
ಸೋಲಿಪೊಲ್ಕಾಯಿಪು ಮುಸುಕಿದಳಕಂಡೆನು
ಶೈಲೇಂದ್ರ ಚಂದ್ರ ನಂದನೆಯನು ೧೨/೭೫

ರಸತೀವಿದ ಪಲತೆಱದಿನಿವಣ್ಗಳ
ನೊಸೆದೂಡಿ ನೆರೆದಿಂಗಳೊಸರ್ವಂತೆ ೧೪/೨೪

...ತಂಗೊಳಗಾಳಿಯಿಂಪು ಮುಂ ಪಡೆದವೊಲಾಯಿತು ೧೪/೨೭
ತುಪ್ಪವೊಕ್ಕಣಲ್ ಬೆಂದ ವೊಲಾಯ್ತು ಮರಳ್ದೆನು ೧೫/೮೪

ಮಱದಱದೊಮ್ಮೆ ಕಂಡುದ ಕೇಳ್ದುದೆನ್ನೆರ್ದೆ
ದೆಱಪಿನೊಳ್ ಬೆಚ್ಚಂತಿರಲದು
ಮೆಱೆಯಿಡೆ ಪೋಗಿ ನಿಟ್ಟಿಸಿ ತೋರ್ಕುಕೈಪಿಡಿ
ಗೆಱಗಿದ ಮಾರ್ಪೊಳಪಿನೊಳೆಲ್ಲ ೧೬/೧೫

ನೇಸಱ ಮುಗಿಲ್ಮುಸುಕುವೊಲಗ್ಗಿಯ ಪೊಗೆ
ಬಾಸಣಿಪ ವೊಲೆನ್ನೆಱೆವುರ್ವು
ಏಸಿರಲಳಲ್ಕವಿದುರುಪಿದು ದರಳೆಯ
ರಾಸಿಯೊಳ್ಕಿಱುಗಿಡಿ ಬಿರ್ದಂತೆ ೧೬/೬೪

....ಬಲುರಭಸಕೆ ಕಾದುಕ್ಕಿನ
ಹಳಿಯನೊಡಲೊಳ್ಳಿವಿಟ್ಟಂತೆ
ತಳವೆಳಗಾದೆವಯ್ಯನ ಬಂಧಿಯ ಹೊಯಿ
ಲ್ದಳದವನಾಗಿ ೧೭/೯

ಅಱಸುವ ನಿಧಿಯುರುಳ್ತಂದ ವೊಲ್ಕನಸಿನೊ
ಳುಱೆ ತಳ್ತ ಸಿರಿ ಕೈಸಾರ್ದೊಲು
ಅಱತವೆನೆಡೆಗಂದಮರ್ದಿನ ಸರಿ ಮುಂ
ಗಱದವೊಲಾಯಿತಂಗಜರೂಪ ೧೭/೧೩

...ಎಳೆನೇಸಱ ಕಿರಣದ್ಯುತಿ
ಯೊಳು ಪೊರೆದೊಪ್ಪವಿಟ್ಟವೊಲಿರ್ಪ
ಪೊಳವ ರನ್ನವನುಗುಳ್ದು ಸುರಿದು ದಿನಕುಲ
ತಿಲಕಗೆ ಸತಿಕುಲ ತಿಲಕವೆ ೧೭/೨೧

ಪೊಳೆವೆಳೆ ಮಿಂಚಾಂತು ಮುಗಿಲ್ಗಳನಡದಿರ್ದ
ಜಲಧರ ದೇವತೆಗಳವೊಲು ೧೮/೧೫

ಮೆಲ್ಲನೆ ಮೇಗರೆಗಣ್ಣಿಟ್ಟು ನಿಟ್ಟಿಸಿ
ತಲ್ಲಣಿಸುತ ಬಿಲ್ಲನ ಕಂಡು
ಸೊಲ್ಲಿಸಲಂಜಿ ನಾನಿರೆ ಬಂದುವೊದ್ದನು
ಕಲ್ಲೆದೆಯನು ಪಾರಿ ಕೆಡವಂತೆ ೧೯/೪೭

ಈ ಎಲ್ಲಾ ಪದ್ಯಗಳಲ್ಲಿ 'ಅಂತೆ', ಅಂತೆವೋಲ್ ಎಂಬ ಹಳಗನ್ನಡದ ಉಪಮಾವಾಚಕ ಪದ ಬಳಕೆಯಾಗಿದೆ.

**ಉತ್ಪ್ರೇಕ್ಷೆ:** ಅರ್ಥಾಲಂಕಾರಗಳಲ್ಲಿ ಉತ್ಪ್ರೇಕ್ಷೆ ಒಂದು ಅಲಂಕಾರ. ಇದು ಕವಿಯ ಕಲ್ಪನೆಯನ್ನು, ಅನುಭವವನ್ನು ಅವಲಂಬಿಸಿದೆ.

ಸಿಡಿಲ್ಗುಡಿಯಿಂ ದಾಡೆಗಳ ಕರ್ಬೊನ್ನಿಂದ
ಲೊಡಲನುಕ್ಕಿನ ಸರಳುಗಳಿಂದ
ನಿಡುರೋಮಗಳ ಕಿಡಿಗಳ ಕಂಗಳ ಮಾಡಿ
ಪಡದನೀ ಪಂದಿಯ ಜವಬೊಮ್ಮ ೧೨/೧೧

ಈ ಪದ್ಯದಲ್ಲಿ ಬ್ರಹ್ಮ ಹಂದಿಯನ್ನು ಸಿಡಿಲು, ಕಬ್ಬಿಣ, ಉಕ್ಕುಗಳನ್ನು ಬಳಸಿ ನಿರ್ಮಿಸಿರಬೇಕೆಂಬ ಕವಿ ಕಲ್ಪನೆ ಅದ್ಭುತವಾಗಿದೆ.

ಕರಗಿದೆನೊ ಕಟ್ಟನೆಯರೆಬೆಂದ ಮು
ಳ್ಗೊರಡೊ ಸೊಡರ್ಗುಡಿಯಾದೆನೊ
ಸೊರಕಿತ್ತ ವೀಣೆಯೊ ಪಗಲ್ದಿಂಗಳೊ ವೊ
ಜ್ಜರ ವೆಟ್ಟಾದೆನೊ ಉಸುರ್ಗೆಟ್ಟೆನೊ ೧೨/೯

ಪಗಲಿನ ಶಶಿಲೇಖೆಯೊ ಚಿಂತಾಗ್ನಿಯ
ಹೊಗೆ ಹೊಯ್ದ ಹೊಸಹೊನ್ನ ಪ್ರತುಮೆಯೊ
ಮುಗಿದಬ್ಜವೊ ಮಾಸಿದ ಮಣಿ ಮುಕುರವೊ
ಬಗೆಗಜೆದಾದುದವಳ ಭಾವ ೧೨/೧೦೮

ಈ ಪದ್ಯದಲ್ಲಿ ಹೆಣ್ಣಿನ ಭಾವನೆಯನ್ನು ವರ್ಣಿಸಿದ್ದಾನೆ.

ನಾಗಲೋಕದಿನೊಗೆದುದೊ ಮೇಣಿಳೆಗಿಂ
ದಾಗಸದಿಂದೆಳ್ತಂದುದೊ
ಸಾಗರ ದ್ವೀಪಾಂತರದಿ ಬಂದುದೊ ನೋಡೆಂ
ದಾಗ ಮುಂದಿರಿಸಿ ಕೆಲಕೆ ಸಾರ್ದ ೧೪/೧೬

ಈ ಪದ್ಯದಲ್ಲಿ ನಾಗರಿಕ ಪಕ್ಷಿಯ ಕಲ್ಪನೆಯಿದೆ.

ತೇಜಗಳೊಬ್ಬುಳಿಯೊ ಅಣಿಯಾದಿಯ
ಬಾಜನವೊ ಮುಕ್ತಿಯ ಬೀಡೊ
ಮೂಜಗಮೋಹನುರ್ವಿಯೊ ಸಾಗರೇಶನ
ರಾಜಿಪೋಲಗವೊ ನಾನಜೆಯೆನು ೧೬/೩೮

ಈ ಪದ್ಯದಲ್ಲಿ ಸಾಗರೇಶ್ವರನ ಸಭೆಯ ಕಲ್ಪನೆಯಿದೆ.

ಕತ್ತಲೆಗಳ ಮೊತ್ತವೊ ಜಲ್ಲಿಮಿಗಕುಲ
ದೊತ್ತೊತ್ತೆಯೊ ನಡೆಬಿದಿರ್ವಿಂಡ
ಸುತ್ತಿರ್ದ ಮಿಂಚುಗಳೆನೆ ಭಟರೆಸದರು
ಬತ್ತೀಸಾಯುಧಂಗಳನಾಂತು ೧೮/೧೬

ಈ ಪದ್ಯದಲ್ಲಿ ೩೨ ಶಸ್ತ್ರಗಳನ್ನು ಧರಿಸಿದ ವೀರನನ್ನು ಕುರಿತು ಉತ್ಪ್ರೇಕ್ಷೆಯಿದೆ.

ಇಲ್ಲಿ ಶಬ್ದಾಲಂಕಾರ ಮತ್ತು ಅರ್ಥಾಲಂಕಾರ ಇರುವ ಪದ್ಯಗಳನ್ನು ಲಕ್ಷ್ಯ ಲಕ್ಷಣಗಳಾಗಿ ನೀಡಿದೆ. ಇವುಗಳಲ್ಲಿ ಕವಿ ಸಾಂಪ್ರದಾಯಿಕ ಅಂಶಗಳನ್ನೇ ಕಡ್ಡಾಯವಾಗಿ ಅನುಸರಿಸಿರುವುದು ಕಂಡುಬರುತ್ತದೆ.

**ಅಡಿ ಟಿಪ್ಪಣಿ**

೧. ತ.ಸು. ಶಾಮರಾಯ, ಮೇ. ರಾಜೇಶ್ವರಯ್ಯ (ಸಂ) ಜನಪ್ರಿಯ ಕನ್ನಡ ಸಾಹಿತ್ಯ ಚರಿತ್ರೆ, ಪುಟ-೫೪೪

೨ ಹಾ.ಮಾ. ನಾಯಕ (ಸಂ) ಕನ್ನಡ ಸಾಹಿತ್ಯ ಚರಿತ್ರೆ, ಸಂಪುಟ-೧ ಪುಟ ೭೫೭

೩. ವೀರಣ್ಣ ರಾಜೂರ, ಕನ್ನಡ ಸಾಂಗತ್ಯ ಸಾಹಿತ್ಯ, ಪುಟ-೨೦೩

೪. ಮರಿಯಪ್ಪ ಭಟ್ಟ, ಕನ್ನಡ ಸಂಸ್ಕೃತಿ, ೧೯೯೭, ಪುಟ ೨೦

೫. ಎನ್ ಬಸವರಾಧ್ಯ (ಪ್ರ.ಸಂ.) ಕಸಾಪ ಕನ್ನಡ ನಿಘಂಟು, ಸಂ.೫, ಪುಟ-೪೫೩೪

೬. ಜಿ.ಎಸ್. ಶಿವರುದ್ರಪ್ಪ, ಕೆ.ವಿ. ನಾರಾಯಣ, ಕಾವ್ಯಾರ್ಥ ಪದಕೋಶ, ಪುಟ ೨೦೨-೨೦೩

೭. ಎಸ್.ವಿ. ರಂಗಣ್ಣ ಶೈಲಿ ಪುಟ ೦೧

೮. ಬಿ.ಎಸ್. ಸಣ್ಣಯ್ಯ, ದೇಪರಾಜ ಇತಿವೃತ್ತ-ಕನ್ನಡ ಸಾಹಿತ್ಯ ಚರಿತ್ರೆ, ಪುಟ ೭೫೭

೯. ಹಂಪನಾಗರಾಜಯ್ಯ, ಸಾಂಗತ್ಯ ಕವಿಗಳು, ಪುಟ ೧೨

೧೦. ವೀರಣ್ಣ ರಾಜೂರ, ಕನ್ನಡ ಸಾಂಗತ್ಯ ಸಾಹಿತ್ಯ, ಪುಟ-೨೦೫

೧೧. ಕೆ. ನಾಗೇಂದ್ರಪ್ಪ, ಹದಿನೈದನೆಯ ಶತಮಾನದ ಕನ್ನಡ ಸಾಹಿತ್ಯ ಚರಿತ್ರೆ, ಪುಟ ೧೪

೧೨. ಹಂಪನಾಗರಾಜಯ್ಯ, ಸಾಂಗತ್ಯ ಕವಿಗಳು, ಪುಟ ೧೧

೧೩. ಬಿ.ಎಸ್. ಸಣ್ಣಯ್ಯ ಲೇ: ದೇಪರಾಜ ಇತಿವೃತ್ತ-ಕನ್ನಡ ಸಾಹಿತ್ಯ ಚರಿತ್ರೆ, ಸಂಪುಟ ೫, ಪುಟ ೭೫೬

೧೪. ಎಂ.ವಿ. ಸೀತಾರಾಮಯ್ಯ-ಭಾರತೀಯ ಕಾವ್ಯಮೀಮಾಂಸೆಗೆ ಕನ್ನಡ ಕವಿಗಳ ಕೊಡುಗೆ ಪುಟ ೫೫, ೫೬

೧೫. ಕೆ. ನಾಗೇಂದ್ರಪ್ಪ, ಹದಿನೈದನೆಯ ಶತಮಾನದ ಕನ್ನಡ ಸಾಹಿತ್ಯ ಚರಿತ್ರೆ, ಪುಟ ೧೫

೧೬. ಎಂ. ಮರಿಯಪ್ಪಭಟ್ಟ (ಪರಿಷತ್) ಕಿಟಲ್ ಕನ್ನಡ ನಿಘಂಟು ೪ನೇ ಸಂಪುಟ ಪುಟ ೧೬೭.

೧೭. ಶ್ರೀ ಎನ್. ಬಸವರಾಧ್ಯ (ಪ್ರ.ಸಂ) ಕ.ಸಾ. ಪರಿಷತ್ ನಿಘಂಟು ಪುಟ ೮೭೧೮

೧೮. ಅದೇ ಪುಟ

೧೯. ಹಂಪನಾ (ಪ್ರ.ಸಂ.) ದ್ರಾವಿಡ ಜ್ಞಾತಿ ಪದಕೋಶ, ಕ.ಸಾ. ಪರಿಷತ್, ಬೆಂಗಳೂರು, ೨೦೧೪, ಪುಟ ೫೭೮

೨೦. ಎಂ. ಮರಿಯಪ್ಪ ಭಟ್ಟ (ಪರಿಷ್ಕೃತ) ಕಿಟಲ್ ಕನ್ನಡ ನಿಘಂಟು ೪ನೇ ಸಂಪುಟ ಪುಟ ೧೬೭೬

೨೧. ಎನ್. ಬಸವರಾಧ್ಯ (ಪ್ರ.ಸಂ.), ಕ.ಸಾ.ಪ. ನಿಘಂಟು, ಪುಟ ೮೭೩೫

೨೨. ಎನ್. ಬಸವರಾಧ್ಯ (ಪ್ರ.ಸಂ.), ಅದೇ ಪುಟ ೮೫೦೩

೨೩. ಹಂಪನಾ (ಪ್ರ.ಸಂ.) ದ್ರಾವಿಡ ಜ್ಞಾತಿ ಪದಕೋಶ, ಪುಟ ೫೭೮

೨೪. ವೀರಣ್ಣ ರಾಜೂರ, ಕನ್ನಡ ಸಾಂಗತ್ಯ ಸಾಹಿತ್ಯ, ಪುಟ ೧೦೧

೨೫. ಆರ್. ರಾಚಪ್ಪ, ಕರ್ನಾಟಕ ಭಾರತಿ, ಸಂ.೩, ಸಂಚಿಕೆ-೪,ಏಪ್ರಿಲ್೧೯೭೧ ಪುಟ-೧೧೨

೨೬. ವೀರಣ್ಣ ರಾಜೂರ, ಕನ್ನಡ ಸಾಂಗತ್ಯ ಸಾಹಿತ್ಯ ಪುಟ ೧೦೫.

೨೭ ಕೆ. ನಾಗೇಂದ್ರಪ್ಪ, ಹದಿನೈದನೆಯ ಶತಮಾನದ ಕನ್ನಡ ಸಾಹಿತ್ಯ ಚರಿತ್ರೆ ಪುಟ-೧೩, ೧೪.

೨೮ ಜಿ.ಜಿ. ಮಂಜುನಾಥನ್ (ಸಂ) ಮೋಹನ ತರಂಗಿಣಿ ಪ್ರಸ್ತಾವನೆ ಪುಟ-೧೧,೧೨.

೨೯. ಕನ್ನಡ ಕೈಪಿಡಿ ಸಂಪುಟ-೨, ಪು-೪೭೫-೪೬೭

೩೦. ಎಂ.ವಿ. ಸೀತಾರಾಮಯ್ಯ, ಡಾ.ಆರ್. ಲಕ್ಷ್ಮೀನಾರಾಯಣ (ಸಂ), ಕಾವ್ಯ ಮೀಮಾಂಸೆ ಪುಟ-೪೪೯.

೩೧. ಎನ್. ಬಸವರಾಧ್ಯ (ಸಂ), ತ್ರಿಪುರದಹನ ಸಾಂಗತ್ಯ, ಪ್ರಸ್ತಾವನೆ ಪುಟ. V, VI

೩೨. ಬಿ.ಎಸ್. ಸಣ್ಣಯ್ಯ (ಲೇ) ಸಾಂಗತ್ಯದ ಆದಿಕವಿ ದೇಪರಾಜ-ಇಕ್ಷುಗಂಗಾ ೧೯೭೦ ಪುಟ, ೧೪೦

೩೩.ಹಂಪನಾಗರಾಜಯ್ಯ ಸಾಂಗತ್ಯ ಕವಿಗಳು ಪುಟ ೧೦

೩೪. ಆರ್. ನರಸಿಂಹಾಚಾರ್ಯ-ಕರ್ಣಾಟಕ ಕವಿಚರಿತೆ ಸಂಪುಟ ೨. ಪುಟ ೪೩

೩೫. ಡಿ.ಎಸ್. ಕರ್ಕಿ, ಕನ್ನಡ ಛಂದೋವಿಕಾಸ ಪುಟ ೨೧೩

೩೬. ಅದೇ ಪುಟ ೨೧೭, ೨೧೮

೩೭. ಅದೇ ಪುಟ ೨೧೭

೩೮. ತ.ಸು. ಶಾಮರಾಯ, ಮೇ. ರಾಜೇಶ್ವರಯ್ಯ, ಜನಪ್ರಿಯ ಕನ್ನಡ ಸಾಹಿತ್ಯ ಚರಿತ್ರೆ, ಪುಟ-೫೪೪

೩೯. ಸೇಡಿಯಾಪು ಕೃಷ್ಣಭಟ್ಟ, ಪೂರ್ವೋಕ್ತ ಪುಟ ೧೪, ೧೯

೪೦. ಜಿ.ವರದರಾಜರಾವ್, ಕುಮಾರರಾಮನ ಸಾಂಗತ್ಯಗಳು ಪುಟ ೩೫೧

೪೧. ರಂ.ಶ್ರೀ ಮುಗಳಿ, ಪ್ರಾಚೀನ ಕನ್ನಡ ಸಾಹಿತ್ಯ ರೂಪಗಳು ೧೯೯೭, ಪುಟ ೨೪೫

೪೨. ಟಿ.ವಿ. ವೆಂಕಟಾಚಲಶಾಸ್ತ್ರಿ, ಕನ್ನಡ ಛಂದಸ್ಸು ಪುಟ ೮೪, ೮೫

೪೩. ಎಂ. ಚಿದಾನಂದಮೂರ್ತಿ, ಛಂದೋತರಂಗ ೧೯೯೩, ಪುಟ ೧೩೨

೪೪. ಆರ್. ರಾಚಪ್ಪ, ಕರ್ಣಾಟಕ ಭಾರತಿ ಸಂ.೩, ಸಂಚಿಕೆ ೪, ಏಪ್ರಿಲ್ ೧೯೭೧, ಪುಟ ೧೦೩

೪೫. ಅದೇ ಪುಟ ೧೧೩

೪೬. ಆರ್.ಎನ್. ವಿಜಯಲಕ್ಷ್ಮೀ, ಕನ್ನಡ ಸಾಂಗತ್ಯ ಪ್ರಕಾರ ಒಂದು ಸಂಕ್ಷಿಪ್ತ ಸಮೀಕ್ಷೆ ಪುಟ ೩,೪

೪೭. ಜಿ.ಎಸ್. ಶಿವರುದ್ರಪ್ಪ (ಪ್ರಸಂ) ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಭಾಗ-೧, ಸಂಪುಟ ೪, ೧೯೭೭, ಪುಟ ೧೪೭

೪೮. ಅದೇ ಪುಟ ೧೪೦

೪೯. ಸಿ.ಪಿ. ಕೃಷ್ಣಕುಮಾರ್, ಕನ್ನಡ ಛಂದಸ್ಸಿನ ಚರಿತ್ರೆ ಸಂಪುಟ ೨, ಪುಟ ೨೮೩

೫೦. ಅದೇ ಪುಟ ೨೮೮

೫೧. ಅದೇ ಪುಟ ೨೮೯

೫೨. ವೀರಣ್ಣ ರಾಜೂರ, ಕನ್ನಡ ಸಾಂಗತ್ಯ ಸಾಹಿತ್ಯ ಪುಟ ೮೭

೫೩. ಅದೇ ಪುಟ ೧೦೫

೫೪. ಅದೇ ಪುಟ ೧೦೭

೫೫. ಕೆ. ನಾಗೇಂದ್ರಪ್ಪ, ಹದಿನೈದನೆಯ ಶತಮಾನದ ಕನ್ನಡ ಸಾಹಿತ್ಯ ಚರಿತ್ರೆ, ೧೯೯೬, ಪುಟ ೧೪

೫೬. ನಾಗರತ್ನಮ್ಮ, ಸಾಂಗತ್ಯ ಸಾಹಿತ್ಯ ಪುಟ೧೭, ೧೮

೫೭. ಎಂ.ಎಂ. ಕಲಬುರ್ಗಿ-ಮಾರ್ಗ-೩, ೧೯೯೮ ಪುಟ-೫೦೫-೫೦೭.

೫೮. ವೆಂಕಟಸುಬ್ಬಯ್ಯ ಜಿ (ಪ್ರ.ಸಂ.) ಕನ್ನಡ ನಿಘಂಟು, ಸಂಪುಟ ೬, ಪುಟ ೬೧೨೯

೫೯. ಪುಟ್ಟಪ್ಪ ಕೆ.ವಿ., (ಪ್ರ.ಸಂ.)ಕನ್ನಡ ಕೈಪಿಡಿ, ಸಂ.೧, ಪುಟ ೧೯೬

೬೦. ಅದೇ ಪುಟ ೨೯೬

೬೧. ಅದೇ ಪುಟ ೨೯೬

೬೨. ಅದೇ ಪುಟ ೨೭೦



ಅಧ್ಯಾಯ : ಏಳು

# ಸೊಬಗಿನ ಸೋನೆ: ಸಾಂಸ್ಕೃತಿಕ ವಿವೇಚನೆ

೭.೪. ಸಾಮಾಜಿಕ ಆಯಾಮ

೭.೪.೧. ಊರು/ಕೇರಿ/ಪಟ್ಟಣ

೭.೪.೨. ಬಸಿರು/ಬಾಣಂತಿ/ಮಕ್ಕಳು

೭.೪.೩. ಸ್ತ್ರೀವರ್ಣನೆ-ವೇಶ್ಯಾವಾಟಿಕೆ

೭.೪.೪. ಬೇಡರು-ಬೇಟೆ

೭.೪.೫. ಜೂಜು-ನೀತಿ

೭.೫. ನಂಬಿಕೆ/ಆಚರಣೆ/ಸಂಪ್ರದಾಯಗಳು

೭.೫.೧. ಬಲಿಪದ್ಧತಿ

೭.೫.೨. ಪವಾಡ

೭.೫.೩. ಮದುವೆ

೭.೫.೪. ಪೆಣ್ಬುಯ್ಯಲ್

೭.೫.೫. ಕಾಮಶಾಸ್ತ್ರ

೭.೫.೬. ಸ್ಮಶಾನ

## ಅಧ್ಯಾಯ : ಏಳು

# ಸೊಬಗಿನ ಸೋನೆ: ಸಾಂಸ್ಕೃತಿಕ ವಿವೇಚನೆ

ಭಾರತೀಯ ಪರಂಪರೆ ಸಂಸ್ಕೃತಿಯ ನೆಲೆಯಿಂದ ಒಡಮೂಡಿದ್ದು, ಈ ಹಿನ್ನೆಲೆಯಲ್ಲಿ ಭಾರತವು ಸಂಸ್ಕೃತಿಯನ್ನು ಮೈಗೂಡಿಸಿಕೊಂಡು ಬೆಳೆದಿದೆ ಎಂದರೆ ತಪ್ಪಾಗಲಾರದು. ನೂರಾರು ಸಂಸ್ಕೃತಿಗಳನ್ನು ಸೃಷ್ಟಿಸಿ, ಪೋಷಿಸಿದ್ದು ಭಾರತೀಯ ನೆಲ. ಹಾಗೆಯೇ ವಲಸೆ ಸಂಸ್ಕೃತಿಗಳಿಗೆ ಆಶ್ರಯ ನೀಡಿ ಪೋಷಿಸಿದೆ. ಪ್ರಸ್ತುತದಲ್ಲಿ ಹಲವು ಸಂಸ್ಕೃತಿಗಳಿಗೆ ನೀರೆರದು ಬೆಳೆಸುತ್ತಿದೆ. ಈ ಆಶ್ರಯ, ಪೋಷಣೆಯ ಗುಣ ಭಾರತ ನೆಲದ ಹುಟ್ಟುಗುಣ. ಎಲ್ಲಾ ಸಂಸ್ಕೃತಿಗಳನ್ನು ಸಮಾನವಾಗಿ ಕಂಡು ವೈವಿಧ್ಯತೆಯನ್ನು ಏಕತೆಯನ್ನು ಪೋಷಿಸಿದ ಕೀರ್ತಿ ಭಾರತದ ನೆಲಕ್ಕೆ ಸಲ್ಲುತ್ತದೆ. ಇದು ಭಾರತದ ಮಣ್ಣಿಗಿರುವ ವಿಶಿಷ್ಟ ಗುಣವೆಂದರೆ ಅತಿಶಯೋಕ್ತಿಯಾಗಲಾರದು. ಇದು ಭಾರತದ ಪ್ರತಿ ಮಣ್ಣಿನ ಕಣಕಣದಲ್ಲೂ ಸಂಸ್ಕೃತಿಯ ಅಂಶ ಬೆರೆತಿರುವುದನ್ನು ತೋರ್ಪಡಿಸುತ್ತದೆ.

ಈ ಮೇಲಿನ ವಾಕ್ಯಗಳಲ್ಲಿ ಸಂಸ್ಕೃತಿ ಎನ್ನುವ ಪದ ಮತ್ತೆ ಮತ್ತೆ ವಿಶ್ಲೇಷಣೆಗೊಳಪಟ್ಟಿದೆ. ಹಾಗಾದರೆ ಸಂಸ್ಕೃತಿ ಎಂದರೇನು ಎಂಬ ಪ್ರಶ್ನೆ ಸಹಜವಾಗಿ ಮೂಡುತ್ತದೆ. ಸಂಸ್ಕೃತಿ, ಸಂಸ್ಕೃತಿಕತೆ, ಸಾಂಸ್ಕೃತಿಕ, ಸಾಂಸ್ಕೃತಿಕತೆ ಎಂಬ ಪದಗಳು ಭಾರತೀಯ ಜೀವನ ಪದ್ಧತಿಯನ್ನು ಆಧರಿಸಿವೆ. ಇದಕ್ಕೆ ಕರ್ನಾಟಕ ಹೊರತಾಗಿಲ್ಲ. ಅಂದರೆ ಇಲ್ಲಿ ಸಂಸ್ಕೃತಿ ಎನ್ನುವ ಪದವನ್ನು ತನ್ನತನದ ಇರುವಿಕೆ, ಜೀವನಪದ್ಧತಿ, ಬದುಕಿನಮಾರ್ಗ, ಜೀವನದ ರೀತಿನೀತಿ ಎಂದು ಸಾಮಾನ್ಯವಾಗಿ ಅರ್ಥೈಸಬಹುದು. ಕನ್ನಡದಲ್ಲಿ ಈ ಪದ ವಸಾಹತುಶಾಹಿ ಆಡಳಿತದಲ್ಲಿ ಹೆಚ್ಚು ಪ್ರಚಲಿತಕ್ಕೆ ಬಂದಿದೆ. ಇದನ್ನು ಮೊದಲು ಬಳಸಿದವರು ಉತ್ತಂಗಿ ಚನ್ನಪ್ಪನವರು. ಸಂಸ್ಕೃತಿ ಎನ್ನುವ ಪದವನ್ನು ಕನ್ನಡದ ಅನೇಕ ವಿದ್ವಾಂಸರು ಚಿಂತಕರು, ಸಂಶೋಧಕರು ತಮ್ಮದೇ ಆದ ನೆಲೆಯಲ್ಲಿ ವ್ಯಾಖ್ಯಾನವನ್ನು ಅರ್ಥೈಸಿರುವುದನ್ನು ಕಾಣಬಹುದು.

ಕನ್ನಡ ಸಾಹಿತ್ಯ ಪರಿಷತ್‌ನ ಕನ್ನಡ ನಿಘಂಟು 'ಸಂಸ್ಕೃತಿ' ನಾಮಪದವಾಗಿ ಗ್ರಹಿಸಿ "ಬುದ್ಧಿ ವಿಕಾಸ, ಮಾನಸಿಕವಾದ ಪಕ್ವತೆ, ಒಂದು ದೇಶದ ಅಥವಾ ಜನಾಂಗದ ಮಾನಸಿಕವಾದ ಸಾಧನೆ, ನಾಗರೀಕತೆ"[೧] ಎಂದು ಅರ್ಥನೀಡಿದೆ. ಸಂಸ್ಕೃತಿಯ ಮುಂದುವರಿಕೆಯ ಭಾಗವಾಗಿ 'ಸಾಂಸ್ಕೃತಿಕತೆ' ಇದನ್ನು ಇದೇ ನಿಘಂಟು ಗುಣವಾಚಕವಾಗಿ ಪರಿಭಾಷಿಸಿ "ಸಂಸ್ಕೃತಿಗೆ ಸಂಬಂಧಿಸಿದ; ನಾಗರೀಕತೆ, ಬುದ್ಧಿವಿಕಾಸಗಳಿಗೆ ಸಂಬಂಧಪಟ್ಟ; ಸಂಸ್ಕೃತಿಗೆ ಸಂಬಂಧಿಸಿದ್ದು, ಬುದ್ದಿ ಮತ್ತು

ಮನೋವಿಕಾಸಗಳಿಗೆ ಸೇರಿದುದು"[೨] ಎಂದು ಅರ್ಥ ನೀಡಿದೆ. ಕನ್ನಡ ಸಾಹಿತ್ಯ ಪರಿಷತ್ತಿನ ಸಂಕ್ಷಿಪ್ತ ಕನ್ನಡ ನಿಘಂಟಿನ ಪ್ರಕಾರ 'ಸಂಸ್ಕೃತಿ' ಎಂಬುದಕ್ಕೆ ಮತ್ತೊಂದು ರೀತಿಯ ಅರ್ಥವನ್ನು ನೀಡಿದೆ. "ಒಂದು ದೇಶದ ಮಾನಸಿಕ ಸಾಧನೆ, ನಾಗರೀಕತೆಯ ಬೌದ್ಧಿಕ ಸಾಧನೆ"[೩] ಎಂದು ಅರ್ಥೈಸಿದೆ. ಈ ಮೇಲಿನ ನಿಘಂಟಿನ ಅರ್ಥಗಳನ್ನು ಗಮನಿಸಿದಾಗ ಸಂಸ್ಕೃತಿ ಎಂದರೆ ಮನುಷ್ಯನ ಬುದ್ಧಿವಿಕಾಸ, ಮಾನಸಿಕ ಸಾಧನೆ, ನಾಗರಿಕತೆ ಮುಂತಾದವುಗಳಿಗೆ ಸಂಬಂಧಿಸಿದೆ. ಸಾಂಸ್ಕೃತಿಕ ಎನ್ನುವ ಪದ ಸಂಸ್ಕೃತಿಯ ಮುಂದುವರಿದ ಭಾಗವಾಗಿದ್ದು ಒಂದು ದೇಶ, ಸಂಸ್ಕೃತಿ, ಪರಂಪರೆಗೆ ಸಂಬಂಧಪಟ್ಟದ್ದಾಗಿದೆ. ಅಂದರೆ ಸಂಸ್ಕೃತಿ, ಸಾಂಸ್ಕೃತಿಕ ಎನ್ನುವ ಪದಗಳು ಮಾನವನ ವಾಸಸ್ಥಳದೊಂದಿಗೆ ಅವನ ಇಡೀ ಬದುಕನ್ನು ಆವರಿಸಿಕೊಂಡಿವೆ. ಸಂಸ್ಕೃತಿ ಇಲ್ಲದ ಮನುಷ್ಯನ ಬದುಕು ಅನಾಗರಿಕತೆಯನ್ನು ಸೂಚಿಸುತ್ತದೆ ಎಂದು ಹೇಳಬಹುದು.

"ಸಂಸ್ಕೃತಿಗೆ 'Culture' ಎಂಬ ಸಮಾನಾರ್ಥಕ ಪದವನ್ನು ಇಂಗ್ಲೀಷ್‌ನಲ್ಲಿ ಪ್ರಯೋಗಿಸಲಾಗುತ್ತಿದೆ. ಅದು ಮೂಲ ಲ್ಯಾಟಿನ್ ಭಾಷೆಯಿಂದ ಬಂದುದು. 'Cult' ಅಥವಾ 'Cultus' ಎಂಬುವು ಈ ಶಬ್ದಕ್ಕೆ ಮೂಲಗಳು. ಸೇವಿಸು, ಗೌರವಿಸು, ನಿಷ್ಠೆತೋರು ಎಂಬ ಅರ್ಥ ಈ ಪದಗಳಿಗಿದೆ. ಮುಂದೆ ಆ ಮಾತಿಗೆ ಕ್ರಮೇಣ ಎರಡು ಅರ್ಥಗಳಾದವಂತೆ ೧. ದೈವಭಕ್ತಿ, ವ್ರತದೀಕ್ಷೆ, ಮತಸಿದ್ಧಾಂತ ೨. ಭೂದೇವಿಯ ಆರಾಧನೆ, ಭೂಮ್ಯಾಸಕ್ತಿ, ಕೃಷಿ, ಉಳುಮೆ, ಪೈರು ಬೆಳೆಸುವುದು ಇತ್ಯಾದಿ"[೪] ಅರ್ಥಗಳಿವೆ. "ಸಂಸ್ಕೃತಿ ಎಂಬುದು 'Culture' ಎಂಬ ಅರ್ಥದಲ್ಲಿ "ಹೆಚ್ಚಾಗಿ ಪ್ರಯೋಗವಾಗುತ್ತಿರುವುದು ಸುಮಾರು ನೂರು ವರ್ಷಗಳಿಂದೀಚೆಗೆ"[೫] ಎಂದು ಡಿ.ವಿ.ಜಿ. ಅವರು ವ್ಯಾಖ್ಯಾನಿಸುತ್ತಾರೆ. ಮತ್ತೊಂದೆಡೆ ಡಿ.ವಿ.ಜಿ. ಅವರು "ಅದು ಭಾವ ಸೌಂದರ್ಯ ಮತ್ತು ಶೀಲಸೌಂದರ್ಯ ... ಸಂಸ್ಕೃತಿಯಲ್ಲಿ ಜೀವನ ಸಂದರ್ಭಗಳ ಯುಕ್ತಾಯುಕ್ತಾ ವಿವೇಚನೆ ಒಂದು ಅಂಶ. ವಸ್ತುಗಳ ತಾರತಮ್ಯಗಣನೆ ಇನ್ನೊಂದಂಶ; ಆತ್ಮಶೋಧನೆ ಆತ್ಮ ಸಂಯಮಗಳು ಮತ್ತೊಂದಂಶ. ಹೀಗೆ ನಾನಾ ವಿಜ್ಞಾನ ನಾನಾ ವಿವೇಕಗಳ ಸಮಾವೇಶದ ಫಲಿತಾಂಶ ಸಂಸ್ಕೃತಿ"[೬] ಎಂದು ನುಡಿದಿದ್ದಾರೆ. ಇಲ್ಲಿ ಭಾವ, ಜೀವನ, ವಸ್ತುಗಳ ವಿವೇಕದ ಫಲಿತವೇ ಸಂಸ್ಕೃತಿ ಎಂದು ಡಿವಿಜಿ ಅರ್ಥೈಸಿದ್ದಾರೆ ಅಂದರೆ ಸಂಸ್ಕೃತಿ ಎಂಬುದು ಮನುಷ್ಯನ ಬದುಕಿನ ರೀತಿಗೆ ಸಂಬಂಧಿಸಿದ್ದು ಅದು ನಿತ್ಯ ನೂತನ ನಿರಂತರತೆಯುಳ್ಳದೆಂದು ಭಾವಿಸಬಹುದು.

ಶಂಬಾಜೋಷಿ ಅವರು 'ಸಂಸ್ಕೃತಿ' ಎಂಬುದನ್ನು "ಬಾಹ್ಯವಸ್ತುರೂಪ, ಅಂತರಂಗದ ಸಂಸ್ಕಾರ ಹೀಗೆ ಸಂಸ್ಕೃತಿಯು ಅಂತರಂಗದ ಭಾವಬುದ್ಧಿಗೆ ಸಂಬಂಧಿಸಿದೆ"[೭] ಅಂದರೆ ಶಂಬಾ ಅವರ ಪ್ರಕಾರ ಮನುಷ್ಯ ಬದುಕಿನ ಅಂತರಂಗ-ಬಹಿರಂಗಕ್ಕೆ ಸಂಬಂಧಿಸಿದ ವಸ್ತುವಿಷಯವಾಗಿದೆ. ಅಲ್ಲದೆ ಶಂಬಾಜೋಷಿ ಅವರು 'ಸಂಸ್ಕೃತಿ' ಎಂಬುದನ್ನು ನಾಗರೀಕತೆ, ಯತಿ, ಮುನಿ, ದೈವ ದೇವರು, ನದಿ-ಪರಿಸರ ರಾಜ್ಯ, ಭಾಷೆ, ಬುಡಕಟ್ಟು ಜನಾಂಗಗಳ ಮೂಲ ಮೊದಲಾದ ನೆಲೆಯಲ್ಲಿ 'ಸಂಸ್ಕೃತಿ' ಎಂಬ ಪರಿಕಲ್ಪನೆಯನ್ನು ಅರ್ಥೈಸಲು ಪ್ರಯತ್ನಿಸಿದ್ದಾರೆ.

ಎಚ್. ತಿಪ್ಪೇರುದ್ರಸ್ವಾಮಿ ಅವರು "ಸಂಸ್ಕೃತಿ ಎಂಬುದು ಒಟ್ಟು ಜೀವನದ ಅಂತರಂಗದ ಅನುಭವ"[೮] ಎಂದಿದ್ದಾರೆ. ತಿಪ್ಪೇರುದ್ರಸ್ವಾಮಿ ಅವರು ಮುಂದುವರೆದು "ಸಂಸ್ಕೃತಿ ಎಂಬುದು

ಎಲ್ಲ ವಿದ್ಯೆಗಳನ್ನು ಬಳಸಿಕೊಂಡು ಬೆಳೆಯುವ ಸಂಸ್ಕಾರ ಪರಾಗ. ಅನೇಕ ಸಾಮಗ್ರಿಗಳನ್ನು ಹದವರಿತು ಸೇರಿಸಿದುದರಿಂದ ಉಂಟಾದ ರಸಪಾಕದ ರುಚಿ. ಅದು ಕೇವಲ ಪಾಂಡಿತ್ಯವಲ್ಲ; ಆ ಪಾಂಡಿತ್ಯದಿಂದ ಜೀವನದ ಮೇಲಾಗಿರುವ ಪರಿಣಾಮವೇ ಸಂಸ್ಕೃತಿ."[೯] ಎಂದು ವಿಶ್ಲೇಷಿಸುತ್ತ ಮತ್ತೊಂದು ಕಡೆ ಅವರು "ಸಂಸ್ಕೃತಿಯೆಂಬುದು ಅಂತರಂಗದ ವಿಕಾಸ... ನುಡಿದಂತೆ ನಡೆಯುವುದೇ ಸಂಸ್ಕೃತಿ, ಸಮಾಜದೊಡನೆ ಸಹಬಾಳ್ವೆಯ ಸೌಜನ್ಯದ ಮಾರ್ಗವೇ ಸಂಸ್ಕೃತಿ; ಶೀಲದ ಸೌಭಾಗ್ಯವೇ ಸಂಸ್ಕೃತಿ; ಆತ್ಮ ಶಿಕ್ಷಣವೇ ಸಂಸ್ಕೃತಿ; ಸಾಹಿತ್ಯಾದಿ ಸರಸ ಕಲೆಗಳೇ ಸಂಸ್ಕೃತಿ"[೧೦] ಎಂದು ಅರ್ಥೈಸಿದ್ದಾರೆ.

ಎಚ್. ತಿಪ್ಪೇರುದ್ರಸ್ವಾಮಿ ಅವರು ಸಂಸ್ಕೃತಿ ಎನ್ನುವುದನ್ನು ನಾಗರಿಕತೆ, ವೇದ ಉಪನಿಷತ್, ಆಗಮ, ಪುರಾಣ, ರಾಜವಂಶ, ಕನ್ನಡ ಜನಪದ, ಧರ್ಮ, ಸಾಹಿತ್ಯ, ವೀರತ್ವ, ಶಾಸನ, ಜನಪದ ಸಾಹಿತ್ಯ, ವಾಸ್ತುಶಿಲ್ಪ, ಸಂಗೀತ ನೃತ್ಯ ಚಿತ್ರಕಲೆ ಈ ಮುಂತಾದ ಪರಂಪರೆಯ ನೆಲೆಗಳನ್ನು ಸಂಸ್ಕೃತಿ ಎಂದು ಪರಿಭಾವಿಸುತ್ತಾರೆ. ಅದೇ ರೀತಿ ಎಂ. ಚಿದಾನಂದಮೂರ್ತಿ ಅವರು ಕನ್ನಡ ಶಾಸನಗಳಲ್ಲಿ ವ್ಯಕ್ತವಾಗಿರುವ ರಾಜಕೀಯ, ಧರ್ಮ, ಧಾರ್ಮಿಕ ಕೇಂದ್ರ, ಶಿಕ್ಷಣ, ಸಮಾಜ, ಆಚರಣೆ, ಸಂಪ್ರದಾಯ ಈ ಮುಂತಾದ ನೆಲೆಯಲ್ಲಿ ಸಂಸ್ಕೃತಿ ಸಾಂಸ್ಕೃತಿಕ ಎಂಬ ಪದವನ್ನು ವ್ಯಾಖ್ಯಾನಿಸುತ್ತಾರೆ. ಸಂಸ್ಕೃತಿ, ಸಾಂಸ್ಕೃತಿಕ ಎಂಬ ಪದಗಳಿಗೆ ನಿರ್ದಿಷ್ಟ ಖಚಿತ ವ್ಯಾಖ್ಯಾನವನ್ನು ನೀಡುವುದು ಕಷ್ಟಸಾಧ್ಯ.

ಸೊಬಗಿನ ಸೋನೆ ಕಾವ್ಯದಲ್ಲಿ ಅಭಿವ್ಯಕ್ತಗೊಂಡ ಪ್ರಾಕೃತಿಕ ವರ್ಣನೆ, ಧರ್ಮದೈವ, ಆಡಳಿತ, ಸಾಮಾಜಿಕ ಆಯಾಮ, ನಂಬಿಕೆ, ಆಚರಣೆ, ಸಂಪ್ರದಾಯ ಈ ಮೊದಲಾದ ಅಂಶಗಳ ವಿಶ್ಲೇಷಣೆಯನ್ನು ಪ್ರಸ್ತುತ ಅಧ್ಯಯನ ಸಾಂಸ್ಕೃತಿಕ ವಿವೇಚನೆ ಎಂದು ಪರಿಭಾವಿಸುತ್ತದೆ.

ಅಧ್ಯಯನದ ಅನುಕೂಲಕ್ಕಾಗಿ ಪ್ರಸ್ತುತ ಸಾಂಸ್ಕೃತಿಕ ವಿವೇಚನೆ ಎಂಬ ಅಧ್ಯಾಯವನ್ನು ಐದು ಅಂಶಗಳಾಗಿ ವರ್ಗೀಕರಿಸಿಕೊಂಡು ಅಧ್ಯಯನಕ್ಕೊಳಪಡಿಸಿದೆ.

೭.೧. ಪ್ರಾಕೃತಿಕ ಚಿತ್ರಣ

೭.೨. ಧರ್ಮ, ದೈವ

೭.೩. ಆಡಳಿತ

೭.೪. ಸಾಮಾಜಿಕ ಆಯಾಮ

೭.೫. ನಂಬಿಕೆ, ಆಚರಣೆ, ಸಂಪ್ರದಾಯ

ಇವುಗಳನ್ನು ಸೊಬಗಿನ ಸೋನೆ ಕಾವ್ಯದ ಹಿನ್ನೆಲೆಯಲ್ಲಿ ವಿವೇಚನೆಗೊಳಪಡಿಸಿದೆ.

**೭.೧. ಪ್ರಾಕೃತಿಕ ಚಿತ್ರಣ**

ಮಾನವ ಮೂಲತಃ ಪ್ರಕೃತಿ ಆರಾಧಕನಾಗಿದ್ದಾನೆ. ಹಾಗಾಗಿ ಪ್ರಕೃತಿ ಮತ್ತು ಮಾನವನ ಸಂಬಂಧ ನಿತ್ಯ ನಿರಂತರವಾದುದಾಗಿದೆ. ದೈವ ಸೃಷ್ಟಿ ಯಾವುದು ಆಗಿರುವುದೋ ಅದನ್ನ ಪ್ರಕೃತಿ ಎಂದು ಭಾವಿಸುತ್ತೇವೆ. ಮನುಷ್ಯನಿಂದ ನಿರ್ಮಿಸಲು ಅಸಾಧ್ಯವಾದುದು ಯಾವುದೋ ಒಂದು ಶಕ್ತಿ ಅಸಾಮಾನ್ಯವಾಗಿ ಸೃಷ್ಟಿ ಕ್ರಿಯೆಯನ್ನು ನೆರವೇರಿಸುವುದನ್ನು ಪ್ರಕೃತಿ ಎಂದು

ಪರಿಭಾವಿಸುತ್ತೇವೆ. ಪ್ರಕೃತಿ ವಿಸ್ಮಯಗಳ ತವರಾಗಿದೆ. ಸಹಜವಾದ ಬದಲಾವಣೆಗಳಿಂದ ಸೊಬಗು ಸೌಂದರ್ಯ ಉಂಟಾಗುತ್ತದೆ. ಕೆಲವೊಮ್ಮೆ ಅಂದ ಚೆಂದ ಕಂಡು ಬರದಿದ್ದಾಗ ಸೊಬಗಿನ ಅನಾವರಣಕ್ಕೆ ಸರೋವರ, ಪರ್ವತ, ಬೆಟ್ಟ, ಸಮುದ್ರ, ಪ್ರಾಣಿ, ಪಕ್ಷಿ, ವನ, ಪುಷ್ಪಗಳಂತಹ ಪ್ರಾಕೃತಿಕ ಹಿನ್ನೆಲೆ ಅಗತ್ಯವಿರಬೇಕಾಗುತ್ತದೆ. ಈ ತೆರನಾದ ಪ್ರಾಕೃತಿಕ ಅಂಶಗಳು ಸೊಬಗಿನ ಸೋನೆ ಕಾವ್ಯದಲ್ಲಿ ವ್ಯಕ್ತವಾಗಿವೆ. ಇಲ್ಲಿ ಸರೋವರ, ಸಮುದ್ರ, ಪರ್ವತ, ವನ ಸಂಪತ್ತು, ಪುಷ್ಪಸಂಪತ್ತು ಪ್ರಾಣಿ–ಪಕ್ಷಿ, ಋತುಮಾನ, ಸೂರ್ಯೋದಯ, ಸೂರ್ಯಾಸ್ತ ಇವುಗಳನ್ನು ಪ್ರಾಕೃತಿಕ ಎಂದು ಪರಿಭಾವಿಸಲಾಗಿದೆ.

### ೭.೧.೧ ಸರೋವರ/ಕೊಳ

ಸರೋವರ ಮತ್ತು ಕೊಳ ಇವೆರಡು ಕನ್ನಡದಲ್ಲಿ ಒಂದೇ ಅರ್ಥದಲ್ಲಿ ಬಳಕೆಯಾಗುತ್ತಾ ಬಂದಿದೆ. ಹಳ್ಳಕೊಳ್ಳಗಳಿಗಿಂತ ಸ್ವಲ್ಪ ದೊಡ್ಡದು ನದಿಗಳಿಗಿಂತ ಚಿಕ್ಕದಾದ ನೀರಿನ ತಾಣಗಳನ್ನು ಸರೋವರ ಅಥವಾ ಕೊಳ ಎಂದು ಅರ್ಥೈಸಬಹುದು. ಇವು ಪ್ರಕೃತಿದತ್ತವಾಗಿದ್ದು ನೋಡಲು ಸುಂದರವೂ, ಆಕರ್ಷಣೀಯವೂ ಆಗಿರುತ್ತವೆ.

ಸರೋವರ, ಕೊಳ ಎಂಬ ಪದಗಳು ಒಂದೇ ಅರ್ಥವನ್ನು ಪಡೆದುಕೊಂಡಿವೆ. ಇವೆರಡರ ಅರ್ಥ ಆಕರ್ಷಣೀಯವಾದ ನೀರಿನ ತಾಣ ಎಂದಿದೆ. ದೇಪರಾಜ ಸೊಬಗಿನ ಸೋನೆ ಕಾವ್ಯದಲ್ಲಿ ಕೊಳ(೧/೩೬), ಸರವರಿ(೧೧/೪), ಕಾಸಾರಿ(೧೧/೧೧), ಕಮಲಾಕರ(೧೧/೧೮) ಎಂಬ ಬೇರೆ ಬೇರೆ ಪದಗಳಿಂದ ಕರೆಯಲಾಗಿದೆ. ಇದನ್ನೇ ಕವಿ ತನ್ನ ಕಾವ್ಯದಲ್ಲಿ "..... ಮರಸುತ್ತ ಬೆಳೆಯದ ಕೊಳನಿಲ್ಲ ಬನದೊಳು"(೩/೧೪) ಎಂದರೆ ವನದಲ್ಲಿ ಕೊಳವಿದ್ದು ಅಲ್ಲಿ ಮರ, ಬಳ್ಳಿ, ಹೂ, ದುಂಬಿಗಳು ಒಂದಕ್ಕೊಂದು ಸೇರಿ ಹಬ್ಬಿದವು. ಮತ್ತೊಂದೆಡೆಯಲ್ಲಿ "ಪೂಗೊಳನಲ್ಲದಜತ ಕೊಳನಿಲ್ಲಕೇ ಳಾಗರವಿಲ್ಲದಡವಿಯಿಲ್ಲ..."(೧/೨೯) ಅಲ್ಲಿಯ ಉದ್ಯಾನವನದಲ್ಲಿ ಕೊಳಗಳು ನೀರಿನಿಂದ ಸಮೃದ್ಧವಾಗಿದ್ದು ಹೂ, ದುಂಬಿಗಳಿಂದ ವೀಕ್ಷಿಸುವ ಜನರು ಇಲ್ಲದೇ ಇದ್ದರೆ ಕೊಳಕ್ಕೆ ಪ್ರಾಮುಖ್ಯತೆ ಬರುತ್ತಿರಲಿಲ್ಲ.

> "ಬೆಳಗೆಯಿಗಳು ಕರ್ವುದೋಂಟ ತೀವಿದ ಕೆಜಿ
> ಕೊಳಮಡು ಕವುಂಗೇಜಿದೆಳವಳ್ಳಿ..."(೧/೩೬)

ಎಂದರೆ ಪಟ್ಟಣದ ಹೊರಗೆ ಇರುವ ಉದ್ಯಾನವನದಲ್ಲಿ ತುಂಬಿದ ಕೊಳ, ಕೆರೆ, ಮಡುಗಳು ಇದ್ದು ಅದರ ಸುತ್ತ ಫಲಭರಿತ ಮರಗಳು, ಎಲೆಯನ್ನು ಹಬ್ಬಿಸಿಕೊಂಡ ಅಡಕೆಮರಗಳು, ಬೆಳೆದು ನಿಂತ ಕಬ್ಬಿನ ತೋಟಗಳು ಇದ್ದವು. ಇವುಗಳು ಕೊಳಕ್ಕೆ ಮೆರಗು ನೀಡಿದವು ಎಂಬುದು ಕವಿಯ ಅಭಿಮತವಾಗಿದೆ.

> ".... ಬನದೊಳು ಕಮಲ ಕಲ್ಹಾರ ನೀಲೋತ್ಪಲ
> ವನು ತಾಳ್ದ ಸರವರವನು ಕಂಡ"(೧೧/೪)

ಸೌಗಂದಿಕ ಪುಷ್ಪ, ಕಮಲಗಳಿರುವ ಸರೋವರವನ್ನು ಕಂಡ ದೃಶ್ಯವನ್ನು ಕುರಿತು ವರ್ಣಿಸುತ್ತಾನೆ. ಮುಂದುವರಿದು ಕವಿ ಸರೋವರಕ್ಕೆ ಕಾಸಾರ ಎಂದು ಕರೆದಿದ್ದಾನೆ.

"ಸುಮನೋ ಮಕರಂದ ಸಂದೋಹ ಕಾಸಾರ"...(೧೧/೧೧)

".... ಹಿಮಹಿಮ ಹಿಮರೋಚಿ ಕಾಸಾರ"(೧೧/೧೨)

ಅಂದರೆ ಕಾಸಾರ ಅಥವಾ ಸರೋವರವು ನೈದಿಲೆಗಳಿಂದ ಕಂಗೊಳಿಸುತ್ತಿದ್ದು ಅದು ಸಹಸ್ರಾರು ಹಿಮಗಳ ಗುಂಪಿನಿಂದ ನಿರ್ಮಾಣವಾಗಿದೆ ಎಂದು ಕವಿ ಭಾವಿಸಿದ್ದಾನೆ.

"ರಸಪಾನಕೇಳಿಯಾಲಯವೆನಿಸದು ದ್ರುತ

ರಸಪೂರ ಸುಖಸಾರ ಕಾಸಾರ"(೧೧/೧೬)

ಕೊಳದ ನೀರು ಸಿದ್ಧವಾದ ರಸಪಾಕದಂತಲ್ಲ ಅದು ಸಹಜ ರುಚಿಯನ್ನು ಹೊಂದಿದ ಸಿಹಿ ನೀರಾಗಿತ್ತು ಎಂದು ಕವಿ ಕಲ್ಪಿಸುತ್ತಾನೆ.

"....ಮಿಸುಪ ಕೇಸರದೊತ್ತೊತ್ತೆಯಿಂದಬ್ಜಾಳಿ

ಯೆಸೆದವಾ ಕಮಲಾಕರದೊಳು"(೧೧/೧೮)

ಕಾಂತಿಯುಕ್ತವಾದ, ಎಳೆಯದಾದ ಬಿಳಿ ಕಮಲಗಳು ಅಲ್ಲಿ ಶೋಭಿಸುತ್ತಿದ್ದವು. ಅಲ್ಲಿ ತಂಪಾದ ಗಾಳಿಯು ದುಂಬಿ, ಹೂಮೊಗ್ಗುಗಳಲ್ಲಿ ಸುಳಿದು ಕಿರುತೆರೆಯನ್ನು ಎಬ್ಬಿಸುತ್ತಿತ್ತು. ಅಲ್ಲಿ ಚಿಕ್ಕ ಮುತ್ತು, ರತ್ನಗಳಿಂದ ಕೊಳ ಕಂಗೊಳಿಸುವಂತಿತ್ತು. ಇಂತಹ ಪ್ರಕೃತಿ ಸೌಂದರ್ಯವನ್ನು ಸವಿಯತ್ತಿದ್ದಂತೆ ಜನತೆಗೆ ದಣಿವು ಇಲ್ಲದಂತಾಯಿತು. ಈ ಹಿನ್ನೆಲೆಯಲ್ಲಿ ವಿಜಯನಗರದ ಅರಸರ ಕಾಲದಲ್ಲಿ ಊರು, ವನ ಮುಂತಾದ ಕಡೆಗಳಲ್ಲಿ ಸರೋವರವು ಹೂ, ದುಂಬಿ, ಪಕ್ಷಿ, ಜಲಚರಗಳ ಆವಾಸನೆಲೆಯಾಗಿದ್ದು ಪ್ರಾಕೃತಿಕ ಸಂಪತ್ತಾಗಿತ್ತೆಂದು ತಿಳಿದುಬರುತ್ತದೆ.

### ೭.೧.೨ ಸಾಗರ

ಭೂಮಿಯ ಮೇಲೆ ಮುಕ್ಕಾಲು ಭಾಗ ನೀರಿನಿಂದ ಸಾಗರವು ಆವೃತವಾಗಿದೆ. ಭೂಮಿಯ ಮೇಲ್ಮೈಗನುಗುಣವಾಗಿ ಅದು ವಿಸ್ತಾರಗೊಂಡಿದ್ದು ಏಳು ಸಾಗರಗಳೆಂದು ಗುರುತಿಸಲ್ಪಡುತ್ತದೆ. ಪ್ರಕೃತಿಯ ಹಲವು ಅದ್ಭುತಗಳಲ್ಲಿ ಸಾಗರವು ಪ್ರಮುಖವೆನಿಸಿದೆ. ಇದು ಅನೇಕ ರೀತಿಯ ಸಂಪತ್ತನ್ನು ತನ್ನ ಒಡಲಿನಲ್ಲಿಟ್ಟುಕೊಂಡು ಗಂಭೀರತೆಗೆ ಪ್ರಸಿದ್ಧಿಯಾಗಿದೆ. ದೇವಾನುದೇವತೆಗಳೂ ರಾಕ್ಷಸರು, ಸಮುದ್ರ ಮಂಥನಮಾಡಿ ಅಮೃತವನ್ನು ಪಡೆದ ಪೌರಾಣಿಕ ಹಿನ್ನೆಲೆಯು ಇದೆ. ಕವಿಗಳು ಸಾಗರಕ್ಕೆ ಆಕರ್ಷಿತರಾಗಿ ಕಾವ್ಯ ರಚಿಸಿದ್ದಾರೆ. ಹಾಗಾಗಿ ಅಷ್ಟಾದಶವರ್ಣನೆಗಳಲ್ಲಿ ಸಾಗರವನ್ನು ಕುರಿತು ಕಾವ್ಯಗಳಲ್ಲಿ ತರುವ ಸಂಪ್ರದಾಯವಿದೆ. ಸಾಗರವನ್ನು ಸಮುದ್ರ, ಅಂಬುಧಿ, ಅಬ್ಧಿ, ಅರ್ಣವ, ಮುನ್ನೀರ್, ಮಕರಾಕರ, ರತ್ನಾಕರ, ಕಡಲು, ಜಲದಿ, ಸಿಂಧು, ಶರಧಿ, ವನಧಿ, ವನನಿಧಿ, ವಾರಾನ್ನಿಧಿ, ವಾರಾಶಿ(ಸಿ), ವಸುಧಾವಸನ ಮುಂತಾದ ನಾಮಗಳಿಂದ ಕರೆದಿರುವುದು ಕಾವ್ಯದಲ್ಲಿ ಕಂಡುಬರುತ್ತದೆ. ಮುನ್ನೀರು ಎಂದರೆ ಸಮುದ್ರವು ನದಿ, ಮಳೆ, ಅಂತರ್ಜಲ ಮೂಲಗಳಿಂದ ನಿರ್ಮಾಣವಾಗಿ ಇದು ಸಂಗ್ರಹ, ಉತ್ಪತ್ತಿ, ಮತ್ತು ನಾಶ ಗುಣಗಳನ್ನು ಹೊಂದಿ ಭೂಮಿಯನ್ನು ಆವರಿಸಿದೆ.

ಪುರಾಣಭಾರತಕೋಶದಲ್ಲಿ ಸಮುದ್ರವನ್ನು "ಲವಣ (ಉಪ್ಪು) ಇಕ್ಷು (ಕಬ್ಬಿನರಸ) ಸುರಾ (ಹೆಂಡ) ಸರ್ಪಿ (ತುಪ್ಪ) ದಧಿ (ಮೊಸರು) ಕ್ಷೀರ (ಹಾಲು) ಜಲ (ನೀರು) ಸಮುದ್ರಗಳೆಂಬ

ಏಳು ಸಮುದ್ರಗಳಿವೆ. ಸಮುದ್ರರಾಜನ ಪತ್ನಿ ಗಂಗೆ. ಕಾಲೇಯರೆಂಬ ದೈತ್ಯರ ನಾಶಕ್ಕಾಗಿ ಅಗಸ್ತ್ಯರು ಸಮುದ್ರವನ್ನು ಪಾನಮಾಡಿದರು. ಭಗೀರಥನು ಸಾಗರರ ಹಿತಕ್ಕಾಗಿ ತಂದ ಗಂಗೆಯಿಂದ ಸಮುದ್ರವು ತುಂಬಿ ಬಂತು. ದೇವತೆಗಳು ಅಮೃತವನ್ನು ಪಡೆಯಲು ಸಮುದ್ರವನ್ನು ಮಥಿಸಿ ಕಾಮಧೇನು, ಕಲ್ಪವೃಕ್ಷ, ಉಚ್ಚೈಶ್ರವಸ್ಸು, ಲಕ್ಷ್ಮಿ, ಕೌಸ್ತುಭ, ಪಾರಿಜಾತ, ಸುರ, ಧನ್ವಂತರಿ, ಚಂದ್ರ, ಐರಾವತ, ಅಪ್ಸರಸ್ತ್ರೀಯರು, ಹಾಲಾಹಲ, ಶಾರ್ಙ್ಗ, ಪಾಂಚಜನ್ಯ, ಅಮೃತ ಮುಂತಾದ ವಸ್ತುಗಳನ್ನು ಪಡೆದರು"(೧೧/೧೧) ಎಂಬ ಪೌರಾಣಿಕ ಹಿನ್ನೆಲೆಯು ಸಮುದ್ರಕ್ಕಿರುವ ಅರ್ಥ, ಮಹತ್ವ ಕುರಿತು ಹೇಳಲಾಗಿದೆ.

ದೇಪರಾಜ ಸೊಬಗಿನ ಸೋನೆ ಕಾವ್ಯದಲ್ಲಿ ಸಾಗರ ಅಥವಾ ಸಮುದ್ರವನ್ನು ಕಡಲು, ವಸುಧಾವಸನ, ಸಿಂಧು, ಮುನ್ನೀರ್, ಮಕರಾಕರ, ಅಬ್ಧಿ, ವಾರಾಸಿ ಮುಂತಾದ ಹೆಸರಿನಿಂದ ವರ್ಣಿಸಿದ್ದಾನೆ. ಅಲ್ಲದೆ, ಸಮುದ್ರದ ತೆರೆನೊರೆಗಳ ಕುರಿತು ಹೀಗೆ ವರ್ಣಿಸಿದ್ದಾನೆ.

"ತೆರೆ ನೊರೆ ನಕ್ರ ಮಕರ ಬುದ್ಬುದಸೀ
ಕರ ಸುಳಿ ತಿಮಿ ತಿಮಿಂಗಿಳಗಳ
ಕರಗೊಂಡ ಕಂಬು ಮೌಕ್ತಿಕ ರತ್ನ ವಿದ್ರುಮಾಂ
ಕುರದಿಂದೆ ಕಡಲ್ಕಂಗೆಸದುದು"(೧೫/೨೦)

ಮೊಸಳೆ, ತಿಮಿಂಗಿಲಗಳ ಸುಳಿದಾಟದಿಂದ ತೆರೆ, ನೊರೆ, ಸುಳಿಗಳು ಶೋಭಿಸುವಂತೆ ಕಂಡವು. ನವರತ್ನಗಳು ಅಲ್ಲಿದ್ದವು. ಇಂತಹ ಸಮುದ್ರವು ದೇವರ ವಾಸದ ನೆಲೆಯಾಗಿತ್ತು. ಅದು

"ವರುಣನ ವಾಸ ಭವನ ತಿಂಗಳು ಪುಟ್ಟ
ದರಮನೆ ಗಿರಿರಕ್ಷೆಯ ಶಾಲೆ
ಸಿರಿದೇವಿಯ ತವರ್ಮನೆಯಮರ್ದೊಗೆದೊಂ
ದುರು ಮಂತಣಿ ಪೊಗಳುವೆನೇನ"(೧೫/೨೧)

ಸಾಗರವು ಅಧಿಪತಿಯಾದ ವರುಣ, ಚಂದ್ರ, ಪರ್ವತ, ಲಕ್ಷ್ಮಿ ಮುಂತಾದ ದೈವಗಳಿಗೆ ನೆಲೆಯಾಗಿದೆ ಎಂದು ವರ್ಣಿಸಿದ್ದಾನೆ.

"ಎನ್ನೊಳೊಗೆದ ಸಸಿಯಿನನಿದಿರೊಳು ಬೆಳ
ತನ್ನೆಂದ ರವಿಕೋಟಿಗಳನು
ಮುನ್ನೀರ್ಮುನಿದು ಪುಟ್ಟಿಸುವಂತೆ ತೆರೆಗಳೊ
ಳನ್ನೇಸಜಿ ನೆಳಲ್ಪೊಳದುದು"(೧೫/೨೬)

ಸಮುದ್ರ ಮುನಿಸಿಕೊಂಡಾಗ ಅಲೆಗಳು ಉಬ್ಬರ ಇಳಿತಗಳು ಕಾಣಿಸಿಕೊಂಡು ಚಂದ್ರ ಸೂರ್ಯರು ಉದಯಿಸಿದರೋ ಎಂಬಂತೆ ಇತ್ತು.

"ಬಡಬನೊಡಲ ಝಳದಿಂ ಮುತ್ತುಗಳ ಚಿ
ಪ್ಪೊಡದುರ್ವಿಪುರಿವರಳ್ಗಳವೊಲು"(೧೫/೨೮)

ಸಮುದ್ರದೊಳಗಿನ ಬೆಂಕಿಯಿಂದ ಮುತ್ತು ರತ್ನಗಳು ಚಿಪ್ಪೊಡೆದು ಹೊರಬರುವ ದೃಶ್ಯವು ವಿಶೇಷವಾಗಿತ್ತು. ಆ ಮುತ್ತುಗಳು ಸೂರ್ಯನ ಕಿರಣದಿಂದ ಪ್ರತಿಫಲಿಸುವಂತೆ ಇದ್ದವು.

"ಮೊರೆದೆಯ್ದುವ ತೊಱೆಯಿಂ ತಿರುಗುವ ಜಲ
ಚರದಿಂದ ನೀರುಂಬ ಮುಗಿಲ್ಗಳ
ಭರದಿಂದ ಪೊಯ್ವ ಪೆರ್ದೆರೆಯಿಂದ ಕರಭೀ
ಕರ ಘೋಷವೊ ಮಕರಾಕರ"(೧೫/೨೯) ಎಂದು ಮುಂದುವರಿದ ಕವಿ ಸಮುದ್ರದ ಘೋರವಾದ ಧ್ವನಿ ತೊರೆಯಿಂದ ಸುತ್ತುವ ನೀರು, ಜಲಚರಗಳ ಚಲನೆ, ಆವಿಯಾಗುವ ದೃಶ್ಯದ ಕಲ್ಪನೆ ಅದ್ಭುತವಾಗಿತ್ತು.

"ಮಿತ್ರಮಂಡಲದೊಲವಿಂದತಿ ಪಿರಿದಲ್ತು
ಪುತ್ರಸ್ನೇಹಂ ಜಗಕೆಂದಬ್ಧಿ
ಧಾತ್ರಿಗಱುಪುವವೊಲಿನನುದಯಕೆ ತಗ್ಗಿ
ರಾತ್ರೇಶನುದಯ ಕೂರ್ವುದೊಲ್ದು"(೧೫/೩೦)

ಅಬ್ಧಿಯು ಭೂಮಿಗೆ ಪ್ರೀತಿ ಪ್ರೇಮದ ಸಂದೇಶವನ್ನು ಸಾರುವ ಪ್ರಸಂಗದಂತೆ ಕಂಡಿದೆ. ಇದು ಸೂರ್ಯ ಮುಳುಗಿ ಚಂದ್ರ ಉದಯವಾಗಿರುವುದು ಮಿತ್ರಮಂಡಲ ಒಲವಿಗಿಂತ ಪುತ್ರನ ಸ್ನೇಹವೇ ಹೆಚ್ಚು ಎಂಬುದನ್ನು ಸಾರುವಂತೆ ಇದೆ ಎಂದು ಕವಿ ಕಲ್ಪಿಸಿದ್ದಾನೆ. ಅಂದರೆ ಸಮುದ್ರವು ಪುತ್ರರ ಪ್ರಾಮುಖ್ಯತೆಯನ್ನು ಜಗತ್ತಿಗೆ ಎತ್ತಿ ತೋರಿಸುತ್ತದೆ.

ಸಾಗರದ ಮಧ್ಯದಲ್ಲಿ ಶಿವ ನೆಲೆಸಿದ್ದು ಅದಕ್ಕೆ ಶಿವಸಾಗರೇಶ್ವರ ಎಂದು ಕರೆಯಲಾಗಿದೆ. ವಿಕ್ರಮ ರಾಜನಲ್ಲಿಗೆ ಕಾಣಿಕೆಯಾಗಿ ಬಂದ ನಾಗರಿಕ ಪಕ್ಷಿಯು ಈ ದೈವದ ಸೇವೆಯನ್ನು ಮಾಡುತ್ತಿತ್ತು ಈ ಸಂದರ್ಭವನ್ನು ಕುರಿತು "ಮಕರಾಕರದೊಳು ಪಗಲಾಣ್ಮರ ಪಜ್ಜಳವನು ಮಿಗುವಂಗದ ಶಿವಸಾಗರೇಶ್ವರನೆಂಬ ಸೊಗಸುವೆಸರ ತಾಳ್ದಿಸೆವನು."(೧೫/೪೧) ಸೂರ್ಯನ ಪ್ರಕಾಶಮಾನ ಬೆಳಕಿನಂತೆ 'ಶಿವಸಾಗರೇಶ್ವರ' ಎಂಬ ದೈವದ ಹೆಸರು ಪ್ರಸಿದ್ಧಿಯಾಗಿತ್ತು. ಜೊತೆಗೆ ಸಾಗರವು ಜಲಚರಗಳಿಗೆ ನೆಲೆಯಾಗಿದ್ದು, ಮುತ್ತುರತ್ನಗಳನ್ನು ಹೊಂದಿ ದೈವದಂತೆ ಪೂಜಿತಗೊಂಡಿದೆ. ಇಲ್ಲಿ ಸಮುದ್ರದ ಗಾಂಭೀರ್ಯ, ವಿಶಾಲ, ಆಳ, ಅಗಲಗಳು ಮಾನವನಿಗೆ ಪ್ರೇರಣೆಯಾಗಲೆಂದು ಕವಿ ಭಾವಿಸಿರಬೇಕು.

### ೭.೧.೩ ಪರ್ವತ

ಪರ್ವತ ಪ್ರಕೃತಿ ಸೃಷ್ಟಿಗಳಲ್ಲಿ ಒಂದು. ಈ ಪರ್ವತವು ಹಿಮ, ಮಣ್ಣು, ಕಲ್ಲುಗಳಿಂದ ಕೂಡಿರುತ್ತದೆ. ಪರ್ವತವು ಬೆಟ್ಟ, ಗಿರಿ, ಅಚಲ, ಮಲೆ, ಅದ್ರಿ ಮೊದಲಾದ ಹೆಸರುಗಳಿಂದ ಕರೆಯಲ್ಪಡುತ್ತದೆ. ಜನಪದರ ದೃಷ್ಟಿಯಲ್ಲಿ ಪರ್ವತವು ಪೂಜ್ಯನೀಯವಾದದ್ದು. ಪರ್ವತವು ದೇವರ ಆವಾಸಸ್ಥಾನವೆಂದು ಜನಪದರ ನಂಬಿಕೆಯಾಗಿದೆ. ಆ ಹಿನ್ನೆಲೆಯಲ್ಲಿ ಜನಪದರು ಪರ್ವತಗಳ ಮಧ್ಯದಲ್ಲಿ ಅಥವಾ ತುದಿಯಲ್ಲಿ ತಮ್ಮ ಇಚ್ಛಿತ ದೈವಗಳನ್ನು ಪ್ರತಿಷ್ಠಾಪಿಸಿ ಅದಕ್ಕೆ ದೇವಸ್ಥಾನ ಕಟ್ಟಿಸಿ ಆರಾಧನೆ ಮಾಡುತ್ತಿರುವುದನ್ನು ಇಂದಿಗೂ ಕಾಣಬಹುದು. ಇದು ಜನಪದರು ಪರ್ವತವನ್ನು ದೈವತ್ವಕ್ಕೇರಿಸಿದ ಪ್ರತೀಕವಾಗಿದೆ.

ದೇಪರಾಜ ಸೊಬಗಿನ ಸೋನೆ ಕಾವ್ಯದಲ್ಲಿ ಬೆಟ್ಟ, ವೆಟ್ಟ, ಪರ್ವತ, ಗಿರಿ, ಕುಧರೇಂದ್ರ, ಮೇಖಲೆ, ಅದ್ರಿ ಅಂತ ಹೆಸರಿಸಿ ಪರ್ವತವನ್ನು ತನ್ನ ಮನೋ ಇಚ್ಛೆಯಂತೆ ವರ್ಣಿಸಿರುವುದು ಕಂಡುಬರುತ್ತದೆ. ವಿಶಾಲವಾದ ಕನ್ನಡ ನಾಡಿನ ಪೂರ್ವದಲ್ಲಿ "ಪೊಂಬೆಟ್ಟ"(೧೨/೭) ಹಬ್ಬಿತ್ತು ಎಂದು ಕವಿ ಕಲ್ಪಿಸುತ್ತಾನೆ. ಆ ಬೆಟ್ಟದ ಸೌಂದರ್ಯವು ನಸುನಗುವಂತಿತ್ತು ಎಂಬ ಭಾವವಿದೆ.

"ಎಸೆವುದು ರತ್ನಮೇಖಲೆಯೆಂಬ ಗಿರಿಮೂಡ
ದೆಸೆಯ ಮುನ್ನೀರ ತೀರದೊಳಿಂದ...
ನಸುನಗುವುದು ಕುಲಗಿರಿಗಳ..."(೧೪/೩೨) ಎಂದು ಹೇಳುತ್ತಾ ಮುಂದುವರೆದು

"ಮಂದರ ಗೋವರ್ಧನ ಮೇರು ಮೈನಾಕ
ವಿಂದ್ಯಗಳ್ಕಡದೆತ್ತಿ ಭಾಗಿಸಿ..... ಬೆಟ್ಟು ನಗುವುದು"(೧೪/೩೩)

ನಾಗರಿಕ ಪಕ್ಷಿಯ ಹಿರಿಯರು ರತ್ನಮೇಖಲೆ ಎಂಬ ಪರ್ವತದಲ್ಲಿ ನೆಲೆಸಿದ್ದರು. ಆ ಪರ್ವತವು ವಜ್ರವೈಢೂರ್ಯಗಳ ನೆಲೆಬೀಡಾಗಿತ್ತು. ಇಂತಹ ಪರ್ವತವು ಮಂದರ ಅಂದರೆ ತೀರ್ಥಂಕರರ ಪಂಚಕಲ್ಯಾಣಗಳು ನಡೆಯುವ ಸ್ಥಳವೋ ಅಥವಾ ಶ್ರೀಕೃಷ್ಣನು ನೆಲಸಿದ ಪರ್ವತವೋ ಎಂಬಂತೆ ಇತ್ತು. ರತ್ನಗಿರಿ ಪರ್ವತವು ಪ್ರಕೃತಿದತ್ತವಾಗಿ ಸಂಪತ್ತಿನಿಂದ ಕೂಡಿತ್ತು.

"ಸಜೆ ಜಜೆ ಡೊಣೆ ತಪ್ಪಲು ಪಡಿವಾಸಜೆ
ಯಿಜು ಬಿಡುಕುಜು ಬೇರ್ಗುಹೆಗಳು"(೧೪/೩೬)

ತಗ್ಗು, ದಿನ್ನೆ, ತಪ್ಪಲು, ಗುಹೆಗಳಿದ್ದವು ಎಂದು ಪರ್ವತದ ಸ್ವರೂಪವನ್ನು ಮಾಡಿದ್ದಾನೆ.

"ಮಾವು ಕವುಂಗು ಕರ್ಜುರ ತೆಂಗು ಪಲಸೀಳೆ
ಬಾವನ್ನ ಬಕುಳ ಪಾದರಿ ಜಂಬು
ಗಾವಟೆ ಕರ್ಪುರವಾಳೆಯ ಸಸಿಯಲ್ಲ..."(೧೪/೩೮)

ಅಲ್ಲದೆ ಪರ್ವತಗಳಲ್ಲಿ ತೆಂಗು, ಮಾವು, ಅಡಿಕೆ, ಹಲಸು, ಕರ್ಜೂರ, ಬಕುಳ, ಪಾದರಿ, ಜಂಬು ನೇರಳೆ, ಕರ್ಪೂರ ಬಾಳೆ ಮುಂತಾದ ಫಲಭರಿತ ಮರಗಳಿದ್ದವು ಎಂಬುದನ್ನು

"ಅರಲ್‌ಬೀಯದ ಸಂಪಗೆ ತಳಿರ್ ಬೀಯದ
ಸಿರಿಖಂಡ ಕಾಯ್‌ಬೀಯದಿಮ್ಮಾವು
ಪರಿಮಳ ಬೀಯದಲರು ರಸಬೀಯದ
ಸರವರ..."(೧೪/೪೦)

ಪರ್ವತವು ಹೂ ಅರಳದ ಸಂಪಿಗೆ, ರಸ ತುಂಬದ ಸಿಹಿ ಮಾವುಗಳು, ಪರಿಮಳವಿಲ್ಲದ ಹೂ, ಸಾರವಿಲ್ಲದ ಸರೋವರ ಇಲ್ಲವೆನ್ನುತ್ತಾನೆ.

"ರಸಸಿದ್ದರಸ ಚೆಂಬೊನ್ನು ಚಂದ್ರಿಕೆ ದೀಪ್ತಿ
ಗೊಸರುವ ಶಶಿಕಾಂತದ
ರಸತೀವಿದ ಕೆಜೆಕೊಳಮಡು ತೊಜೆಕಂ
ಗೆಸದವು ರತ್ನಮೇಖಲೆಯೊಳು"(೧೪/೪೨)

ಅಂದರೆ ರತ್ನಮೇಖಲೆ ಪರ್ವತದಲ್ಲಿ ಕೆರೆ, ಕೊಳ, ಮಡು, ತೊರೆಗಳಿಂದ ಆಕರ್ಷಕವಾಗಿತ್ತು. ಅಲ್ಲಿ ಸಿದ್ದವಾದ ರಸ, ಕೆಂಪಾದ ಹೊನ್ನು ಸಹಜವಾಗಿ ನಿರ್ಮಿತವಾಗಿದ್ದ ಗುಹೆಗಳು ಇದ್ದವು. ಫಲಭರಿತವಾದ ಮಾವು, ತೆಂಗು, ಅಡಿಕೆ, ಕರ್ಜೂರ, ಹಲಸು, ಜಂಬುನೇರಳೆ, ಬಕುಳ, ಪಾದರಿ, ಕರ್ಪೂರಬಾಳೆಗಳಿದ್ದವು. ಸರೋವರಗಳು ಸಂಪಿಗೆ ಹೂ ಮೊಗ್ಗುಗಳಿಂದ ಪರಿಮಳವನ್ನು ಸೂಸುತ್ತಿದ್ದು ಬೆಟ್ಟ ಸೌಂದರ್ಯದ ತಾಣವಾಗಿತ್ತು. ಬೆಟ್ಟದಲ್ಲಿ ಕಪಿ ಸಮೂಹಗಳಿದ್ದು ಅವುಗಳು ಬೆಟ್ಟವನ್ನು ಕುರಿತ ಕಥೆಯನ್ನು ಮುನಿಕುಮಾರರಿಗೆ ಹೇಳುತ್ತಿದ್ದವು.

"ಅಲ್ಲಿಯ ಮುದಿಗಪಿಗಳು ಮುನಿಕುವರರಿ
ಗೆಲ್ಲಾಗಳಾ ವೆಟ್ಟುಗಥೆಯನು"(೧೪/೪೬)

ಜನಪದರು ಬೆಟ್ಟಕ್ಕೆ ಒಂದು ಕತೆ ಇದೆ ಎಂದು ನಂಬುತ್ತಾರೆ. ಇಂತಹ ನಂಬಿಕೆ ಕುರಿತು ಕಪಿಗಳು ಮುನಿಕುಮಾರರಿಗೆ ಹೇಳುತ್ತಿರುವುದನ್ನು ಕವಿ ಪ್ರಾಸಂಗಿಕವಾಗಿ ಹೇಳಿದ್ದಾನೆ. ಮೇರು, ಮಂದಾರ, ಹಿಮಾಲಯ, ವಿಂಧ್ಯ ಮುಂತಾದ ಮಹಾಪರ್ವತಗಳ ಆಶ್ರಯಗಳಲ್ಲಿ ಸುರಮುನಿಗಳು ಶಾಸ್ತ್ರವನ್ನು ಕಲಿತು ಇರುತ್ತಿದ್ದರು. ಹಾಗೆ ರತ್ನಮೇಖಲೆ ಎಂಬ ಪರ್ವತದಲ್ಲಿಯೂ ಮುನಿಗಳ ಆಶ್ರಯ ಪಡೆಯುತ್ತಿದ್ದರು. ಹಂಪಿಯ ಪರಿಸರದಲ್ಲಿ ಅನೇಕ ಪರ್ವತಗಳಿದ್ದು ಇವು ಸಂಪತ್ತಿನ ನೆಲೆಗಳಾಗಿದ್ದವು. ಹಾಗೂ ಪ್ರಾಣಿ, ಪಕ್ಷಿ, ಮರ-ಗಿಡಗಳಿಂದ ಆವರಿಸಿದ್ದು, ಜನತೆಗೆ ಪೂಜ್ಯನೀಯವಾಗಿರುವುದು ಕಂಡುಬರುತ್ತದೆ.

### ೭.೧.೪ ವನ ಸಂಪತ್ತು

ವನ ಸಂಪತ್ತು ಒಂದು ದೇಶದ ಸುಖಸಮೃದ್ಧಿಯನ್ನು ಸಾರುತ್ತದೆ. ಪ್ರಕೃತಿ ಸೃಷ್ಟಿಗಳಲ್ಲಿ ವನ ಪ್ರಮುಖವಾಗಿದೆ. 'ವನ' ಬನ, ಕಾಡು, ಕಾನನ, ಕಾಂತಾರ, ಸಸ್ಯ, ಗಿಡ, ಅಟವಿ, ಅಡವಿ, ಅರಣ್ಯ, ವಿಪಿನ ಮುಂತಾದ ಹಲವು ಶಬ್ದಗಳು ಚಾಲ್ತಿಯಲ್ಲಿವೆ. ಈ ಕಾವ್ಯದಲ್ಲಿ ವನ ಇಲ್ಲವೆ ಬನ ಎಂಬ ಪದವನ್ನು ಹೆಚ್ಚು ಪ್ರಯೋಗಿಸಲಾಗಿದೆ. ವನವು ಗಿಡ, ಮರ, ಲತೆ-ಬಳ್ಳಿ, ಫಲ-ಪುಷ್ಪ, ಪ್ರಾಣಿ ಪಕ್ಷಿ ಹೀಗೆ ಹಲವು ಸಂಪನ್ಮೂಲಗಳಿಂದ ಕೂಡಿರುತ್ತದೆ. ನಗರ ಜೀವನಕ್ಕೆ ಅವಶ್ಯಕವಾದ ಅನೇಕ ವಸ್ತುಗಳು ವನದಿಂದಲೇ ಪೂರೈಕೆಯಾಗುತ್ತದೆ.

ಪ್ರಾಚೀನತೆಯಿಂದ ಆಧುನಿಕತೆಯವರೆಗೆ ಕವಿಗಳು ವನದ ವಿಸ್ಮಯಕ್ಕೆ ಮನಸೋತು ತಮ್ಮ ಅನುಭವಗಳನ್ನು ಕಾವ್ಯಗಳಲ್ಲಿ ಅಭಿವ್ಯಕ್ತಿಸಿದ್ದಾರೆ. ಹಾಗೆಯೇ ಸೊಬಗಿನ ಸೋನೆ ಕಾವ್ಯದಲ್ಲಿ ದೇಪರಾಜ ವನದ ಸೊಬಗನ್ನು ಹಲವು ಬಗೆಯಲ್ಲಿ ಸಾಂದರ್ಭಿಕವಾಗಿ ವರ್ಣಿಸಿದ್ದಾನೆ.

"ಪರಿವ ಪನ್ನೀರ ಕಾಲುವೆ ಪೊಗುತಿಹ ತಾ
ವರೆಗೊಳ ಚೆಂಗಣೆಗಿಲ ಮಡು
ಅರಳ್ತೀವಿದ ಬಳ್ಳಿ ಅಳಿಯಂಚೆ ಗಿಳಿಸೋಗೆ
ಪರಪುಟ್ಟನಿಲ್ಲದ ಬನವಿಲ್ಲ"(೧/೩೮)

ಬನವು ಕನ್ನಡ ನಾಡಿನಲ್ಲಿ ಪ್ರಕೃತಿ ಸೌಂದರ್ಯವನ್ನು ಬಿಂಬಿಸುವಂತೆ ಇತ್ತು. ಅಲ್ಲಿ ಹರಿವ ಪನ್ನೀರ ಕಾಲುವೆಗಳು, ತಾವರೆಯುಕ್ತ ಕೊಳಗಳು, ಹೂಮೊಗ್ಗುಗಳಿರುವ ಬಳ್ಳಿ, ದುಂಬಿ, ಹಂಸ, ಗಿಳಿ, ನವಿಲು, ಕೋಗಿಲೆಗಳಿಂದ ವನ ಸಂಪತ್ತಿನಿಂದ ಕೂಡಿತ್ತು.

"ಅಱೆಯಿರೆ ರೋಷಭಾಸ್ಕರನ ನಂದನವೆಂದು
ಕಿಱುಬುತನವ ನೀವು ಮಾಳ್ಪರೆ
ಪೊಱಮಡಿ ಸೌಂದರನಾಣೆಯಿನ್ನಿರ್ದುನಿ
ಮ್ಮೞೆಯಗಳಿವ ತರಬೇಡೆಂದ"(೬/೨೨)

ರೋಷ ಭಾಸ್ಕರ ಮುನಿಯ ಆಶ್ರಮವು ವನ ಸಂಪತ್ತಿನಿಂದ ಕೂಡಿತ್ತು. ಅಲ್ಲಿಗೆ ಕಾಶ್ಮೀರದ ಸೌಂದರ ಎಂಬ ರಾಜ ಬೇಟೆಯಾಡುತ್ತ ನಂದನವನವನ್ನು ಹೊಕ್ಕು ಅಲ್ಲಿಯ ವನಸಂಪತ್ತನ್ನು ನಾಶಪಡಿಸಿದನು. ರಾಜ ಮುನಿಯ ಉಗ್ರ ಕೋಪಕ್ಕೆ ಬಲಿಯಾಗಿ ಶಾಪಕ್ಕೊಳಗಾಗುವ ದೃಶ್ಯವು ಪ್ರಕೃತಿ ವಿಕೋಪದಂತೆ ಚಿತ್ರಣಗೊಂಡಿದೆ. ಇದು ಪರಿಸರ ಕಾಳಜಿಯನ್ನು ಮುನಿಯ ಮೂಲಕ ವ್ಯಕ್ತಪಡಿಸಿರುವುದನ್ನು ಸೂಚಿಸುತ್ತದೆ. ಅಷ್ಟೇ ಅಲ್ಲದೆ ಪರಿಸರ ಹಾಳಾದರೆ ನಮ್ಮ ವಿಧಿಗೆ ಕೇಡಾದಂತೆ ಎನ್ನುತ್ತದೆ.

"ನಂದನ ಪಾಳಾದುರಿಂದ ಬಿದಿ ನಮ್ಮ
ಹಿಂದ ಹಿಡಿದ ಕೇಡ ಕೇಳ್ಳೂಪ"(೭/೬)

ವಿಕ್ರಮ ವಸಂತೆಯ ಸಂಕಲ್ಪ ಈಡೇರಿಸುವುದಕ್ಕಾಗಿ ಮಹಾಕಾಳಿಯ ವನಕ್ಕೆ ಬರುತ್ತಾನೆ. ಆ ವನ ಪ್ರಕೃತಿ ಸಂಪತ್ತಿನಿಂದ ಕೂಡಿತ್ತು. ವನದಲ್ಲಿ ಗೆಡ್ಡೆ ಗೆಣಸು ತಿಂದು ಹೂ, ಪಕ್ಷಿಗಳಿಂದ ಕೂಡಿ ಅದು ಮಹಾ ಅರಣ್ಯವೇ ಆಗಿತ್ತು ಎಂದು ಕವಿ ವರ್ಣಿಸಿದ್ದಾನೆ.

"ನಲ್ಲಳೆ ಕೇಳ್ಮರ ಗಿಡು ಬಳ್ಳಿ ಪಲವೆಟ್ಟು
ವಲ್ಲಲ್ಲಿ ತೋಱೆ ಸೋಗೆ ಮಿಗವಕ್ಕಿ
ಎಲ್ಲೆಲ್ಲಿಯು ಮಾಕಾಳ ಪೇರಡವಿಯೊ
ಳಿಲ್ಲದವಿಲ್ಲ ಮತ್ತೆಲ್ಲಿಯು"(೧೧/೨೭)

ಮುಂದುವರಿದು ಮತ್ತೊಂದು ಹಂದಿ ಬೇಟೆಯ ದೃಶ್ಯವನ್ನು ಕಂಡು "ಈಕಾಡೊಳು ಭೀಕರ ಸೂಕರಾಕಾರವೇಕೆ ಬಂದುದು..."(೧೨/೨೧) ಎಂದು ಪ್ರಶ್ನಿಸುತ್ತ ಕಾಡಿನ ಮೃಗಗಳನ್ನು ಕಾಣುತ್ತಾನೆ. ಅಲ್ಲಿ ಬೇಡರು ಬೇಟೆಯಾಡಿ ವಿಕ್ರಮನಿಗೆ ಕೆಲವೊಂದು ಕಾಡಿನ ವಸ್ತುಗಳನ್ನು ಕಾಣಿಕೆಯಾಗಿ ಅರ್ಪಿಸಿದ್ದರು.

"ಆನೆಗೋಡ್ಗಳ ಪಂದಿಯ ದಾಡೆಗಳ ಖಡ್ಗ
ಧೇನು ಶೃಂಗವ ಪುಲಿಯುಗುರ್ಗಳ
ಕಾನನದೊಳು ಫಲಗಳ ಮಿಗವಱೆಗಳ
ಜೇನ್ಗೊಡಗಳ ತಂದಿತ್ತರು"(೧೪/೧೩)

ಬೇಡರು ಆನೆ, ಹಂದಿ, ಹುಲಿ ಮುಂತಾದ ಕಾಡು ಮೃಗಗಳಿಂದ ಪ್ರಮುಖ ವಸ್ತುಗಳನ್ನು ಹಾಗೂ ಜೇನನ್ನು ಸಂಗ್ರಹಿಸುತ್ತಿದ್ದರು.

"ಕೊನರಂಕುರ ತಳಿರೆಲೆ ಪಸುರೆಲೆಯಲ
ರ್ಗನೆ ಮಿಡಿ ಬಲ್ಮಿಡಿಕೆಂಗಾಯಿ
ತನಿವಣ್ಣು ತರದಲೇಜೆದ ಕೊಂಬು ಕೊಂಬಿನಿಂ
ದಿನಿ ಮಾವು ಕಂಗೆಸದವು ಮುಂದೆ"(೧೯/೬೩)

ಮರದ ವರ್ಣನೆಯಲ್ಲಿ ಸಿಹಿ ಮಾವಿನ ಹಣ್ಣಿನ ಮರಗಳು ಚಿಗುರು, ಕೆಂದಳಿರು, ಹಸಿರೆಲೆ, ಮೊಗ್ಗು, ಮಿಡಿಗಾಯಿ, ದೊಡ್ಡಕಾಯಿ, ಕೆಂಪಾದ ಕಾಯಿ, ಹಣ್ಣುಗಳಿಂದ ಪ್ರತಿಯೊಂದು ರಂಬೆ, ಕೊಂಬೆಗಳು ತುಂಬಿಕೊಂಡಿದ್ದವು.

"ಸೊಂಪಿನ ಗೊತ್ತಲರಿನ ಪೇರೆ ಪೊಬೀಡು
ತಂಪಿನ ತಾಣ ತುಂಬಿಗಳಿಕ್ಕೆ
ಕಂಪುಗಣಿಯನಿರುಳರಸ ವಸಂತರ್ಕ
ಳಂ ಪೊರೆವೊಂದು ನಂದನವನ"(೨೦/೩೬)

ನಂದನವನವು ಹೂವಿನ ದುಂಬಿಗಳ ತಂಪಿನ, ಕಂಪಿನ ತಾಣವಾಗಿತ್ತು. ಈ ವಸಂತ ಚೆಲುವಾಗಿದ್ದು ಚಂದ್ರ, ಸೂರ್ಯರು ನೋಡುವಂತಿದ್ದರೆಂಬ ಕಲ್ಪನೆ ಇದೆ.

"ಸುತ್ತಿರ್ದ ಪೊಂಗೇದಗೆಗೋಂಟೆ ಮಾವುಗ
ಳ್ಕೊತ್ತಳವಸೋಕೆಯಟ್ಟಳೆ ಕಾಯ
ಪೊತ್ತ ತೆಂಗುಗಳ ಡೆಂಕಣಿಯಿಂದ ವನವೆಸ
ದತ್ತಂಗಜನ ದುರ್ಗದವೊಲು"(೨೦/೭೭)

ಈ ವನ ಹೊಂಗೆ, ಕೇದಗೆಯಕೋಟೆಯಂತೆ, ಮಾವಿನಕೊತ್ತಲ, ಅಶೋಕೆಯಅಟ್ಟಳೆ, ತೆಂಗಿನಮರಗಳಿಂದ ಸಮೃದ್ಧವಾಗಿ ಸುತ್ತುವರಿದಿತ್ತು. ಇದು ಮನ್ಮಥನ ವನದುರ್ಗದಂತೆ ಈ ಕಾವ್ಯದಲ್ಲಿ ವರ್ಣಿತಗೊಂಡಿದೆ. ನಂದನವನ, ಉದ್ಯಾನವನ, ಕಾಡು, ಅರಣ್ಯಗಳಲ್ಲಿ ಪಕ್ಷಿ, ಪ್ರಾಣಿ, ದುಂಬಿಗಳಿದ್ದವೆಂದು ಅಲ್ಲಿಯ ಮರಗಳು ಫಲಗಳಿಂದ ಕೂಡಿದ್ದವೆಂಬುದನ್ನು ವರ್ಣಿಸಲಾಗಿದೆ. ಈ ಮೇಲಿನ ಅಂಶಗಳಿಂದ ವಿಜಯನಗರ ಸಾಮ್ರಾಜ್ಯದ ಸುತ್ತಮುತ್ತ ವನ ಸಮೃದ್ಧವಾಗಿ ಬೆಳೆದಿದ್ದು, ಅಂದಿನ ಜನರ ಜೀವನಕ್ಕೆ ಉಪಯುಕ್ತವಾಗಿತ್ತೆಂದು ತಿಳಿದುಬರುತ್ತದೆ.

### ೭.೧.೫ ಪುಷ್ಪ ಸಂಪತ್ತು

ಪ್ರಕೃತಿಯಲ್ಲಿ ಸೃಷ್ಟಿಯಾದ ಬೀಜ ಮಣ್ಣಲ್ಲಿ ಬಿದ್ದು ಸಸಿಯಾಗಿ, ಗಿಡ ಮರವಾಗುವ ಹಂತ ತಲುಪುವುದು ಹೂವಿನಿಂದ. ಇದು ಬಳ್ಳಿಗಳಿಗೂ ಅನ್ವಯಿಸುತ್ತದೆ. ಅಂದರೆ ಮುಂದೆ ತನ್ನ ವಂಶವನ್ನು ವೃದ್ಧಿಸಿಕೊಳ್ಳುವ ಹಂತವನ್ನು ತಲುಪುವಾಗ ಗಿಡ ಮರ ಬಳ್ಳಿಗಳಲ್ಲಿ ಹೂ ಅರಳುತ್ತದೆ. ಅಂದರೆ ಗಿಡ ಮರ ಬಳ್ಳಿಗಳು ಮುಂದಿನ ವಂಶವೃದ್ಧಿಗೆ ಸಿದ್ಧವಾಗಲು ಪಕ್ವತೆಯ ಹಂತಕ್ಕೆ ಬಂದಿದೆ ಎಂಬುದು ಹೂ ಅರಳುವಿಕೆಯಿಂದ ಗ್ರಹಿತವಾಗುತ್ತದೆ. ಪ್ರಕೃತಿಯಲ್ಲಿ ಹೀಗೆ ನೂರಾರು ತರಹದ ಹೂಗಳು ಅರಳಿ ಸೌಂದರ್ಯರಸಿಕರ ಮನಸ್ಸನ್ನು ಉದ್ದೀಪಿಸದ್ದರ ವರ್ಣನೆ ಅನೇಕ ಕಾವ್ಯಗಳಲ್ಲಿ ಕಂಡುಬರುತ್ತದೆ. ಇದಕ್ಕೆ ಸೊಬಗಿನ ಸೋನೆ ಕಾವ್ಯವು ಹೊರತಾಗಿಲ್ಲ. ಕವಿ

ದೇಪರಾಜ ತನ್ನ ಕಾಲಘಟ್ಟದಲ್ಲಿ ಕಂಡುಬರುವ ಹೂಗಳ ವರ್ಣನೆಯನ್ನು ಮಾಡಿರುವುದನ್ನು ಕಾಣಬಹುದು. ಅದರಲ್ಲಿ ಮುಖ್ಯವಾಗಿ 'ಮಂದಾರ' ಪುಷ್ಪವನ್ನು ಕುರಿತು ವಿಶೇಷವಾಗಿ ಈ ಕಾವ್ಯದಲ್ಲಿ ವರ್ಣಿಸಿರುವುದನ್ನು ಕಾಣಬಹುದು. ಹೂ ಮುಡಿದ ಹೆಣ್ಣು ಸುಂದರವಾಗಿ ಕಾಣುವುದ ರೊಂದಿಗೆ ಮೃದು ಮನಸ್ಸು ಮತ್ತು ಆಕರ್ಷಣೀಯ ಮುಖಭಾವವನ್ನು ಹೊಂದಿರುವುದನ್ನು ಕಾಣಬಹುದಾಗಿದೆ. ಅಂತೆಯೇ

"...ಇಂದು ಶೇಖರನಗಜೆಯ ಮುಡಿಯೊಳ

ಗಿಂದ ಮಂದಾರದರಳ ಕೊಟ್ಟ"(೨/೪೩) ಎಂದಿದೆ. ಜಯಶೇಖರ ಸಂತಾನಕ್ಕಾಗಿ ಶಿವನನ್ನು ಕುರಿತು ತಪಸ್ಸು ಮಾಡಿದನು. ಶಿವ ಪಾರ್ವತಿಯ ಮುಡಿಯಿಂದ ಮಂದಾರದ ಅರಳನ್ನು ಸಂತಾನ ಪ್ರಾಪ್ತಿಯಾಗಲೆಂದು ಕೊಟ್ಟನು. ಈ ಪ್ರಸಂಗವು ಕಾವ್ಯದಲ್ಲಿ ಇದೆ. 'ಮಂದಾರ' ಎಂದರೆ ಕನ್ನಡ ಸಾಹಿತ್ಯ ಪರಿಷತ್‌ನ ಕನ್ನಡ ನಿಘಂಟಿನಲ್ಲಿ "ಒಂದು ಬಗೆಯ ಮರ ಮತ್ತು ಸುವಾಸನೆಯುಳ್ಳ ಅದರ ಹೂವು, ಸುರಾಸುರರು ಕ್ಷೀರ ಸಮುದ್ರವನ್ನು ಕಡೆದಾಗ ಹುಟ್ಟಿದ ಐದು ಕಲ್ಪವೃಕ್ಷಗಳಲ್ಲಿ ಒಂದೆಂದು ನಂಬಲಾಗಿದೆ. "ಮಂದಾರ, ಪಾರಿಜಾತಕ, ಹರಿಚಂದನ, ಕಲ್ಪವೃಕ್ಷ, ಸಂತಾನ, ಈ ಐದು ದೇವರ ಮರಂಗಳ್"[೧೨] ಎಂಬ ಅರ್ಥವನ್ನು ನೀಡಿದೆ. ಅಂದರೆ ಮಂದಾರ ಹೂ ಐದು ಕಲ್ಪವೃಕ್ಷಗಳ ಹೂಗಳಲ್ಲಿ ಒಂದೆಂದು ಅರ್ಥೈಸಬಹುದು. ಮಂದಾರದ ಅರಳು, ಮಂದಾರ ಹೂ, ದೇವಕುಸುಮ ಎಂಬ ಮುಂತಾದ ಹೆಸರುಗಳಿಂದ ಕಾವ್ಯದಲ್ಲಿ ಕವಿ ಹೆಸರಿಸಿದ್ದಾನೆ.

"ಹೊತ್ತಜೆದರಸ ಸುರಭಿವತಗಂದೊಲಿ

ದಿತ್ತನು ಮಂದಾರದರಳನು"(೩/೫೫)

ಮಂದಾರದ ಅರಳನ್ನು ಸುರಭಾವತಿಗೆ ಶುಭಗಳಿಗೆಯಲ್ಲಿ ಮುಡಿಸಿದನು. ಇದರಿಂದ ರಾಣಿಯ ಚೆಲುವು ಮತ್ತಷ್ಟು ಹೆಚ್ಚಾಯಿತು. ಇದೊಂದು ರೀತಿಯಲ್ಲಿ ಮುಂದಿನ ಪೀಳಿಗೆಗೆ ಮುನ್ಸೂಚನೆಯಂತೆ ಕವಿ ವರ್ಣಿಸಿದ್ದಾನೆ. ಮಂದಾರ ಹೂವಿನ ಚೆಲುವು, ವಾಸನೆ, ಮಹತ್ವ ಕುರಿತು ಈ ಪದ್ಯದಲ್ಲಿ ವರ್ಣಿಸಿದೆ.

"ಕಂಪಿನ ಗುಂಪ ಬಂಡಿನ ಬಗ್ಗ ಪೆರ್ಮೆಯ
ಪೆಂಪ ಚೆನ್ನಿನ ಚೇತನವನು
ತಂಪಿನ ತಾಣವೆನಿಪ ಮಂದಾರದ ಪೂವ
ನಾಂ ಪೊನ್ನ ಪುಡಿಕೆಯಿಂ ತೆಗೆದನು"(೧೨/೫೮)

ಕಂಪು, ತಂಪು, ಹಿರಿಮೆ, ಚೆಲುವಿನ ಚೇತನವುಳ್ಳದ್ದೆಂದು ವರ್ಣಿಸಿದೆ. ಇಂತಹ ಹೂವನ್ನು ಮುಡಿದುಕೊಂಡ ರಾಣಿ

"ಎಸೆದಳರಸಿ ಭೂಪನ ಕೆಲದೊಳು ವರ
ಕುಸುಮವ ಸೂಡಿದು ಬೇಜೊಂದು
ಎಸಕ ಸೌಂದರ ದೇಸಿ ಜಸಗೂಡಿ ಪುಟ್ಟವಿಟ್ಟ

ಮಿಸುನಿಯ ಪೊಸಪುತ್ಥಳಿಯಂತೆ(೩/೬) ಎಂದು ಕವಿ ವರ್ಣಿಸಿದ್ದಾನೆ. ಅಂದರೆ ಸುರಭಾವತಿ ರಾಣಿ ಮಂದಾರ ಹೂವನ್ನು ಮುಡಿದು ಹೊಸ ಬೊಂಬೆಯಂತೆ ಕಂಗೊಳಿಸಿದಳು ಎಂದು ಹೇಳುವ ಕವಿಯು ಸಂತಾನ ಫಲವನ್ನು ನೀಡಲು ಸಿದ್ಧಳಿದ್ದಾಳೆ ಎಂಬ ಭಾವ ವ್ಯಕ್ತಪಡಿಸಿದ್ದಾನೆ. ಸಂತಾನದ ಬಯಕೆಯಿಂದ ಕೊರಗುತ್ತಿದ್ದ ರಾಣಿಯು ಮಂದಾರ ಪುಷ್ಪವನ್ನು ಧರಿಸಿದ್ದರಿಂದ ಸಂಕಲ್ಪಿಸಿದ ಸುತರನ್ನು ಪಡೆಯುವೆನೆಂಬ ಆತ್ಮಸ್ಥೈರ್ಯವನ್ನು ಹೊಂದಿದಳು. ಮುಂದುವರಿದು ಕವಿ "ಮಂದಾರ ಮಂಮಲರಿಸಿದರೆವ್ವನೆಯರು(೩/೨೮) ರಾಣಿ ಮುಡಿದ್ದದನ್ನು ಕಂಡ ಇತರ ಯುವತಿಯರು ಮಂದಾರ ಹೂವನ್ನು ಮುಡಿದು ಸೌಂದರ್ಯದಿಂದ ಕಂಗೊಳಿಸಿದರು.

ಸುರಭಿಶೇಖರನೆಂಬ ಶಿವಭಕ್ತ ಕೈಲಾಸದಲ್ಲಿ ಪಾರ್ವತಿಗೆ ಮಂದಾರದ ಹೂವನ್ನು ತಂದು ಕೊಡುತ್ತಿದ್ದ ಇದನ್ನು ನೋಡುತ್ತಿದ್ದ ಗಂಗೆಯು ಈ ಮಂದಾರದ ಹೂವನ್ನು ಮುಡಿಯಲು ಆಸೆಪಟ್ಟಳು.

"...ಮಂದಾರದರಳ್ಗಳ
ನಾಂ ತರುತಿರಲಘಹರೆಹರನೂಳ್ಮುಡಿ
ಯಾಂತೂಡಗೊಂಡುಳ್ಕಂಡಳು ಕೇಳ(೧೨/೩೫)

ಗಂಗೆಯು ಶಿವನ ಮುಡಿಯಲ್ಲಿದ್ದವಳಾಗಿ ತಾನು ಮಂದಾರ ಕುಸುಮವನ್ನು ಮುಡಿಯುವ ಬಯಕೆಯಿಂದ ಸುರಭಿಶೇಖರನನ್ನು ಇಕ್ಕಟ್ಟಿಗೆ ಸಿಲುಕಿಸುತ್ತಾಳೆ. ನಿತ್ಯವೂ ಮಂದಾರದ ಹೂವನ್ನು ಪಾರ್ವತಿಗೆ ಕೊಟ್ಟು ಬರುತ್ತಿದ್ದವ ಅಂದು ಗಂಗೆಗೆ ಕೊಡುತ್ತಾನೆ. ಇದಕ್ಕೆ ಪಾರ್ವತಿಯು ಶಿವನಿಂದ ಶಾಪವನ್ನು ಕೊಡಿಸುತ್ತಾಳೆ. ಈ ಪ್ರಸಂಗವು ಪಾರ್ವತಿ ಮತ್ತು ಗಂಗೆಯರಿಬ್ಬರೂ ಮಂದಾರದ ಅರಳನ್ನು ಮುಡಿದು ಶ್ರೇಷ್ಠರಾಗಲು ಬಯಸುತ್ತಾರೆ. ಅಂದರೆ ಮಂದಾರ ಹೂವನ್ನು ಧರಿಸಿದವರು ಇಚ್ಛಿತ ಫಲವನ್ನು ಕೊಡುವ ಸಾಮರ್ಥ್ಯವನ್ನು ಹೊಂದಿರುತ್ತಾರೆ

ಅರಮನೆಯ ಉದ್ಯಾನವನದಲ್ಲಿ ಸ್ತ್ರೀಯರು ವಿವಿಧ ಹೂಗಳನ್ನು ಕೀಳುವುದನ್ನು ವರ್ಣಿಸಿದ್ದಾನೆ.

"ಪೂದಿಜೆಯಲು ಪರಿದರು ನನೆವಿಲ್ಲನ
ಪೂದೊಣೆಗಣೆ ಪರೆದಂದದಿ
ಪಾದರಿ ಬಕುಳ ಮಲ್ಲಿಗೆ ಮೊಲ್ಲೆಮೊದ
ಲಾದ ಪೂದಾಣ ಮರವಳ್ಳಿಗಳೊಳು"(೩/೨೩)

ಮನ್ಮಥನ ಹೂ ಬಾಣಕ್ಕೆ ಕಡಿಮೆಯೇನಿಲ್ಲವೆಂಬಂತೆ ಸ್ತ್ರೀಯರು ಪಾದರಿ, ಬಕುಳ, ಮಲ್ಲಿಗೆ, ಮೊಲ್ಲೆ ಮುಂತಾದ ಹೂವಿನ ತಾಣವೆನ್ನುವ ಮರ ಬಳ್ಳಿಗಳಿಂದ ಸಂಗ್ರಹಿಸಿದರು. ಮತ್ತೆ ರಾಜನಿಗಾಗಿ ಕಿತ್ತು ತಂದ ಹೂಗಳೆಂದರೆ,

"ಮರುಗವ ಚೆಂಗಣಿಗಿಲೆಯ ಮಲ್ಲಿಗೆಯ ತಾ
ವರೆಯ ನೈದಿಲದ್ಯಗಂತಿಯ
ಗೊರವಿಯ ಬನಸಂಪಗೆಯ ಸೇವಂತಿಗೆ
ಯರಳ ತಂದಿತ್ತರರಸಗಂದು"(೩/೪೪)

ಮತ್ತೆ ಒಬ್ಬೊಬ್ಬ ಸ್ತ್ರೀ ಒಂದೊಂದು ಹೂವನ್ನು ತಂದು ಮನ್ಮಥನ ಬಾಣದಂತೆ ಬಿಟ್ಟಳು. ಅವು ತಾವರೆ, ಮಾಕಂದದರಳು (ಮಾವಿನ) ಕುಟ್ಮಜ (ಕೊಡಸಿಗೆ ಹೂ) ಅಶೋಕೆ, ಅಸಿತಾಬ್ಜ (ಕೆಂಪು ಕಮಲ), ಈ ಐದು ಹೂ ಬಾಣಗಳು ಒಂದರ ನಂತರ ಒಂದು ಹೂಬಾಣಗಳಂತೆ ಅರಸನಿಗೆ ಬಿಟ್ಟರು. ಸಂಪಿಗೆ, ಸೇವಂತಿ, ಜಾಜಿ, ನೀಲಿಕಮಲ, ಮರುಗ, ದವನ, ಬಂಗಾರದಂತ ಕೇದಿಗೆ, ಮಕರಂದ ಮುಂತಾದ ಹೂಗಳ ವರ್ಣನೆಯಿದೆ. ವಿಜಯನಗರ ಸಾಮ್ರಾಜ್ಯದಲ್ಲಿರುವ ಹೂಗಳ ಸಂಪತ್ತನ್ನು ನೋಡಿ ವಿದೇಸಿ ಪ್ರವಾಸಿಗರು ಮತ್ತು ಸ್ಥಳೀಯ ಕವಿಗಳು ಪ್ರಶಂಸಿರುವುದನ್ನು ಕಾಣಬಹುದು. ಅಂತಹ ಕವಿಗಳಲ್ಲಿ ದೇಪರಾಜನು ಒಬ್ಬ. ಈತ ತನ್ನ ಕಾವ್ಯದಲ್ಲಿ ವಿವಿಧ ತೆರನಾಗಿ ವರ್ಣಿಸಿದ್ದನ್ನು ನೋಡಬಹುದಾಗಿದೆ.

### ೭.೧.೬ ಪ್ರಾಣಿ-ಪಕ್ಷಿ

ಪ್ರಾಕೃತಿಕ ವೈಶಿಷ್ಟ್ಯಗಳಲ್ಲಿ ಪ್ರಾಣಿ-ಪಕ್ಷಿಗಳು ಪ್ರಮುಖವಾಗಿವೆ. ಇವು ಅರಣ್ಯ ಹಾಗೂ ಊರು ಕೇರಿಗಳಲ್ಲಿ ನೆಲೆಸಿರುತ್ತವೆ. ಇವುಗಳನ್ನು ಅವಲಂಬಿಸಿ ಮಾನವ ತನ್ನ ಬದುಕಿಗೆ ಅನುಕೂಲವನ್ನು ಮತ್ತೆ ಕೆಲವೊಮ್ಮೆ ಅಪಾಯವನ್ನು ತಂದುಕೊಂಡಿದ್ದಾನೆ. ಪ್ರಾಚೀನ ಕಾಲದಿಂದ ಇಂದಿನವರೆಗೂ ಮಾನವ ಪ್ರಾಣಿ ಪಕ್ಷಿಗಳನ್ನು ಬಳಸಿಕೊಂಡು ತನ್ನ ಜೀವನ ಸಾಗಿಸಿಕೊಂಡು ಬಂದಿದ್ದಾನೆ. ಇವು ನಾಡಿನ ಜೈವಿಕ ಸಂಪತ್ತಾಗಿವೆ. ಪ್ರಕೃತಿ ವರ್ಣನೆಯನ್ನು ಮಾಡುವಾಗ ಕವಿಗಳು ಪ್ರಾಣಿ-ಪಕ್ಷಿಗಳನ್ನು ವಿಶೇಷವಾಗಿ ವರ್ಣಿಸಿರುವುದನ್ನು ಕಾಣಬಹುದು. ಹಾಗೆಯೇ ದೇಪರಾಜ ಈ ಕಾವ್ಯದಲ್ಲಿ ಅರಣ್ಯದಲ್ಲಿದ್ದ ಪ್ರಾಣಿ ಪಕ್ಷಿಗಳ ವರ್ಣನೆ ಮಾಡಿರುವುದನ್ನು ಗಮನಿಸಬಹುದು.

ಸೌಂದರ ರಾಜನ ವ್ಯಾಪ್ತಿಗೆ ಸೇರಿದ ಅರಣ್ಯದಲ್ಲಿ ಸಿಂಹದ ತೊಂದರೆಯಿಂದ ರಕ್ಷಣೆ ಮಾಡಬೇಕೆಂದು ಬೇಟೆಗಾರನು ರಾಜನಲ್ಲಿ

"ದೇವ ಚಿತ್ತೈಸು ಗಂಡಿಗ ಸಿಂಗವೊಂದೆಮ್ಮ
ಕಾವಲ ಹೊಲಕೈತಂದುದು"(೫/೪೦) ವಿನಂತಿ ಮಾಡುತ್ತಾನೆ.

ರಾಜ ಕುದುರೆಯೊಂದಿಗೆ ಸೈನ್ಯ ಪರಿವಾರ ಸಹಿತ ಬೇಟೆಗೆ ಹೊರಟು ಸಿಂಹವನ್ನು ಸಂಹಾರ ಮಾಡುತ್ತಾನೆ. ಮುಂದೆ ಮಹಾಕಾಳಿಯ ವನದಲ್ಲಿ ಸಿಂಹ, ಆನೆ, ಕಾಡು ಹಂದಿ, ಕಾಡುಕೋಣ, ಕರಡಿ, ಜಿಂಕೆಗಳಿದ್ದವು ಇವುಗಳನ್ನು ಬೇಡರು ಬೇಟೆಯಾಡುವ ಚಿತ್ರಣವನ್ನು ಕವಿ ಅನಾವರಣಗೊಳಿಸಿದ್ದಾನೆ.

"ಎಸೆ ಸಿಂಗವ ಪಂದಿಯನಿಜೆ ಪುಲಿಯನು
ದೆಸೆಗೆಡಿಸಾನೆಗೈ ಪರಿಯಿಡು
ಮಸಗಿದ ಕಾಡ್ಕೋಣನ ತಱಿಕರಡಿಗ
ಉಸುರ್ಗೊಳ್ಳೆಂದುಲಿದರು ಕೂಡೆ"(೧೧/೪೦)

ಬೇಟೆಗಾರರಿಗೆ ಬೆಂಗಾವಲಾಗಿದ್ದ "ಬೀರದ ನಾಯಿಗಳ್ ನಿಂದವು"(೫/೬೪) ಎಂಬ ಮಾತು ನಾಯಿಗಳ ಮೂಲಕ ಕಾಡು ಹಂದಿ, ಕಾಡು ಕೋಣ, ಕರಡಿಗಳನ್ನು ಬೇಟೆ

ಆಡುತ್ತಿದ್ದರೆಂದು ಕವಿ ಹೇಳುತ್ತಾನೆ. ಮತ್ತೊಂದೆಡೆಯಲ್ಲಿ ಬೇರೆ ಬೇರೆ ಮೃಗಗಳನ್ನು ಶಬರರು ಬೇಟೆಯಾಡುವ ಚಿತ್ರಣವಿದೆ.

"ತರುವಿಂಗಿ ಕಾಳ್ಬೆಕ್ಕು ಮುಂಗುರಿ ಮುಸುವಂದಿ
ದರಿಬೆಟ್ಟು ಗುರಿಗುಮ್ಮ ಮಿಗಗಳ
ಮರಬೆಕ್ಕು ಕುರಂಗಿ ತೋಳ ಸೀಳ್ನಾಯಿಕ
ತ್ತುರಿ ಮಿಗಗಳ ಪೊತ್ತೆಯ್ದಿದರಾಗ"(೧೪/೬)

ತರುವಿಂಗಿ ಎಂದರೆ ಒಂದು ವಿಧದ ಮೃಗ, ಶಿವಂಗಿ, ಕಾಡುಬೆಕ್ಕು, ಮುಂಗುಸಿ, ಸಿಂಗಲೀಕ, ಮರಬೆಕ್ಕು, ಜಿಂಕೆ, ತೋಳ, ಸೀಳ್ನಾಯಿ, ಕತ್ತುರಿ ಮೊದಲಾದ ಮೃಗಗಳನ್ನು ಶಬರರು ಬೇಟೆಯಾಡಿ ಹೊತ್ತು ಹೊಯ್ಯುತ್ತಿದ್ದರೆಂಬುದನ್ನು ನೋಡಬಹುದು.

ಪರ್ವತಗಳಲ್ಲಿ ಕಪಿಗಳ ಗುಂಪು ಇರುತ್ತಿದ್ದು, ಅವು ಬೆಟ್ಟದ ಐತಿಹಾಸಿಕ ಮಹತ್ವದ ಕುರಿತ ಕತೆಯನ್ನು ಮುನಿಗಳಿಗೆ ಹೇಳುತ್ತಿದ್ದವು ಎಂಬುದನ್ನು ವರ್ಣಿಸಲಾಗಿದೆ. ಹಂಪಿಯ ಸುತ್ತಮುತ್ತ ಕಪಿಗಳ ಸಮೂಹ ಇಂದಿಗೂ ಇದ್ದು, ಅವು ಪ್ರೇಕ್ಷಕರಿಗೆ ಬೆರಗು ಉಂಟಾಗುವ ರೀತಿಯಲ್ಲಿ ವರ್ತಿಸುತ್ತವೆ.

ನಂತರ ಪಕ್ಷಿಗಳನ್ನು ಕುರಿತು ವರ್ಣಿಸಿದ್ದಾನೆ. ಪಕ್ಷಿಗಳು ಕನ್ನಡ ನಾಡಿನ ಪ್ರಕೃತಿ ಸೌಂದರ್ಯವನ್ನು ಹೆಚ್ಚಿಸಿವೆ.

"...... ಅಳಿಯಂಚೆ ಗಿಳಿ ಸೋಗೆ
ಪರಪುಟ್ಟನಿಲ್ಲದ ಬನವಿಲ್ಲ"(೧/೩೮)

ಎಂದು ದುಂಬಿ, ಹಂಸ, ಗಿಳಿ, ನವಿಲು, ಕೋಗಿಲೆಗಳು ಇಲ್ಲದೇ ಇರುವ ಬನವೇ ಇಲ್ಲ ಎನ್ನುತ್ತ ಮತ್ತೊಂದು ಕಡೆಯಲ್ಲಿ ಸುರಭಾವತಿರಾಣಿ ಉದ್ಯಾನವನದಲ್ಲಿ ಹಂಸಗಳನ್ನು ಕಂಡ ದೃಶ್ಯವನ್ನು ಚಿತ್ರಿಸಿದ್ದಾನೆ. ಅದು

"......... ಮುಂತೆ ಕಂಡಳು ಮಣೆಗಳನಾಡಿಸುತೋ
ರಂತಿಹ ದೀಹದಂಚೆಗಳನು"(೨/೫)

ಇಲ್ಲಿ ದೀಹದ ಅಂಚೆಗಳೆಂದು ಕವಿ ಕರೆದಿರುವುದು ವಿಶಿಷ್ಟವಾಗಿದೆ. 'ದೀಹ' ಎಂದರೆ ಬೇಟೆಯಾಡುವಾಗ ಬೇಟೆಯ ಪ್ರಾಣಿ-ಪಕ್ಷಿಗಳನ್ನು ಆಕರ್ಷಿಸಲು ಬಳಸುವ ಪ್ರಾಣಿ-ಪಕ್ಷಿಗಳಿಗೆ 'ದೀಹ' ಎಂದು ಕರೆಯಲಾಗುತ್ತದೆ. ರಾಣಿಯನ್ನು ತಮ್ಮ ಕಡೆಗೆ ಆಕರ್ಷಿಸುವ ರೀತಿಯಲ್ಲಿ ಹಂಸಗಳು ಇದ್ದವೆಂಬುದನ್ನು ಕವಿ ಸೂಚಿಸುತ್ತಾನೆ. ಈ ಪ್ರಸಂಗವು ರಾಣಿಯ ಮನಸ್ಸಿಗೆ ವ್ಯಥೆಯನ್ನು ಉಂಟುಮಾಡಿತು. ಮುಂದುವರಿದು ಗಿಳಿಯ ರೂಪಕವನ್ನು ಕವಿ ತಂದಿದ್ದಾನೆ." ಅರಮನೆಯಲ್ಲಿ ಮಧುರ ಎಂಬ ಗಿಳಿಯು ರಾಜ ಜಯಶೇಖರನನ್ನು ಪ್ರಶ್ನಿಸುವಾಗ ಗಿಳಿಯ ಮಾತು ಮುಖ್ಯವಾಗುತ್ತದೆ. ಅದು

"ಎಲರಾಡದ ಬನದಂತಿದೆ ಸೊಬಗುಳ್ಳ
ಕೆಳೆಯ ಕೋವಿದ ನೀನೀಕೆಯ

ತಿಳಿಪಿ ಬೇಗದೊಳೆಲ್ಲರುಳಿವಂತೆ ಮಾಡೆಂ

ದುಲಿದುದು ಮಧುರನೆಂಬರಗಿಳಿ"(೨/೧೮)

ಎಂದು ಪ್ರಜೆಗಳ ಪರವಾಗಿ ಗಿಳಿಯೇ ಕೇಳಿಕೊಂಡಂತೆ ಮೂಡಿಬಂದಿದೆ.

"ನುಡಿವಕ್ಕಿಯ ನೆಲೆವಕ್ಕಿಯ ನಟಣೆಯ

ನಡೆವಕ್ಕಿಯ ಕುಣಿವಕ್ಕಿಯ ಜಡವಕ್ಕಿ..."(೧೮/೨೪)

ಮಾತನಾಡುವ ಹಕ್ಕಿ, ನೆಲದಮೇಲೆ ವಾಸಿಸುವ ಹಕ್ಕಿ, ಕುಣಿಯುವ ಹಕ್ಕಿ, ನಡೆಯುವ ಹಕ್ಕಿ, ನರ್ತಿಸುವ ಹಕ್ಕಿ, ನಿಶ್ಚಲವಾಗಿ ನೆಲೆನಿಲ್ಲುವ ಹಕ್ಕಿಗಳು ಪ್ರಕೃತಿಯಲ್ಲಿದ್ದವೆಂದು ಕಂಡುಬರುತ್ತದೆ.

"ಲಾವುಗೆ ಗೌಜುವಜೆವುಲಿವುಳ್ಳ ನಿಬ್ಬಾಯ

ಬಾವನ್ನ ಬನವಣ್ಣ ಬಾನಾಡಿ

ಪೀವಕಕ್ಕಜ ಸೋಜೆ ಮೆಳೆಗಿಳಿ ಕಾಡ್ಕೋಳಿ

ಪೂವೆಜೆಗಳ ಮಾಜೆವರ ಕಂಡೆ"(೧೮/೩೪)

ದುಂಬಿ, ನವಿಲು, ಕೋಗಿಲೆ, ಸಾರಸ (ಕೊಕ್ಕರೆ), ಗೀಜಗ, ಕೊಳರ್ವಕ್ಕಿ (ನೀರಹಕ್ಕಿ), ಪೊಣರ್ವಕ್ಕಿ (ಚಕ್ರವಾಕ) ಮುಂತಾದ ಪಕ್ಷಿಗಳು ವನಗಳಲ್ಲಿದ್ದವೆಂದು ತಿಳಿದುಬರುತ್ತದೆ. ಲಾವಗೆ ಅಂದರೆ ಒಂದು ಜಾತಿಯ ಪಕ್ಷಿ, ಕೌಜುಗ, ಕಕ್ಕರವೆಂಬ ಒಂದು ಜಾತಿಯ ಪಕ್ಷಿ, ಎಳೆಗಿಳಿ, ಕಾಡುಕೋಳಿ ಮುಂತಾದ ಪಕ್ಷಿಗಳನ್ನು ಬೇಡರು ಮಾರುತ್ತಿದ್ದರು. ಮತ್ತೆ ಕೆಲವೊಂದು ಪಕ್ಷಿಗಳು ಮಾರಾಟ ಮಾಡಿರೆಂದು ಬೇಡರನ್ನೇ ವಿನಂತಿ ಮಾಡುತ್ತಿದ್ದವೆಂದು ಕಾವ್ಯದಲ್ಲಿ ವ್ಯಕ್ತವಾಗಿದೆ.

"ಕಾದುವೆ ನಗಿಸುವೆ ಕಥೆವೇಳ್ವೆ ಮುನಿದಿರ್ದ

ಕಾದಲರನು ಕೆಂದಿಸುವೆನು

ಆದರಿಸಕ್ಕಗೆ ಬೆಲೆಗೊಟ್ಟು ಕೊಳ್ಳೆಂ

ದೋದಿ ತೋಜೆತ್ತೊಂದು ಚಾಳಾಂಕಿ"(೧೮/೩೧)

ಪಕ್ಷಿಗಳು ಶಕುನ ಅಪಶಕುನಗಳನ್ನು ಸೂಚಿಸುತ್ತಿರುವುದನ್ನು ಕವಿಗಳು ಕಾವ್ಯಗಳಲ್ಲಿ ವರ್ಣಿಸಿರುತ್ತಾರೆ. ಆದರೆ ಪಂಡಿತರಂತೆ ವರ್ತಿಸುತ್ತ ನಲ್ಲನಲ್ಲೆಯರ ಪ್ರೀತಿ ಹೆಚ್ಚು ಮಾಡುವಂತಹ ಜಾಣತನವನ್ನು ಪಕ್ಷಿ ಹೊಂದಿತ್ತು ಎಂಬುದನ್ನು ದೇಪರಾಜ ಚಿತ್ರಿಸಿದ್ದಾನೆ.

ರತ್ನಗಿರಿ ಪರ್ವತದ ಗುಹೆಯಲ್ಲಿ 'ನಾಗರಿಕ' ಎಂಬ ಹೆಸರಿನ ಪಕ್ಷಿ ವಾಸವಾಗಿತ್ತು. ಇದು ಸಾಮಾನ್ಯ ಪಕ್ಷಿಯಲ್ಲ ಎಂದು ಕವಿ ಅದರ ವಿಶೇಷತೆಯನ್ನು ಸುದೀರ್ಘವಾಗಿ ವರ್ಣಿಸಿದ್ದಾನೆ. ಇಂತಹ ನಾಗರಿಕ ಪಕ್ಷಿಯನ್ನು ಬೇಡರು ಬಂಧಿಸಿ ವಿಕ್ರಮನಿಗೆ ಕಾಣಿಕೆಯಾಗಿ ಅರ್ಪಿಸುತ್ತಾರೆ. ಈ ನಾಗರಿಕ ಪಕ್ಷಿ ತನ್ನ ವೃತ್ತಾಂತವನ್ನು ವಿವರಿಸುತ್ತದೆ. ಇದು ಶಿವಸಾಗರೇಶ್ವರ ದೈವಕ್ಕೆ ರತ್ನವನ್ನು ಉಗುಳುವ ಸೇವೆ ಸಲ್ಲಿಸುವುದರ ಮೂಲಕ ತನ್ನ ಸಂತತಿಯನ್ನು ಕಾಪಾಡಿಕೊಂಡು ಬಂದಿರುತ್ತದೆ.

"ಕುಲಿಶದುಟಿಯ ಕೆಂದಳಿರ್ಪಚ್ಚೆವಣ್ಣದ

ತಲೆ ಕಾಲ ಪೊಂಬಣ್ಣದೆಱಕೆಯ

ಪಳುಕುವಣ್ಣದ ಕೊರಳೆಸಕವಿಯಿಂದಿರವಿಲ್ಲಿ
ನೊಳುವಣ್ಣದೊಡಲೊಳೊಪ್ಪಿತು ಪಕ್ಕಿ"(೧೪/೧೭)

ನಾಗರಿಕ ಪಕ್ಷಿ ಚತುರ ಚಾಣಾಕ್ಷತನದಿಂದ ಇರುವುದೆಂದು ಅದು ರಾಜರಿಗೆ, ಬೇಡರಿಗೆ, ತಳವಾರರಿಗೆ ಎಲ್ಲಾ ವಿದ್ಯೆಗಳನ್ನು ಕಲಿಸಿಕೊಡುವಂತಹ ಸಾಮರ್ಥ್ಯವನ್ನು ಹೊಂದಿತ್ತು ಎಂದು ಕವಿ ವರ್ಣಿಸಿದ್ದಾನೆ. ಕವಿ ಪ್ರಭುತ್ವವನ್ನು ಪ್ರಶ್ನಿಸುವ, ಧಿಕ್ಕರಿಸುವ, ನಿರಾಕರಿಸುವ ಹಿನ್ನೆಲೆಯಲ್ಲಿ ಕಾಲ್ಪನಿಕವಾದ ಈ ಪಕ್ಷಿಯನ್ನು ರೂಪಕವಾಗಿ ಬಳಸಿದ್ದಾನೆ ಎಂಬ ಭಾವನೆ ಮೂಡುತ್ತದೆ. ಇದು ವಿಕ್ರಮನಿಗೆ ಪ್ರೀತಿ ಮಾಡೆಂದು ರಾಜಕುಮಾರಿ ಪತ್ರಿಣಿಯನ್ನು ಭೇಟಿ ಮಾಡಿಸುವುದು, ನಂತರ ಬೇಡತಿ ಬರಗೆಯು ತನ್ನ ಪತಿಯನ್ನು ಕೊಲ್ಲಿಸಿ ತೋಟಿಗನಾದ ಮಾದಲನೊಂದಿಗೆ ಸೇರುವ ಸ್ಥಿತಿಯು ನಾಗರಿಕ ಪಕ್ಷಿಯ ಚಾಣಾಕ್ಷತನದಿಂದ ಸಾಧ್ಯವಾಯಿತು. ಈ ತೆರನಾದ ಪ್ರಸಂಗಗಳು ಪಂಚತಂತ್ರದಲ್ಲಿ ಪಕ್ಷಿ-ಪ್ರಾಣಿಗಳ ಮೂಲಕ ಕತೆ ಹೇಳುವಂತೆ ಇಲ್ಲಿಯೂ ಕತೆಗಳನ್ನು ಹೆಣೆಯಲಾಗಿದೆ. ಈ ಎಲ್ಲ ವಿವರಣೆಯಿಂದ ಬೇರೆ ಬೇರೆ ಪ್ರಾಣಿ ಪಕ್ಷಿಗಳು ಅರಣ್ಯದಲ್ಲಿದ್ದವೆಂದು ಹಾಗೂ ಸಮೃದ್ಧವಾಗಿದ್ದವೆಂದು ತೋರುತ್ತದೆ. ಇವುಗಳನ್ನು ಅಂದಿನ ಜನತೆ ತಮ್ಮ ಜೀವನಕ್ಕೆ ಬಳಸಿಕೊಳ್ಳುತ್ತಿದ್ದರೆಂದು ತಿಳಿದುಬರುತ್ತದೆ. ಇದರಿಂದ ಪ್ರಾಣಿ-ಪಕ್ಷಿಗಳ ನಡುವೆ ಮಾನವನ ಅನನ್ಯತೆಯನ್ನು ಗುರುತಿಸಬಹುದು.

### ೭.೧.೭ ಸೂರ್ಯೋದಯ ಮತ್ತು ಸೂರ್ಯಾಸ್ತ

ಸೂರ್ಯೋದಯ, ಸೂರ್ಯಾಸ್ತ ದೈವಲೀಲೆಗಳೆಂದು ಹಲವು ಕವಿಗಳು ನಂಬಿದ್ದಾರೆ. ಇವು ಋತುಗಳ ನಿರ್ಮಾಣವಾಗಲು ಕಾರಣೀಭೂತವಾಗಿವೆ. ಸೂರ್ಯೋದಯ, ಸೂರ್ಯಾಸ್ತಗಳು ಪ್ರಕೃತಿಯಲ್ಲಿ ಜರುಗದಿದ್ದರೆ ಮನುಕುಲ ಅಥವಾ ಸಕಲ ಜೀವಿಗಳ ಏಳ್ಗೆ ಮತ್ತು ಬೆಳವಣಿಗೆಗಳು ಅಸಾಧ್ಯ. ಕವಿ

"....ಮೂಡುವೆಣ್ಣಿನ ಬೈತಲೆಯ ಮಾಮಣಿಯೊಲು
ಮೂಡಿತು ಮುನ್ನೇಸಱಬಟ್ಟು"(೧೦/೨೭) ಎನ್ನುತ್ತಾನೆ.

ಸೂರ್ಯೋದಯವು ಹೆಣ್ಣಿನ ಬೈತಲೆಯ ಮಣಿಯಂತೆ ಇದ್ದು ಅದು ರನ್ನದ ಚೆನ್ನಗನ್ನಡಿಯಂತೆ ಶೋಭಿಸುವಂತಿತ್ತು ಎಂಬುದನ್ನು ಕವಿ ಕಲ್ಪನೆ ಮಾಡಿದ್ದಾನೆ.

"ಮುನ್ನೀರ್ಮುಣಿದು ಪುಟ್ಟುಸುವಂತೆ ತೆರೆಗಳೊ
ಳನ್ನೇಸಱ ನೆಳಲ್ಪೊಳದುದು"(೧೫/೨೬)

ಸಮುದ್ರ ದಂಡೆಯಲ್ಲಿ ನಿಂತು ನೋಡಿದಾಗ ಸೂರ್ಯ ಸಮುದ್ರದಲ್ಲಿ ಹುಟ್ಟುತ್ತಾನೋ ಎಂಬಂತೆ ಕಂಡಿರುವುದನ್ನು ನೋಡಬಹುದು. ಇದನ್ನೇ ಸೂರ್ಯೋದಯ ಎನ್ನುತ್ತೇವೆ.

"......ಎಳೆ ನೇಸಱಬಟ್ಟು ಮೂಡಣ
ಕನ್ನೆಯ ಬೈತಲೆವಣಿಯಂತೆ
ಮುನ್ನೆಸದತ್ತಿಂದಿರನಾನೆ ಮೊಗಕಿಟ್ಟ
ರನ್ನದ ಚೆನ್ನಗನ್ನಡಿಯಂತೆ"(೨೪/೫)

ಪೂರ್ವದಲ್ಲಿ ನಿಂತಿದ್ದ ಸ್ತ್ರೀಯು ಬೈತಲೆಯನ್ನು ತೆಗೆದುಕೊಂಡು ಮಾಣಿಕ್ಯದ ಮುತ್ತನ್ನು ಮುಡಿದಿರುವಳೊ ಎಂಬಂತೆ ಉದಯಿಸುವ ಸೂರ್ಯ ಕಂಗೊಳಿಸಿದನೆಂದು ಕವಿ ಭಾವಿಸುತ್ತಾನೆ. ಅಲ್ಲದೆ ಸಮುದ್ರದ ತೆರೆಗಳಲ್ಲಿ ಪ್ರತಿಬಿಂಬಿಸುವ ಸೂರ್ಯ ಕಾಣುವ ಪರಿ ಸೊಗಸಾಗಿದೆ.

"ಕಡಲೊಡೆಯನು ನಿಟ್ಟಿಪ ಚೆನ್ನಮಣಿಗ
ನ್ನಡಿಯೆನೆ ಸಂಜೆಗೆಂಪಿನ ಬಳ್ಳಿ
ಕುಡಿಗೊಳ್ವಗೆಳಸೆಂಬಿನ ಕೆಂಗದಿರ್ಗಳ್ ಓಂ
ಗಡೆ ಬರೆ ಪಗಲಾಣ್ಮನೆಸದನು"(೯/೭)

ಸೂರ್ಯಾಸ್ತವನ್ನು ಕವಿಯು ಸಂಜೆಗೆಂಪು ಎಂದು ಕರೆದಿದ್ದಾನೆ. ಹಾಗೆಯೇ ಬಳ್ಳಿಗಳು ಚಿಗುರೊಡೆದಾಗ ಚಿಗುರಿನಲ್ಲಿರುವ ನಸುಕೆಂಪನ್ನು ಸೂರ್ಯಾಸ್ತಕ್ಕೆ ಹೋಲಿಸಿದ್ದಾನೆ. ಇಲ್ಲಿ ಸಮುದ್ರವೆಂಬ ಒಡೆಯನು ಚೆಲುವೆಯಂತಿರುವ ಸಂಜೆಯ ಸೂರ್ಯನನ್ನು ನೋಡಿ ಸವಿಯಲೆಂದೇ ಹಿಂಬಾಲಿಸುತ್ತಿದ್ದಾನೋ ಎಂಬಂತೆ ಆ ಸೂರ್ಯಾಸ್ತದ ದೃಶ್ಯವಿತ್ತೆಂದು ಕವಿ ಕಲ್ಪಿಸಿದ್ದಾನೆ.

ಸೂರ್ಯೋದಯ ಮತ್ತು ಸೂರ್ಯಾಸ್ತ ಹಗಲು ರಾತ್ರಿಗಳ ಆಗಮನಕ್ಕೆ ಮುನ್ನುಡಿ ಬರೆಯುವಂತಿದ್ದು ಸಹಜ ಬದಲಾವಣೆಗಳಾದರೂ ಪ್ರಕೃತಿಯಲ್ಲಿ ಇವುಗಳಿಗೊಂದು ಸಹಜವಾದ ಸೊಬಗಿದೆ ಎಂಬುದನ್ನು ಅತ್ಯಂತ ವಾಸ್ತವವಾಗಿ ವರ್ಣಿಸಿರುವುದನ್ನು ಕಾಣಬಹುದು.

### ೭.೧.೮ ವಸಂತ ಋತು

ಋತು ವರ್ಷದಲ್ಲಿ ಎರಡು ತಿಂಗಳಿಗೊಮ್ಮೆ ಬರುವ ಒಂದು ಪರಿವೃತ್ತ. ಇಂತಹವುಗಳು ವರ್ಷದಲ್ಲಿ ಆರು ಪರಿವೃತ್ತಗಳು ಬರುತ್ತವೆ. ವರ್ಷದ ಆರಂಭದಲ್ಲಿ ಬರುವ ಋತುವೆಂದರೆ ವಸಂತ ಋತು. ಜನಪದರು ವಸಂತ ಋತುವನ್ನು 'ಋತುಗಳ ರಾಜ' ಎಂದು ಕರೆಯುತ್ತಾರೆ. ಏಕೆಂದರೆ ಈ ಸಂದರ್ಭದಲ್ಲಿ ಪ್ರಕೃತಿ ಚಿಗುರೊಡೆದು ಎಲ್ಲ ಪ್ರಾಣಿ-ಪಕ್ಷಿಗಳನ್ನು ಆಕರ್ಷಿಸುತ್ತದೆ. ಮನುಷ್ಯನ ಮನಸ್ಸನ್ನು ಮುದುಗೊಳಿಸಿ ತನ್ನತ್ತ ಸೆಳೆದುಕೊಳ್ಳುತ್ತದೆ. ಹಾಗಾಗಿ ಋತುಗಳನ್ನು ಕುರಿತು ಹೊಗಳದೇ ಇರುವ ಕವಿಗಳು ವಿರಳವೆಂದೇ ಹೇಳಬಹುದು.

ವಸಂತವು ಆರು ಋತುಗಳಲ್ಲಿ ಒಂದು. ಚೈತ್ರ ಮತ್ತು ವೈಶಾಖ ಮಾಸಗಳಲ್ಲಿ ಅಂದರೆ ಮಾರ್ಚ್‌ನಿಂದ ಮೇ ತಿಂಗಳವರೆಗೆ ಬರುವ ಋತು. ಅಂದರೆ ವಸಂತ ಋತು ಪ್ರಕೃತಿಯಲ್ಲಿ ಎರಡು ತಿಂಗಳಲ್ಲಿ ಬದಲಾಗುವ ಪರಿವೃತ್ತ ವರ್ಷದ ಮೊದಲ ಎರಡು ತಿಂಗಳುಗಳ ಕಾಲ ಪ್ರಕೃತಿಯನ್ನು ಆಕರ್ಷಮಯಗೊಳಿಸುವ, ಹೊಸತನ ತುಂಬುವ ಋತುವಾಗಿದೆ.

"ತಿಂಗಳ ಸಿರಿ ಮಾವಿನ ಮದ ಪಿಕಗಳ
ನುಣ್ಗೊರಲೊಪ್ಪುವಳಿಯ ಸುಖ
ಇಂಗೋಲ್ವಲ್ಲನಧಟು ಗಾಳಿಯಜಸ
ಪೊಂಗೆ ಬಸಂತ ಬಂದುದು ಕೇಳ"(೩/೯)

ಸುರಭಾವತಿ ರಾಣಿಯು ಮಂದಾರ ದೈವದ ಹೂವನ್ನು ಮುಡಿದು ಚೆಲುವಾಗಿ ಇದ್ದಳು. ಇವಳ ಈ ಚೆಲುವು ವಸಂತದ ಆಗಮನವನ್ನು ಸಾರುವಂತೆ ತಿಂಗಳ ಸಿರಿ, ಮಾವಿನ ತಳಿರು,

ಕೋಗಿಲೆಗಳ ಇಂಪಾದ ಧ್ವನಿ, ಮನ್ಮಥನ ಪರಾಕ್ರಮದಂತೆ ಗಾಳಿಯು ಬೀಸುತ್ತಿರುವುದು ಸಹಜವೆಂಬಂತೆ ಇತ್ತು. ಉದ್ಯಾನವನದ ಪಕ್ಷಿಗಳು ಚಿಲಿಪಿಲಿ ಧ್ವನಿಗಳಿಂದ ಸಂಭ್ರಮಿಸಿದವು. ಅರಮನೆಯ ಸಖಿಯರು, ಸ್ತ್ರೀಯರು, ಅಲಂಕಾರಗೊಂಡು ರಾಣಿಯು ಗರ್ಭವತಿಯಾದ ಮುನ್ಸೂಚನೆಯನ್ನು ತಿಳಿದು ಬೇರೆ ಬೇರೆ ಹೂಗಳನ್ನು ತಂದು ಶೃಂಗರಿಸಿದರು. ಆಗ ಸ್ತ್ರೀಯರು ಸೊಬಗು ಸೌಂದರ್ಯಗಳಿಂದ ಹಲವು ರೂಪವನ್ನು ತಾಳಿ ನವಮಾಸದಂತೆ ಕಂಗೊಳಿಸಿದರು.

ಹಂಪಿಯ ಪರಿಸರದಲ್ಲಿ ಸರೋವರವು ಹೂ, ದುಂಬಿ, ಪಕ್ಷಿ ಜಲಚರಗಳಿಗೆ ನೆಲೆಯಾಗಿ ಸಿಹಿ ನೀರಿನ ತಾಣಗಳಾಗಿದ್ದವು. ಸಾಗರವು ಜಲಮೂಲವಾಗಿದ್ದು ಮುತ್ತು ರತ್ನಗಳ ಆಗರವಾಗಿತ್ತು. ಇದು ವಿಶಾಲ, ಆಳ, ಅಗಲ, ಗಾಂಭಿರ್ಯದಿಂದ ಕೂಡಿದ್ದು, ದೈವದಂತೆ ಪೂಜಿತಗೊಂಡಿದೆ. ಇದರಂತೆ ಪರ್ವತವೂ ಸಹ ಸಂಪತ್ತಿನ ನೆಲೆಯಾಗಿದ್ದು ಪ್ರಾಣಿ, ಪಕ್ಷಿ, ಗಿಡ ಮರಗಳಿಂದ ಆವರಿಸಿದ್ದು ಋಷಿ, ದೈವಗಳಿಗೆ ಆಶ್ರಯ ನೀಡಿ ಪೂಜ್ಯನೀಯವೆನಿಸಿವೆ. ವನಗಳಲ್ಲಿ ಸಿಂಹ, ಆನೆ, ಕರಡಿ, ಜಿಂಕೆ, ಕಾಡು ಕೋಣ, ಕಾಡು ಹಂದಿ, ಕಾಡು ಬೆಕ್ಕು, ಮುಂಗಸಿ, ಸಿಂಗಲೀಕ, ತೋಳ, ಸೀಳ್ನಾಯಿ ಮುಂತಾದ ಪ್ರಾಣಿಗಳಿದ್ದವು. ಹಾಗೆಯೇ ಗಿಳಿ, ಹಂಸ, ನವಿಲು, ಕೋಗಿಲೆ, ಕೊಕ್ಕರೆ, ಗೀಜುಗ, ಕೌಜುಗ, ಚಕ್ರವಾಕ, ಕಾಡುಕೋಳಿ ಮುಂತಾದ ಪಕ್ಷಿಗಳಿದ್ದು ಅವುಗಳನ್ನು ಬೇಡರು ಬೇಟೆಯಿಂದ ಸಂಗ್ರಹಿಸಿ ಮಾರಾಟ ಮಾಡುತ್ತಿದ್ದರು. ಅರಣ್ಯಗಳಲ್ಲಿ ಸಂಪಿಗೆ, ಸೇವಂತಿಗೆ, ಜಾಜಿ ವಿವಿಧ ಕಮಲ, ಮರುಗ, ದವನ, ಕೇದಗೆ ಮುಂತಾದ ಹೂಗಳು ಪ್ರಕೃತಿ ಸೌಂದರ್ಯವನ್ನು ಹೆಚ್ಚಿಸಿದ್ದವು. ಅಲ್ಲದೆ ಕಪಿಗಳ ಸಮೂಹ ಜನರನ್ನು ಬೆರಗುಗೊಳಿಸಿ ರಂಜಿಸುತ್ತಿದ್ದವು. ಈ ಎಲ್ಲಾ ಅಂಶಗಳಿಂದ ವಿಜಯನಗರ ಕಾಲದಲ್ಲಿ ಪ್ರಾಕೃತಿಕ ಪರಿಸರವು ಸಂಪತ್ತಿನಿಂದ ಕೂಡಿತ್ತೆಂದು ಈ ಕಾವ್ಯದಿಂದ ತಿಳಿದುಬರುತ್ತದೆ.

### ೭.೨. ಧರ್ಮ/ದೈವ

ಧರ್ಮವು ಮಾನವನ ಮಾನಸಿಕ ರಚನೆಯಲ್ಲಿ ಶಾಶ್ವತವಾಗಿ ಬೇರೂರಿದ ಸಂಸ್ಥೆಯಾಗಿದೆ. ಬದುಕಿನಲ್ಲಿ ಅಳವಡಿಸಿಕೊಳ್ಳಲ್ಪಡುವ ಒಂದು ರೀತಿಯ ತತ್ವ ಸಿದ್ಧಾಂತವನ್ನು ಧರ್ಮ ಎನ್ನಲಾಗುತ್ತದೆ. ಒಂದು ಧಾರ್ಮಿಕ ಪಂಥದ ತತ್ವವನ್ನು ಮತ ಸಿದ್ಧಾಂತವನ್ನು ಧರ್ಮ ಎನ್ನಬಹುದು. ಧರ್ಮ ಎಂಬುದು ಮನುಷ್ಯತ್ವದ ಪ್ರತೀಕ, ಮಾನವತೆಯ ಅಂತಃಸತ್ವ, ಅಂತಃಕರುಣೆ, ಅನುಕಂಪ ಎಂಬಿತ್ಯಾದಿ ಅಂಶಗಳನ್ನು ಸಾಮಾನ್ಯವಾಗಿ ಧರ್ಮ ಎಂದು ಕರೆಯಲಾಗುತ್ತದೆ. ಜನಸಾಮಾನ್ಯರ ದಿನನಿತ್ಯದ ಚಟುವಟಿಕೆಗಳಲ್ಲಿ ದಾನ, ಭಿಕ್ಷೆ, ನೀತಿ, ನಿಯತ್ತು ಮುಂತಾದ ಅರ್ಥದಲ್ಲೂ ಧರ್ಮ ಎಂಬ ಪದ ಬಳಕೆಯಾಗುತ್ತಿದೆ.

"ಧರ್ಮ ಎನ್ನುವ ಪದಕ್ಕೆ ಸಂವಾದಿಯಾಗಿ ಇಂಗ್ಲಿಷ್‌ನಲ್ಲಿ ರಿಲಿಜನ್ (Religion) ಎಂಬ ಪದ ಬಳಸಲಾಗುತ್ತದೆ. ಲ್ಯಾಟಿನ್ ಭಾಷೆಯಲ್ಲಿ ಬಳಕೆಯಲ್ಲಿರುವ 'ರಿಲಿಗೊ' ಎನ್ನುವ ನಾಮ ಪದದಿಂದ ಇದು ನಿಷ್ಪತ್ತಿ ಹೊಂದಿದೆ. 'ರಿಲಿಗೋ' ಪದಕ್ಕೆ ಒಂದಕ್ಕಿಂತ ಹೆಚ್ಚು ಅರ್ಥಗಳಿವೆ. ಭಕ್ತಿಯಿಂದ ಕೂಡಿದ ಪೂಜಾ ಕೈಂಕರ್ಯ (ಪವಿತ್ರ) ಒಂದು ಅರ್ಥವಾದರೆ, ರಿಲಿಗೇರ್ (Religere) ಹಿಂದಿನದನ್ನು ಒಟ್ಟುಗೂಡಿಸು ಎನ್ನುವ ಅರ್ಥವನ್ನೂ, 'ರೆಲಿಗೇರ್' ಎನ್ನುವುದು ಹತ್ತಿರದ

ಸಂಬಂಧ ಹೊಂದು ಎನ್ನುವ ಅರ್ಥವನ್ನು 'ರಿಎಲಿಗೇರ್' ಪದವು ಆಯ್ಕೆಯಾಗು ಎನ್ನುವ ಅರ್ಥವನ್ನು ಕೊಡುತ್ತಿದೆ. 'ರಿಲಿಜನ್' ಪದಕ್ಕೆ ಲ್ಯಾಟಿನ್ ಭಾಷೆಯಲ್ಲಿ 'ಪೂಜ್ಯ' 'ಪವಿತ್ರ' ಎಂಬರ್ಥಗಳಿರುವುದರಿಂದ ಈ ಪದವೇ ಹೆಚ್ಚು ಬಳಕೆಯಲ್ಲಿದೆ."[೧೩]

"ಧರ್ಮ ಎಂಬುದು ಮತೀಯ ಆಚಾರ-ವಿಚಾರಗಳ ಹಿಂದಿರುವ ಸಮಾನ ಮನೋವೃತ್ತಿಯನ್ನು ಸೂಚಿಸುವ ವಿಶಾಲಾರ್ಥವಾದ ಪದ, ಮನುಷ್ಯ ನಿಜವಾಗಿ ಏನಾಗಿದ್ದಾನೆಯೋ ಅದರ ಅತ್ಯುತ್ತಮ ಅಭಿವ್ಯಕ್ತಿಯೇ ಧರ್ಮ."[೧೪] ಅಂದರೆ ಧರ್ಮ ಎಂಬುದು ಮನುಷ್ಯನ ಆಚಾರ-ವಿಚಾರಗಳ ಅಭಿವ್ಯಕ್ತಿಯ ಮಾಧ್ಯಮವಾಗಿದೆ.

ಕ.ಸಾ.ಪ.ದ ಕನ್ನಡ ನಿಘಂಟಿನ ಪ್ರಕಾರ ಧರ್ಮ ಎಂಬ ಪದಕ್ಕೆ "ದಾನ ಧರ್ಮ ಕಾರ್ಯ, ನೀತಿ, ಧರ್ಮದ ಅಧಿದೇವತೆ, ಯಮ, ತತ್ತ್ವೋಪದೇಶ, ಪುಣ್ಯ ಉಂಟಾಗುವಿಕೆ ಮತ್ತ"[೧೫] ಎಂದು ಅರ್ಥ ನೀಡಿದೆ. ಇಲ್ಲಿ ಧರ್ಮ ಎಂಬುದು ಸತ್ಫಲ, ತತ್ತ್ವೋಪದೇಶ, ವ್ಯಕ್ತಿ ಹೆಸರು, ದಾನದ ಕಾರ್ಯ ಮೊದಲಾದ ಅರ್ಥಗಳನ್ನು ಹೊಂದಿದೆ.

ದೇವರು, ದೈವ, ದೆವ್ವ ಎಂಬ ಪದಗಳು ಪ್ರಕೃತಿಯಲ್ಲಿರುವ ಒಂದು ಅದಮ್ಯ ಶಕ್ತಿ. ಮನುಷ್ಯನಿಂದ ಅಸಾಧ್ಯವಾದ ಕೆಲಸಕಾರ್ಯ, ಬೇರೊಂದು ಶಕ್ತಿಯ ಮೂಲಕ ನೆರವೇರುವುದನ್ನು ದೇವರು, ದೈವ ಅಥವಾ ದೆವ್ವ ಎಂದು ಭಾವಿಸಲಾಗುತ್ತದೆ. ದೇವರು, ದೆವ್ವ ಮನುಷ್ಯನಿಗೆ ಅಸಾಧ್ಯವೆನಿಸಿದ ಕಾರ್ಯನಿರ್ವಹಿಸುತ್ತವೆ. ಇವೆರಡೂ ಅದಮ್ಯ ಚೇತನ, ಇವುಗಳು ಮನುಷ್ಯನಿಗೆ ನಿಲುಕದ ಶಕ್ತಿಗಳಾಗಿವೆ. ಇದರಲ್ಲಿ ಶಿಷ್ಟಶಕ್ತಿಯನ್ನು ದೇವರು, ದುಷ್ಟ ಶಕ್ತಿಯನ್ನು ದೆವ್ವ ಎಂದು ನಂಬಿಕೊಂಡು ಬರಲಾಗಿದೆ.

ಕಿಟೆಲ್‌ರ ಕನ್ನಡ-ಇಂಗ್ಲಿಷ್ ನಿಘಂಟುವಿನಲ್ಲಿ "ದೇವ, ದೆವ್ವ ಎಂಬುದಕ್ಕೆ Divine, a deity, a god, a lord, desting, fortune, fate, property, wealth"[೧೬] ಎಂದು ಅರ್ಥಸಲಾಗಿದೆ. ಅಂದರೆ ದೈವಿಕ, ದೇವತೆಯ ಪುಣ್ಯದ, ದೇವದತ್ತ, ದಿವ್ಯವಾದ, ಸ್ವರ್ಗೀಯ, ಪವಿತ್ರ, ದೇವತ್ವ ದೇವತೆ ಅಥವಾ ದೇವಿ, ದೈವ, ದೇವರು, ಪಾರಬ್ಧ, ಹಣೆಬರಹ, ಅದೃಷ್ಟ, ವಿಧಿ, ನಿಯತಿ, ಆಸ್ತಿ, ಸಂಪತ್ತು ಎಂಬಿತ್ಯಾದಿಯಾಗಿ ಅರ್ಥೈಸಬಹುದು.

ಕ.ಸಾ.ಪ.ದ. ಕನ್ನಡ ನಿಘಂಟು 'ದೈವ' ಎಂಬುದಕ್ಕೆ "ದೇವರಿಗೆ ಸಂಬಂಧಪಟ್ಟ ದೇವರಿಗೆ ಸೇರಿದ, ದೇವತೆ, ದೇವರು, ಭಗವಂತ, ಕ್ಷುದ್ರ ದೇವತೆ, ಪರಿಮಿತವಾದ ಪ್ರಭಾವವುಳ್ಳ ದೇವತೆ, ಅಧಿಕಾರಿ, ಒಡೆಯ, ಪ್ರಭು, ಜನ್ಮಾಂತರದಲ್ಲಿ ಮಾಡಿದ ಪುಣ್ಯಫಲ, ಅದೃಷ್ಟ ಭಾಗ್ಯ, ಸುಕೃತ, ದೆವ್ವ, ಪಿಶಾಚಿ, ಭೂತ, ಸಮಾಜ, ಕುಲದ ಹಿರಿಯರು, ಆಸ್ತಿ, ಐಶ್ವರ್ಯ"[೧೭] ಅಂದರೆ ಇಲ್ಲಿ ದೈವ ಎಂಬುದು ದೆವ್ವವೂ ಭೂತವೂ ಆಗಿದೆ. ಹಾಗೆಯೇ ಸಮಾಜ, ಸಮಾಜದ ಅನುಭವಿ ಹಿರಿಯರೂ ದೈವ ಎಂಬ ಪರಿಕಲ್ಪನೆಯಲ್ಲಿ ಬರುತ್ತಾರೆ. ಅಲ್ಲದೆ ವ್ಯಕ್ತಿಯ ಒಳ್ಳೆಯ ಕೆಲಸ ಕಾರ್ಯಗಳಿಂದ ಪಡೆದ ಪುಣ್ಯಫಲ, ಆಸ್ತಿ ಸಂಪತ್ತೂ ಆಗಿದೆ. ಅದೇ ಮನುಷ್ಯನಿಗೆ ದೇವರಾಗಿಯೂ

ಕಂಡುಬರುತ್ತದೆ. ಅದು ಒಳ್ಳೆಯದಾಗಿದ್ದರೆ, ದೇವರಾಗುತ್ತದೆ. ಕೆಟ್ಟದಾಗಿದ್ದರೆ ದೆವ್ವವಾಗುತ್ತದೆ ಎಂಬ ನಂಬಿಕೆ ಇದೆ.

ಧರ್ಮ, ದೈವಗಳು ಒಂದಕ್ಕೊಂದು ಪೂರಕವಾದವುಗಳು. ಇವುಗಳು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಧರ್ಮ ದೈವಗಳು ಒಂದರ ಹೊರತು ಇನ್ನೊಂದು ಇರಲಾರವು. ಅಂದರೆ ಧರ್ಮ ಇದ್ದಲ್ಲಿ ದೈವ ಇರುತ್ತದೆ. ದೈವ ಇದ್ದಲ್ಲಿ ಧರ್ಮ ಇದ್ದೇ ಇರುತ್ತದೆ. ಇವೆರಡೂ ಆಸ್ತಿಕ ನೆಲೆಯಿಂದ ಬಂದ ಜನರ ನಂಬಿಕೆಗಳಾಗಿವೆ. ಮಧ್ಯಕಾಲೀನ ಕನ್ನಡ ಸಾಹಿತ್ಯ ಪ್ರಮುಖವಾಗಿ ದೈವಕೇಂದ್ರಿತವಾಗಿದೆ, ಈ ಕಾಲದಲ್ಲಿ ವೀರಶೈವ ಕವಿಗಳು ಶಿವನನ್ನು, ವೈಷ್ಣವ ಕವಿಗಳು ಹಾಗೂ ಕೀರ್ತನಕಾರರು ವಿಷ್ಣುವನ್ನು ಕುರಿತಾದ ಸಾಹಿತ್ಯವನ್ನು ಜೈನ ಕವಿಗಳು ತೀರ್ಥಂಕರರನ್ನು ಕುರಿತಾದ ಸಾಹಿತ್ಯವನ್ನು ರಚಿಸಿದ್ದಾರೆ. ಹನ್ನೆರಡನೆಯ ಶತಮಾನದ ವಚನಕಾರರು, ಆನಂತರ ಬಂದ ಹರಿಹರ ರಾಘವಾಂಕ ಮುಂತಾದ ಕವಿಗಳು ಧರ್ಮ ಪ್ರಸಾರದ ಕಾರ್ಯವನ್ನು ಶಿವನ ಹಾಗೂ ಶಿವಭಕ್ತರ ಕತೆಗಳನ್ನು ವರ್ಣಿಸುವ ಮೂಲಕ ಕಾವ್ಯ ರಚಿಸಿದ್ದಾರೆ. ವೈದಿಕ ಧರ್ಮವು ಸಾಮಾಜಿಕವಾಗಿ ಶ್ರೇಣೀಕರಣದ ವ್ಯವಸ್ಥೆಯನ್ನು ಮುಂದುವರಿಸಿಕೊಂಡು ಬಂದಿತ್ತು. ಈ ಶ್ರೇಣೀಕರಣ ಸಮಾಜವನ್ನು ಪ್ರಶ್ನಿಸುವ ಮೂಲಕ ಪರ್ಯಾಯವಾದ ಸಂಸ್ಕೃತಿಯನ್ನು, ಧರ್ಮವನ್ನು ಕಟ್ಟುವ ಪ್ರಯತ್ನ ಜೈನ ಧರ್ಮದ ಕವಿಗಳು ಮಾಡಿದ್ದಾರೆ. ಇದರ ಮುಂದುವರಿದ ರೀತಿಯೆಂಬಂತೆ ವೀರಶೈವ ಕಪಿಗಳು ವಸ್ತು ನಿರ್ವಹಣೆಯ ಮೂಲಕ ವೀರಶೈವ ಧರ್ಮವನ್ನು ಪ್ರಸಾರ ಮಾಡಿರುವುದು ಸ್ಪಷ್ಟವಾಗುತ್ತದೆ.

"ಕಾಳಾಮುಖರು, ಲಕುಲೀಶ, ಪಾಶುಪತರು ಮುಂತಾದ ಶೈವ ಪರಂಪರೆಯ ಧಾರ್ಮಿಕ ವ್ಯಕ್ತಿಗಳು ೧೨ನೆಯ ಶತಮಾನದ ಆರಂಭಕ್ಕಾಗಲೇ ಕರ್ನಾಟಕದಲ್ಲಿ ದೇವಾಲಯಗಳನ್ನು ಕೇಂದ್ರವಾಗಿರಿಸಿಕೊಂಡು ಮಠಗಳನ್ನು ಕಟ್ಟಿಕೊಂಡು ಬಹಳ ಪ್ರಭಾವಶಾಲಿಗಳಾಗಿ ಬೆಳೆಯತೊಡಗಿದ್ದರು. ಅನೇಕ ರಾಜರು, ಪ್ರಧಾನರು, ದಂಡನಾಯಕರು ಅವರ ಪ್ರಭಾವಕ್ಕೆ ಒಳಗಾಗಿ ಮಠಗಳಿಗೆ ಸಾಕಷ್ಟು ದತ್ತಿ ದಾನಗಳನ್ನು ಕೊಟ್ಟಿದ್ದರು."[೧೮] ಎಂದು ಸಿ. ವೀರಣ್ಣ ಅವರು ಕರ್ನಾಟಕದಲ್ಲಿ ಶೈವ ಧರ್ಮ ಪ್ರಾಬಲ್ಯ ಹೊಂದಿರುವ ಬಗ್ಗೆ ಉಲ್ಲೇಖಿಸಿದ್ದಾರೆ. ದೇಪರಾಜ ಸೊಬಗಿನ ಸೋನೆ ಕಾವ್ಯದಲ್ಲಿ ಶಿವ, ಪಾರ್ವತಿ, ಕಾಳಿಕಾದೇವಿ, ಮುನಿ/ತಪಸ್ವಿ, ಕಾಪಾಲಿಕರು, ಯೋಗಿಣಿಯರು ಕುರಿತಂತೆ ಸಾಂದರ್ಭಿಕವಾಗಿ ವರ್ಣಿಸಿರುವುದನ್ನು ಗಮನಿಸಬಹುದು. ಇಲ್ಲಿ ಶಿವಕವಿಯಾದ ಹರಿಹರ ಶಿವನನ್ನು, ಶಿವಶರಣರನ್ನು ಕುರಿತು ಕಾವ್ಯ ರಚಿಸಬೇಕೆ ಹೊರತು ಮನುಜರ, ಸಾವವರ, ಕನಿಷ್ಟರ ಮೇಲೆ ಕಾವ್ಯವನ್ನು ಬರೆಯಬಾರದು ಎಂಬ ಕಾವ್ಯ ಧೋರಣೆಯನ್ನು ದೇಪರಾಜ ಸೊಬಗಿನ ಸೋನೆ ಕಾವ್ಯದ ವಸ್ತುವಿನಲ್ಲಿ ಅನುಸರಿಸಿರುವುದು ಸ್ಪಷ್ಟವಾಗುತ್ತದೆ. ಈ ಹಿನ್ನೆಲೆಯಲ್ಲಿ ಕವಿ ತನ್ನ ಕಾಲದ ಧಾರ್ಮಿಕ ಸ್ಥಿತಿ, ವಿವಿಧ ದೈವಗಳನ್ನು ಕುರಿತು ವರ್ಣಿಸಿದ್ದಾನೆ.

### ೫.೨.೧. ಶಿವ

ಶಿವ ಎಂದರೆ ಸಾಮಾನ್ಯ ಅರ್ಥದಲ್ಲಿ ಮಂಗಲ, ಶುಭಕರ ಎಂದರ್ಥ. ಪುರಾಣ ಭಾರತ ಕೋಶದಲ್ಲಿ ಶಿವನನ್ನು ಕುರಿತು "ಶಿವನು ಭಕ್ತರಿಗೆ ಸುಖವನ್ನು ಕೊಡುವವನಾದುದರಿಂದ

ಶಂಭು; ಜೀವರನ್ನು ಸಂಸಾರ ಬಂಧನದಿಂದ ಬಿಡಿಸಿ ಪಾಲಿಸುವವನಾದುದರಿಂದ ಪಶುಪತಿ, ಕೈಲಾಸದ ಒಡೆಯನಾದುದರಿಂದ ಗಿರೀಶ; ಗಂಗೆಯನ್ನು ಧರಿಸಿದವನಾದುದರಿಂದ ಗಂಗಾಧರ"[೧೯] ಎಂಬ ಬೇರೆ ಬೇರೆ ಹೆಸರುಗಳಿಂದ ಕರೆಯಲಾಗಿದೆ. ಹಾಗೆಯೇ ಈ ಕಾವ್ಯದಲ್ಲಿ

"ಹರನಂ ಶಂಕರನಂ ಶಶಾಂಕಧರನಂ ಕಾಪಾಲಿಯಂ ಕಾಲಸಂ
ಹರನಂ ಶೂಲಿಯನೀಶನಂ ಗಿರಿಶನಂ ಭಾಳಾಕ್ಷನಂ ನೀಲಕಂ
ಧರನಂ ಭರ್ಗನನುಗ್ರನಂ ಪರಮನಂ ಸರ್ವಜ್ಞನಂ ಶಭುವಂ
ಗಿರಿಜಾವಲ್ಲಭನಂ ಮನೋಜಹರನಂ ಕಂಡಂ ವಿರೂಪಾಕ್ಷನಂ(೧೨/೧೬೧)

ಎಂದು ಶಿವನನ್ನು ಹರ, ಶಂಕರ, ಶಶಾಂಕಧರ, ಕಾಪಾಲಿ, ತ್ರಿಶೂಲಿ, ಗಿರೀಶ, ಮುಕ್ಕಣ್ಣ, ನೀಲಕಂಠ, ಸರ್ವಜ್ಞ, ಶಂಭು, ವಿರೂಪಾಕ್ಷ ಮುಂತಾದ ಹೆಸರಿನಿಂದ ಕರೆದಿದ್ದಾನೆ. ವಿಜಯನಗರದ ರಾಜಬೀದಿಗಳಲ್ಲಿ ಶಿವ ಹರಿಗಳ ದೇವಾಲಯಗಳಿದ್ದವು. ಅಲ್ಲಿಯ ಜನರು ಸತ್ಯವಂತರು, ವೀರರು, ಶಿವಭಕ್ತರಾಗಿದ್ದರು. ರಾಜರು ಶಿವನನ್ನು ಕುರಿತು ತಪಸ್ಸು ಮಾಡಿ ತಮ್ಮ ಇಷ್ಟಾರ್ಥವನ್ನು ಸಾಧಿಸಿಕೊಳ್ಳುತ್ತಿದ್ದರೆಂದು ಗ್ರಹಿಸಬಹುದು. ಜಯಶೇಖರರಾಜ ಪುತ್ರ ಸಂತಾನ ಪಡೆಯಲು ಪತ್ನಿ ಸುರಭಾವತಿಗೆ "ಪ್ರಿಯೆ ತಪದಿಂದ ಶಶಿಕಲೆಯಾಂತನೊಲಿಸಿ ಕಣ್ಗೆಸಿದೀವ ಸಂತಾನವ ಪಡೆವೆನು" (೨/೩೨) ಎಂದು ಹೇಳಿ ಕೈಲಾಸ ಪರ್ವತದಲ್ಲಿ ತಪಸ್ಸು ಮಾಡಿ ಶಿವನನ್ನು ದರ್ಶನ ಮಾಡಿ ಪುತ್ರ ಸಂತಾನ ಹೊಂದುವ ಮಂದಾರದ ಅರಳನ್ನು ತಂದು ಪತ್ನಿಯ ಮುಡಿಯಲ್ಲಿ ಮುಡಿಸಿ 'ವಿಕ್ರಮ' ಎಂಬ ಕೀರ್ತಿವಂತನಾದ ಮಗುವನ್ನು ಪಡೆಯುತ್ತಾನೆ. ಇಲ್ಲಿ ಶಿವಭಕ್ತರ ಅಪೇಕ್ಷೆಯನ್ನು ಈಡೇರಿಸುವ ದೈವವಾಗಿ ಶಿವ ಕಂಡುಬರುತ್ತಾನೆ. ಶಿವನ ಮಹಿಮೆ ಹೇಳುವ ಶಿವಭಕ್ತನಾದ ಸುರಭಿಶೇಖರ ವಿಕ್ರಮರಾಜನಿಗೆ "ಶಿವಕಥೆಯನುಪಕ್ರಮಿಸುವೆ... ಐಮೊಗದಾ ವಿಭುವಿನ ಕಥೆಗೇಳೆಂದ"(೧೨/೨೨-೨೩) ಕೈಲಾಸದಲ್ಲಿದ್ದಾಗ ಮಂದಾರ ಹೂವನ್ನು ಪಾರ್ವತಿಗೆ ನಿತ್ಯವೂ ತಂದು ಕೊಡುವ ಸೇವೆಯಲ್ಲಿದ್ದಾಗ ಕರ್ತವ್ಯದ ತಪ್ಪಿನಿಂದಾಗಿ ಶಾಪಕ್ಕೆ ಸಿಲುಕಿ ಭೂಲೋಕದಲ್ಲಿ ಜನಿಸಿದ ಪೂರ್ವ ವೃತ್ತಾಂತವನ್ನು ತಿಳಿಸುವನು. ಶಿವನ ಪತ್ನಿಯರಾದ ಪಾರ್ವತಿ ಮತ್ತು ಗಂಗೆಯರ ದ್ವೇಷ ಅಸೂಯೆಗಳಿಂದ ಶಿವನ ಕೋಪಕ್ಕೆ ಒಳಗಾದ ಬಗ್ಗೆ ಮರುಕಪಡುತ್ತಾನೆ. ತನಗೆ ನೀಡಿದ ಶಾಪದ ಪರಿಹಾರ ಕುರಿತು ಕೇಳಿದಾಗ ವಿಕ್ರಮಕುಮಾರನ ದರ್ಶನದಿಂದ ಪರಿಹಾರ ಆಗುತ್ತದೆ. ಅದರಂತೆ ಸುರಭಿಶೇಖರ ವಿಕ್ರಮಕುಮಾರನ ದರ್ಶನದಿಂದ ಮುಕ್ತಿಯನ್ನು ಹೊಂದುತ್ತಾನೆ.

"...ಮಕರಾಕರದೊಳು
ಪಗಲಾಣ್ಮರ ಪಜ್ಜಳವನು
ಮಿಗುವಂಗದ ಶಿವಸಾಗರೇಶ್ವರನೆಂಬ
ಸೊಗಸುವೆಸರ ತಾಳ್ದೆಸೆವನು
ಆತನ ನಿಡುದೆಕ್ಕೆಯ ತೆಱಪಿನ ನಡು(೧೫/೪೧)

ವಾಂತೇಳ್ಪೆಡೆಗೊಡೆವಿಡಿದಲ್ಲಿ
ಪಾತಾಳದಿನ್ನೇಳ್ವುದು ನಡುವಗಲು ವಿ
ಖ್ಯಾತ ಸಂಕಳನೆಂಬ ಪಾವೊಂದು"(೧೫/೪೨)

ಶಿವನ ಸ್ವರೂಪ ಸಮುದ್ರದ ಮಧ್ಯದಲ್ಲಿ ನೆಲೆಸಿದ್ದರಿಂದ ಶಿವಸಾಗರೇಶ್ವರ ಎಂಬ ಹೆಸರು ಬಂದಿರಬೇಕೆನಿಸುತ್ತದೆ. ಶಿವಸಾಗರೇಶ್ವರನ ವರ್ಣನೆ ಸಂದರ್ಭದಲ್ಲಿ ಮೃಗಚರ್ಮದ ಹೊದಿಕೆ ಏಳೆಡೆಯ ಸರ್ಪ ಕೊಡೆ ಹಿಡಿದಂತೆ ಇದು 'ಸಂಕುಳ' ಎಂಬ ಹಾವು ನಡುಹಗಲೇ ಪಾತಾಳದಿಂದ ಮೇಲಕ್ಕೆ ಏಳುತ್ತಿದೆಯೊ ಎಂಬಂತೆ ಪ್ರಸಿದ್ಧಿಯನ್ನು ಹೊಂದಿ ಶಿವನ ಮಹಿಮೆ ಭಕ್ತಗಿಗೆ ಆಶ್ಚರ್ಯವೆಂಬಂತೆ ಇತ್ತು ಎಂಬುದಾಗಿ ವರ್ಣಿಸಿದ್ದಾನೆ. ಶಿವಸಾಗರೇಶ್ವರನ ಭಕ್ತಿಗೆ ಮುನಿಗಳು, ದನುಜರು, ಕಿನ್ನರರು ಮುಂತಾದವರು ಸೇರಿ ಹಾಡುವ, ಹೊಗಳುವ, ನೋಡುವ, ಪ್ರದಕ್ಷಿಣೆ ಹಾಕುವ ಪರಿ ವಿಶೇಷವಾಗಿ ಶೋಭಿಸುತ್ತಿತ್ತು. ಸಾಗರೇಶ್ವರನ ದರ್ಶನದಿಂದ ಆ ಪ್ರದೇಶ ಪರುಷದ ಕಣಿಯಂತೆ ಮಹಿಮೆಯನ್ನು ಹೊಂದಿತ್ತು. ಇಂತಹ ದೈವಕ್ಕೆ ನಾಗರಿಕ ಕುಲದ ಪಕ್ಷಿಯೂ ನಿತ್ಯ ರತ್ನವನ್ನು ಉಗುಳುವ ಸೇವೆಯಲ್ಲಿ ತೊಡಗಿದ್ದು, ತನ್ನ ಕುಲವನ್ನು ರಕ್ಷಿಸಿಕೊಂಡಿತ್ತು. ಒಮ್ಮೆ ದುಷ್ಟ ಬೇಡನ ಸ್ವಾರ್ಥಕ್ಕೆ ಸಿಕ್ಕ ನಾಗರಿಕ ಪಕ್ಷಿ ಹೆಂಡತಿ ಮಗುವನ್ನು ಅಗಲಿ ಸಂಕಟದಲ್ಲಿ ಇದ್ದಾಗ ವಿಧಿಯ ಮಹಿಮೆಯಂತೆ ವಿಕ್ರಮಕುಮಾರನ ವಶಕ್ಕೆ ಬಂದು ಸುರಕ್ಷಿತವಾಗಿರುತ್ತದೆ. ಇಲ್ಲಿ ಶಿವ ಕಷ್ಟದಲ್ಲಿದ್ದವರಿಗೆ ಸಹಾಯ ಒದಗಿಸುವುದು, ಪುತ್ರ ಸಂತಾನವನ್ನು ಬೇಡಿದವರಿಗೆ ಅವರ ಬದುಕನ್ನು ಸಾರ್ಥಕ ಪಡಿಸುವ ದೈವವಾಗಿ ಕಾವ್ಯದಲ್ಲಿ ವ್ಯಕ್ತವಾಗಿದ್ದಾನೆ.

### ೭.೨.೨. ಪಾರ್ವತಿ/ಮಹಾಕಾಳಿ

ಪಾರ್ವತಿ, ಗಂಗೆ, ಪರಶಿವನ ಪ್ರೀತಿಯ ಮಡದಿಯರು. ಪಾರ್ವತಿಯ ಮತ್ತೊಂದು ಅವತಾರವೇ ಕಾಳಿ. ಈಕೆ ಉಗ್ರಸ್ವರೂಪಿ, ಬಲಿಷ್ಠ ದೇವತೆಯಾಗಿ ಅರಣ್ಯದ ಮಧ್ಯದಲ್ಲಿ ಸ್ಮಶಾನಭೀಕರ ಪ್ರದೇಶದಲ್ಲಿ ನೆಲೆಸಿರುತ್ತಾಳೆ. ಭಕ್ತರು ವಿವಿಧ ರೀತಿಯ ಬಲಿಯನ್ನು ಕೊಟ್ಟು ತಮ್ಮ ಇಷ್ಟಾರ್ಥಗಳನ್ನು ಪಡೆಯುತ್ತಿದ್ದರು. ಈ ದೇವತೆ ಜೀವ ಬಲಿ ತೆಗೆಯುವ ಹಾಗೂ ಮರುಜನ್ಮ ನೀಡುವ ವಿಶಿಷ್ಟ ಶಕ್ತಿ ಉಳ್ಳವಳಾಗಿದ್ದಾಳೆ. ಇದೇ ಕಾರಣಕ್ಕೆ ಹೆಣ್ಣು ಮಕ್ಕಳು ತಮ್ಮ ಇಷ್ಟಾರ್ಥವನ್ನು ಪಡೆಯಲು ಮೊರೆ ಹೋಗುತ್ತಾರೆ ಎನಿಸುತ್ತದೆ.

ಪುರಾಣ ಭಾರತ ಕೋಶದಲ್ಲಿ "ಕಾಳಿ–ಪಾರ್ವತಿ, ಭಯಂಕರ ರೂಪಿಯಾದ ಶಿವನ ಪತ್ನಿ, ದಾರಕನೆಂಬ ರಾಕ್ಷಸನನ್ನು ಕೊಲ್ಲಲು ಶಿವನ ಕಂಠದ ಕಪ್ಪಿನಿಂದ ಪಾರ್ವತಿಯು ನಿರ್ಮಾಣ ಮಾಡಿದ ದೇವತೆ. ಈಕೆಯು ದಾರಕನನ್ನು ಅಟ್ಟಹಾಸದಿಂದಲೇ ಕೊಂದಳು ಈಕೆಯ ಕ್ರೋಧವನ್ನು ತಗ್ಗಿಸಲು ಶಿವನು ಈಕೆಯ ಬಾಲಕನಾಗಿ ಸ್ತನ್ಯಪಾನ ಮಾಡುವ ನೆವದಿಂದ ಈಕೆಯ ಕೋಪವನ್ನು ಹೀರಿದನು[೨೦] ಎಂಬ ಮಾತಿದೆ.

ಈ ಕಾವ್ಯದಲ್ಲಿ ಮಹಾಕಾಳಿಯನ್ನು ವಿವಿಧ ಹೆಸರುಗಳಿಂದ ಕರೆದಿರುವುದನ್ನು ಕಾಣಬಹುದು. "ಮಾತೆಯಂಬಿಕೆ, ಶಕ್ತಿ, ಸಾವಿತ್ರಿ, ರಕ್ತರಣಪ್ರಿಯೆ, ವೀಣಾವತಿ, ಮಾಧವಿ, ಯಕ್ಷಿಣಿ, ಕಿನ್ನರಕುವರಿ, ಲಲಿತೆ, ಸುಮನೆ, ಸುರಸೇವಿತೆ, ಸೌದಾಮಿನಿ, ವಜ್ರೇಶ್ವರಿ, ವಾಣಿ, ಯೋಗಿಣಿ, ಸುಕ್ಷೇಮಾಮೃತೆ, ರಸಲಾವಣ್ಯ, ಸವುಂದರಿ, ಕಮಲೆ, ಕಾಪಾಲಿನಿ, ಏಕಾಕ್ಷರಿ, ನಂದಿನಿ, ಚಂಡಿ, ಕ್ಷೇಮಂಕರಿ, ಶಂಕರಿ, ಶಾಂಭವಿ, ಶಬರಿ"(೯/೪೦–೪೩) "ಜಗನ್ಮೋಹಿನಿ, ಕಾತ್ಯಾಯಿನಿ, ಭೈರವಿ,

ಭ್ರಮರಾಣಿಭಾರ್ಗವಿ"(೯/೪೪) "ದುರ್ಗಿ, ಸಾಮಜಮುಖಿ, ಕಾಮದೆ, ಕಾಳರಾತ್ರಿ, ಮಹಾಮಾಯೆ, ವಜ್ರಪಂಜರೆ, ಮೇನಕಾತ್ಮಜೆ, ಗಿರಿಸುತೆ, ಶ್ಯಾಮೆ, ಸರ್ವೇಶ್ವರಿ, ದೇವಿ"(೧೦/೮-೯) ಹೀಗೆ ಮುಂತಾದ ಹಲವು ಹೆಸರಿನಿಂದ ಕವಿ ಪಾರ್ವತಿಯನ್ನು ಕರೆದಿದ್ದಾನೆ. ಮಹಾಕಾಳಿಯು ದಟ್ಟವಾದ ಕಾಡಿನ ಮಧ್ಯ ಶ್ಮಶಾನ ಪರಿಸರದಲ್ಲಿ ನೆಲೆಸಿರುವುದನ್ನು ಹೇಳಿ ಆಕೆಯ ಸ್ವರೂಪವನ್ನು ಬಣ್ಣಿಸುತ್ತಾನೆ.

"...ಕಾಡಿಗೆ ನೀಲ ಕಾರ್ಮುಗಿ
ಲ್ಕವಿವ ಕತ್ತಲೆ ತುಂಬಿ ಹೊಗೆಗಪ್ಪ
ಜವಳಿ ಮೈ ವಣ್ಣದ ನವರತ್ನ ಸಿಂಹಾಸನ"(೯/೩೪)

"ಬಿಗಿದಡರಿದ ಪುರ್ಬಿನ ಕೆಂಗಣ್ಣಿನ ಹೊಗ
ರ್ಮೊಗವಲರ್ದ ಕುರುಳ್ಗಳ
ಸೊಗಸುವ ನಾಲ್ದೋಳಿನ ಮಹಾಕಾಳಿಯ"(೯/೩೫)

"ಹೆಡೆಯಲರ್ದೊಲೆದಾಡುವ ಮೈನೆಳಲ್ದೆಡೆ
ವೆಡೆಗೊಂಡುಮೊರದು ಭುಸ್ಸೆಂದೆಂಬ
ಪೆಡೆವಣಿಗಳ ಪಲಪಲಹಾವಿನ ಮೈ
ದೊಡಿಗೆಯೊಳೆಸೆವ ಕಾಳಿಯ ಕಂಡ"(೯/೩೬)

"ಕನ್ನಾಗ ರಾಗದಿಂದೆಲುವಿನ ತಲೆಮಾಲೆ
ಚೆನ್ನೆಸವರುಣ ತಿಲಕದಿಂದ
ಪೊನ್ನರಳ್ಗಳ ತೊಂಡಲು ದಂಡೆಯಿಂದೊಪ್ಪವ ಕಾಳಿಯ"(೯/೩೭)

ಕಾಡಿಗೆಯ, ಕಪ್ಪನೆ ಕಾರ್‌ಮೋಡ, ಹೊಗೆ ಕವಿದಂತ ಮೈಬಣ್ಣ, ಕೆಂಗಣ್ಣು, ಗಂಟಿಕ್ಕಿದ ಹುಬ್ಬುಗಳು, ನಾಲ್ಕು ಕೈಗಳು ಹಾವಿನ ಹೆಡೆಯಲ್ಲಿದ್ದ ರತ್ನದ ಆಭರಣ, ಅರುಣ ತಿಲಕ, ಕರಿನಾಗರ ಆಭರಣ, ಬಂಗಾರದ ಅರಳುಗಳ ದಂಡೆಗಳಿಂದ ದೇವಿ ಭಯಾನಕವಾಗಿ ಶೋಭಿಸುತ್ತಿದ್ದಳು. ದೇವಿಯ ಸುತ್ತ ಹೆಣಗಳನ್ನು ಸುಡುತ್ತಿರುವ ದೃಶ್ಯವಿತ್ತು ಅಲ್ಲೇ ಭೂತಗಳು ಹಲ್ಲು ಮಸೆಯುವಂತೆ ದಿಟ್ಟಿಸುತ್ತಿದ್ದು ಕಾಡನ್ನು ಸುತ್ತುವರೆದಿದ್ದವು.

ಮಹಾಕಾಳಿಯಂತಹ ಶಕ್ತಿ ದೇವತೆಯನ್ನು ಒಲಿಸಿಕೊಳ್ಳಲು ಭಕ್ತರು ಎಂತೆಂಥಹ ಉಗ್ರ ಪರೀಕ್ಷೆಗಳಿಗೆ ತಮ್ಮ ದೇಹವನ್ನು ಒಳಗು ಮಾಡಲು ಸಿದ್ಧರಿರುತ್ತಿದ್ದರು ಎಂಬುದನ್ನು ವಸಂತೆಯ ಉಗ್ರ ಪ್ರತಿಜ್ಞೆಯಲ್ಲಿ ಕಾಣಬಹುದು. ಭಕ್ತರು ಎಷ್ಟೇ ಕಷ್ಟಗಳನ್ನು ಅನುಭವಿಸಿಯಾದರೂ ತಮ್ಮ ಕಾರ್ಯಸಾಧನೆ ಮಾಡುತ್ತೇವೆಂಬ ಕೆಚ್ಚುಳ್ಳವರಾಗಿದ್ದರು. ಹೀಗಾಗಿಯೇ ಮಹಾಕಾಳಿಯ ಕೃಪೆಯಿಂದ ಶ್ರೀಧರಪುರದ ಅರಸ ಕುಹಳ ಮತ್ತು ರಾಣಿ ನಳಿನಿ ಇವರಿಗೆ ಹೆಣ್ಣು ಮಗು ಜನಿಸುತ್ತದೆ. ಅವಳ ಹೆಸರು ವಸಂತೆ. ಇವಳನ್ನು ಮುದ್ದಾಗಿ ಬೆಳೆಸಿ ದೊಡ್ಡವಳನ್ನಾಗಿ ಮಾಡುತ್ತಾನೆ. ಮದುವೆ ವಯಸ್ಸಿಗೆ ಬಂದಾಗ ತಂದೆ ತಾಯಿಯರು ಅವಳ ಮದುವೆ ಮಾಡಿಸುವ ವಿಷಯ ಪ್ರಸ್ತಾಪಿಸಿದಾಗ

"ದೇವಿ ಮಗಳೆ ಮಹಾಕಾಳಿಯವರದಿಂದೆಮೆ
ಗೊಗೆದೆ ಮಾಕಾಳಿ, ಪೇಳ್ದವನಿಗೆ
ಬಗೆ ನಮ್ಮ ಮಾತು ಲೆಕ್ಕವೆಯಂದು"(೮/೨೫) ಹೇಳಿದನು.

ಅರಸ ತನ್ನ ನಿರ್ಧಾರವನ್ನು ಮಗಳಿಗೆ ತಿಳಿಸುತ್ತಾನೆ. ಈ ಮಾತಿಗೆ ಮಗಳು ಒಪ್ಪದೇ ಮೌನವಹಿಸುತ್ತಾಳೆ. ತಾನು ದೇವಿಯ ವರದಂತೆ ಸವತಿಯಾಗಲು ಒಪ್ಪುವುದಿಲ್ಲ. ಮಗಳೇ ದೇವಿಯಿಂದ ವರಪಡೆದು ವಿವಾಹವಾಗುವೆನೆಂದು ನಿರ್ಧರಿಸಿದಳು. ಇವಳ ಗೆಳತಿ ಲಲಿತೆ ಸ್ಪಂದಿಸಿ ತಪಸ್ಸಿಗೆ ಕುಳಿತಳು. ಲಲಿತೆಯನ್ನು ಕಂಡ ವಿಕ್ರಮಕುಮಾರ ಕುತೂಹಲದಿಂದ ಈ ವಿಷಯ ತಿಳಿದು ಮಹಾಕಾಳಿಯನ್ನು ಪೂಜಿಸಿ ವರವನ್ನು ತಂದುಕೊಡುವ ಭರವಸೆಯಿತ್ತನು. ಮಧುರ ಎಂಬ ವೀರಸಹೋದರನನ್ನು ಕರೆದುಕೊಂಡು ಹೋಗಿ ಪೂಜೆ ಮಾಡಿ ವರವನ್ನು ಬೇಡುತ್ತಾನೆ. ಒಪ್ಪದಿದ್ದಾಗ ತಾನೇ ತನ್ನ ಶಿರವನ್ನು ಕತ್ತರಿಸಿಕೊಂಡು ದೇವಿಗೆ ಅರ್ಪಿತನಾಗುತ್ತಾನೆ. ಜೊತೆಗೆ ಮಧುರನು ಆತ್ಮಾಹುತಿ ಆಗುತ್ತಾನೆ. ಇವರ ಭಕ್ತಿಗೆ ಮೆಚ್ಚಿದ ಮಹಾಕಾಳಿ ಇವರನ್ನು ಬದುಕಿಸಿ ಬೇಡಿದ ವರವನ್ನು ಕೊಟ್ಟು ಆಶೀರ್ವದಿಸುತ್ತಾಳೆ. ವಿಕ್ರಮ ವಸಂತೆ ತಂದೆ ತಾಯಿಯ ಸಮ್ಮುಖದಲ್ಲಿ ಮಧುರನೊಂದಿಗೆ ವಸಂತೆಯ ವಿವಾಹ ಮಾಡಿಸಿ ವಿರಮಿಸುತ್ತಾನೆ. ಇಲ್ಲಿ ವಸಂತೆಯ ಸಂಕಲ್ಪ ಈಡೇರುವುದು ಮಹಾಕಾಳಿಯ ಕೃಪೆಯಿಂದ ಸುಗಮವಾಗಿ ನೆರವೇರುವುದು ವಿಶೇಷವಾಗಿದೆ. ದೈವಿಕ ಜಗತ್ತಿನಲ್ಲಿ ದೇವಿಯನ್ನು ವೈಭವೀಕರಿಸಿ ಸ್ತ್ರೀತ್ವದ ದೈವೀ ಮಾದರಿಯನ್ನು ಅನಾವರಣಗೊಳಿಸಿರುವುದು ಕಂಡುಬರುತ್ತದೆ.

### ೭.೨.೩. ಮುನಿ/ತಪಸ್ವಿ

ಪ್ರಾಚೀನ ಕಾಲದಲ್ಲಿ ಶಿಕ್ಷಣವನ್ನು ನೀಡುವ ಹಾಗೂ ಧರ್ಮವನ್ನು ಪ್ರಸಾರ ಮಾಡುವ ಜವಾಬ್ದಾರಿಯನ್ನು ಮುನಿಗಳು ನಿರ್ವಹಿಸುತ್ತಿದ್ದರು. ಮುನಿ, ತಪಸ್ವಿ, ಋಷಿ, ಸನ್ಯಾಸಿ ಮುಂತಾದ ಹೆಸರಿನಿಂದ ಕರೆಯಲ್ಪಡುವ ಇವರು ಊರಿನಿಂದ ದೂರವಿರುವ ಪ್ರಕೃತಿ ತಾಣಗಳಲ್ಲಿ, ಅರಣ್ಯಗಳಲ್ಲಿ ವಾಸಿಸುತ್ತಿದ್ದರು. ಮುನಿಗಳು ನೆಲಸಿದ್ದ ತಾಣಗಳನ್ನು 'ಆಶ್ರಮ', 'ತಪೋವನ', 'ನಂದನ'ಗಳೆಂದು ಕರೆಯುತ್ತಿದ್ದರು. ಅಂದರೆ "ತಪಸ್ಸನ್ನು ಆಚರಿಸುವವನು, ಋಷಿ, ತಪಸ್ವಿ ತ್ರಿಕಾಲದರ್ಶಿಯು" ಆಗಿದ್ದು, ಲೋಕದ ಹಿತಕ್ಕಾಗಿ ತಪಸ್ಸನ್ನು ಮಾಡಿ ಅನೇಕ ಸಿದ್ಧಿಯನ್ನು ಪಡೆಯುತ್ತಿದ್ದರು. ತಮ್ಮ ಜೊತೆಯಲ್ಲಿ ಅನೇಕ ಶಿಷ್ಯರನ್ನು ಬೆಳೆಸುತ್ತ ಧರ್ಮ, ಶಿಕ್ಷಣ, ಆಡಳಿತ, ಸಮಾಜ ಮುಂತಾದ ಕ್ಷೇತ್ರಗಳಿಗೆ ಮಾರ್ಗದರ್ಶನ ಮಾಡುತ್ತಿದ್ದರು. ಆ ಮೂಲಕ ಜನರಿಂದ ಭಕ್ತಿ ಗೌರವಾದರಗಳನ್ನು ಪಡೆದು ಉನ್ನತ ಸ್ಥಾನದಲ್ಲಿರುತ್ತಿದ್ದರು. ಕೆಲವೊಮ್ಮೆ ರಾಜರು, ಜನರಿಂದ ಕಡೆಗಣಿಸಲ್ಪಟ್ಟಾಗ ಮುನಿಗಳ ಕೋಪಕ್ಕೆ ತುತ್ತಾಗುತ್ತಿದ್ದರು. ಮುನಿಗಳು ಶಾಪವನ್ನು, ಮತ್ತೆ ಪರಿಹಾರಕ್ಕಾಗಿ ಉಃಶಾಪವನ್ನು ಕೊಟ್ಟು ತಮ್ಮ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳುತ್ತಿದ್ದರು.

ದೇಪರಾಜ ಸೊಬಗಿನ ಸೋನೆ ಕಾವ್ಯದಲ್ಲಿ ಮುನಿ, ತಪಸ್ವಿ ಕುರಿತಂತೆ "ನನೆಗಣೆಗಳಿಗೆ ಜಿತೇಂದ್ರಿಯನೆನಿಸುವ ಮುನಿಯಳುಕುವನೆ"(೫/೧೭) ಎಂದು ಕವಿ ಪ್ರಶ್ನಿಸುತ್ತ ಮುನಿಗಳು ಇಂದ್ರಿಯ ಜಿತೇಂದ್ರಿಯತ್ವವು ಬಂದಮೇಲೆ ಧರ್ಮ, ಅರ್ಥ, ಕಾಮಗಳೆಂಬ ಪುರುಷಾರ್ಥಗಳನ್ನು ಸಾಧಿಸುವ

ಅಧಿಕಾರ ಬರುತ್ತದೆ. ಸುಖಗಳಿಂದ ದೂರವಿದ್ದು ಬದುಕಿನ ಸಾರ್ಥಕತೆಯನ್ನು ಸಾರುತ್ತಿದ್ದರು. ಕಾಶ್ಮೀರದ ಅರಸ ಸೌಂದರ ಮುನಿಯ ಕೋಪಕ್ಕೆ ತುತ್ತಾಗಿ ತಾನು ನಾಶಹೊಂದಿ ಮಕ್ಕಳು ದಿಕ್ಕುದೆಸೆಯಿಲ್ಲದಂತಾಗುತ್ತಾರೆ. ಜನ ಮುನಿಯ ಪ್ರೀತಿ ವಿಶ್ವಾಸಗಳಿಂದ ಸುಖವಾಗಿ ಬದುಕಿ ವರಗಳನ್ನು ಪಡೆದು ಉತ್ತಮರಾಗಿರುತ್ತಿದ್ದರು ಎನ್ನಿಸುತ್ತದೆ. ಅರಣ್ಯದಲ್ಲಿ ಗಂಡುಸಿಂಹದ ಬೇಟೆಗೆ ಹೋದ ಅರಸ ಮುನಿಯ ಆಶ್ರಮದ ಪ್ರಕೃತಿ ಸಂಪತ್ತನ್ನು ನಾಶಗೊಳಿಸುತ್ತಾನೆ. ಅಲ್ಲಿದ್ದ ಋಷಿಕುಮಾರರು ಅರಸನಿಗೆ ಪ್ರತೀಕಾರವೊಡ್ಡುತ್ತಾರೆ.

"ಬೇಡಬೇಡೆಲೊ ರೋಷ ಭಾಸ್ಕರನೆಂದೆಂಬ
ಗಾಡಿಕಾಱನ ನಂದನವಿದು
ನಾಡಾಡಿ ಋಷಿಯಲ್ಲವೆಂದೆಳೆ ತಪಸಿಗ
ಳಾಡಿದರಂದು ಪುಲ್ಪಿಡಿದೆತ್ತಿ"(೬/೧೧)

ಇದರಿಂದ ರೋಷಭಾಸ್ಕರ ಮುನಿಯು ಸಾಮಾನ್ಯ ಋಷಿಯಾಗಿರಲಿಲ್ಲ. ಈತ ಕಡು ಕೋಪಿಷ್ಟನಾಗಿದ್ದನೆಂಬುದು ಅಲ್ಲಿದ್ದ ಎಳೆಯ ತಪಸ್ವಿಗಳಿಂದ ವ್ಯಕ್ತವಾಗುತ್ತದೆ. ಆದರೆ ಸೌಂದರ ರಾಜನ ಪರಿವಾರ ಮುನಿಕುಮಾರರೊಂದಿಗೆ ಅಸಡ್ಡೆಯಿಂದ ವರ್ತಿಸಿ ಅವರನ್ನು ಕಟ್ಟಿಹಾಕಿದರು. ಇದೆಲ್ಲವನ್ನು ಕೇಳಿ ತಿಳಿದ ರೋಷಭಾಸ್ಕರ ಮುನಿ ತನ್ನ ಕಿರುಜಡೆಯನ್ನು ಕಿತ್ತು ಜಿಸಾಡಿದನು. ಅದು ಉಗ್ರ ರೂಪವನ್ನು ತಾಳಿ ಮುನಿಯ ಆಜ್ಞೆಗೆ ಕಾತರಿಸಿತು.

"ಹಾ ಹಾ ಹಸಿದೆ ಹಸಿದೆ ನೀಡು ನೀಡೆನ
ಗಾಹುತಿಯೇನೆಂದು ಬೆಸಗೊಳ್ಳೆ
ನೀ ಹೋಗಿ ಮುಱಿದು ಮೊದಲಿಗ ಸೌಂದರ ಸಿರಿ
ಯಾಹುತಿ ಹೋಗೆಂದಟ್ಟಿದ ಮುನಿ"(೭/೩೦)

ಮುನಿಯ ಉಗ್ರವಾದ ಸಿಟ್ಟಿಗೆ ಸೌಂದರರಾಜನ ವಂಶ ಮತ್ತು ಸಾಮ್ರಾಜ್ಯ ಕಷ್ಟಕ್ಕೆ ಸಿಲುಕಿ ಬಲಿಯಾಗುತ್ತದೆ. ಯಾರೇ ಆಗಲಿ ಗುರುಹಿರಿಯರ ಮಾತನ್ನು ತಿರಸ್ಕರಿಸಿದರೆ ಅವರಿಗೆ ನರಕ ಪ್ರಾಪ್ತಿ ತಪ್ಪಿದ್ದಲ್ಲವೆಂದು ಕವಿ ಸೂಚಿಸುತ್ತಾನೆ.

"ಗುರುವಿನಾಜ್ಞೆಯ ಶಿಷ್ಯನು ಪಿತನಾಜ್ಞೆಯ
ವರಸುತನೊಡೆಯನಾಜ್ಞೆಯ ಬಂಟ
ಪುರುಷನಾಜ್ಞೆಯ ಹೆಂಡತಿ ಮೀಱಿ ರೌರವ
ನರಕತಪ್ಪದು ಕೇಳೆಂದ"(೬/೬೫)

ಗುರು ಹಿರಿಯರ, ತಂದೆ ತಾಯಿ, ಒಡೆಯ, ಗಂಡ ಇವರ ಮಾತನ್ನು ಮೀರಿದ ಶಿಷ್ಯರು, ಮಕ್ಕಳು, ಹೆಂಡತಿ, ಸೈನಿಕರು ನರಕವನ್ನು ಸೇರಿದಂತೆ ರೋಷಭಾಸ್ಕರನ ಸ್ವರೂಪ ಶಿವನಂತೆ ಇತ್ತು.

"ವಿಷಧರನಲ್ಲದ ಅರವೆಣ್ಣೆನಿಸದ
ಬಿಸಿಗಣ್ಣನಾಗದ ಶಿವನಂತೆ

ಎಸೆವನ ಕಂಡೆವು ಕಿಜೆಜಡೆ ಸುಲಿಪಲ್ಲ
ಭಸಿತಾಂಗ ರೋಷಭಾಸ್ಕರನನು"(೭/೭)

ಆತ ಚಿಕ್ಕಜಡೆ, ಭಸ್ಮ ಧರಿಸಿ ಹಲ್ಲಿಲ್ಲದ ವೃದ್ಧನ ಸ್ವರೂಪದಲ್ಲಿ ಇದ್ದನು.

ರೋಷ ಭಾಸ್ಕರ ಮುನಿಯ ದ್ವೇಷ ಮತ್ತು ಪ್ರೀತಿಯಿಂದ ಶಾಪ ಹಾಗೂ ವರವನ್ನು ನೀಡುವುದನ್ನು ಅನುಭವಿಸಿ ತಿಳಿದಿದ್ದೇವೆ.

"ಅಜೆಯಿರೆ ಮುನಿದಡೇರೇಳು ಲೋಕಂಗಳ
ಮುಜಿದು ಮೋದುವ ಕೂರ್ತಡೆ ಕೇಳ
ಮಜುಪುಟ್ಟಿಸುವ ಸವುಂದರ ಸಿರಿ ಮುನ್ನೀರ
ನೆಜಿಸಿದ ರೋಷಭಾಸ್ಕರನನು"(೭/೯)

ಮುನಿಗಳ ದ್ವೇಷದಿಂದ ಶಿಷ್ಯರಿಗೆ ಆದ ಕೆಡುಕು ಸಾಮಾನ್ಯವಲ್ಲ ಅದು

"ಇಂದಿರ ದೂರ್ವಾಸನಿಂದ ವಿಶ್ವಾಮಿತ್ರ
ನಿಂದ ಹರಿಶ್ಚಂದ್ರನು ಕೇಳ
ಸೌಂದರ ರೋಷಭಾಸ್ಕರನಿಂದಗಸ್ತ್ಯನಿಂ
ದಂದು ನಹುಷ ಕೆಟ್ಟುದನಜೆಯೆಯ"(೭/೨೧)

ಮುನಿಗಳಿಂದ ಶಿಷ್ಯರು, ಸಲಹೆ ಆಶೀರ್ವಾದಗಳನ್ನು ಪಡೆದು ಬಾಳಿದರೆ ಬದುಕು ಸಾರ್ಥಕವಾಗುತ್ತದೆ. ಇಲ್ಲದಿದ್ದರೆ ಅವರಿಂದ ಕೇಡನ್ನು ಅನುಭವಿಸುವ ಪರಿಸ್ಥಿತಿಯನ್ನು ತಂದುಕೊಳ್ಳಬಾರದೆಂಬ ಸೂಚನೆಯನ್ನು ಕವಿ ನೀಡಿದ್ದಾನೆ. ಈ ಹಿಂದೆ ನಡೆದ ಘಟನೆಯನ್ನು ಉದಾಹರಿಸುತ್ತ ದೂರ್ವಾಸನಿಂದ ಇಂದ್ರ, ವಿಶ್ವಾಮಿತ್ರನಿಂದ ಹರಿಶ್ಚಂದ್ರ, ಅಗಸ್ತ್ಯನಿಂದ ನಹುಷ, ರೋಷಭಾಸ್ಕರನಿಂದ ಸೌಂದರರಾಜ ಕೆಟ್ಟದ್ದು ಆಗಿದ್ದನ್ನು ಸ್ಮರಿಸಿಕೊಂಡು ಬಾಳಲು ಸಲಹೆ ನೀಡಿದ್ದಾರೆ. ಇದರಿಂದ ಮುನಿಗಳನ್ನು ಧಾರ್ಮಿಕ ನಾಯಕತ್ವದ ಶ್ರೇಷ್ಠ ಮಾದರಿಗಳೆಂದು ಗ್ರಹಿಸಬಹುದು.

**೭.೨.೪. ಕಾಪಾಲಿಕರು**

ಸಪ್ತ ಶೈವಗಳಲ್ಲಿ ಕಾಪಾಲಿಕ ಶೈವವೂ ಒಂದು. ಇವರನ್ನು ಅಘೋರಿಗಳು, ಭೈರಾಗಿಗಳು, ಗೊರವರು ಎಂದು ಮುಂತಾಗಿ ಕರೆಯಲಾಗಿದೆ. ವಾಮಾಚಾರ ಪದ್ಧತಿಯಿಂದ ಇವರು ತಮ್ಮದೇ ಆದ ವಿಶಿಷ್ಟ ಆಚರಣೆಯಿಂದ ಗುರುತಿಸಿಕೊಳ್ಳುತ್ತಾರೆ. ಇವರು "ತಲೆಬುರುಡೆಗಳಲ್ಲಿ ಭಿಕ್ಷೆ ಸ್ವೀಕರಿಸಿ ಅವುಗಳಲ್ಲಿಯೇ ಆಹಾರ ಪಾನೀಯಗಳನ್ನು ಸೇವಿಸುವ ಕ್ರಮವಿಟ್ಟುಕೊಂಡ ಒಂದು ಶೈವ ಪಂಥ"[೨೧] ಎಂದೂ "ಈ ಪಂಥದವರು ಕಪಾಲಧಾರಿಗಳು ಆದುದರಿಂದ ಇವರನ್ನು ಕಾಪಾಲಿಕರೆಂದು ಕರೆಯಲಾಗುತ್ತದೆ. ಇವರು ಸ್ಮಶಾನವಾಸಿಗಳು, ವಿಷಯಲೋಲುಪರು, ಶಿವನು ಉಮೆಯೊಡನೆ ಕೂಡಿರುವಂತೆ ಇವರು ಕಾಂತಾಸಂಹಿತರಾಗಿರುವುದರಿಂದ ಇವರನ್ನು ಸೋಮ ಎಂದು ಕರೆಯಲಾಗುತ್ತದೆ"[೨೨] "ಕೃಷ್ಣಮಿಶ್ರನ ಪ್ರಭೋಧಚಂದ್ರೋದಯದ ಕಾಪಾಲಿಕನು ಮಹಾಭೈರವನ ಆರಾಧಕನಾಗಿದ್ದು, ಅದೇ ತಾನೇ ಕಡಿದ ನರಮುಂಡಗಳ ರಕ್ತದಿಂದ ಭೈರವನನ್ನು ತೃಪ್ತಿಪಡಿಸಬೇಕು

ಎನ್ನುತ್ತಾನೆ"[೨೩] ಎಂಬ ಲಕ್ಷಣಗಳಿವೆ. ಈ ಹಿನ್ನೆಲೆಯಲ್ಲಿ ಕಾಪಾಲಿಕರು ಭೈರವನ ಆರಾಧಕರೆಂದು ತಿಳಿದುಬರುತ್ತದೆ.

ಕವಿ ದೇಪರಾಜನ ಸಮಕಾಲ ಘಟ್ಟದಲ್ಲಿ ವಾಮಾಚಾರ ಪದ್ಧತಿಯಿಂದ ಕೂಡಿದ ಕಾಪಾಲಿಕ ಪಂಥವು ಕರ್ನಾಟಕದಲ್ಲಿ ಇನ್ನೂ ಜೀವಂತವಾಗಿತ್ತೆಂದು ಸೊಬಗಿನ ಸೋನೆ ಕಾವ್ಯದಿಂದ ತಿಳಿದುಬರುತ್ತದೆ.

"ಕಂದೆತ್ತ ಕರಿಗೊರಲಗೆ ತಲೆಯೊತ್ತರ
ಚಂದಿರದಲೆಯ ಕಪಾಲಿಗೆ..."(೧೩/೧೦)
"ಮರುಳನ ತೊವಲುಡೆಯನ ಬೂದಿಗೊರವನ
ಹೊರವರಿಲ್ಲದನ ಕಾಪಾಲಿಯ
ಧರೆ ಮೆಚ್ಚೆ ...(೧೩/೧೩)

ಮುಂತಾಗಿ ಕಾಪಾಲಿಕರ ಲಕ್ಷಣ ಹೇಳಲಾಗಿದೆ. ಕೊಳಕು ದೇಹ, ಕಪ್ಪು ಕೊರಳಿನ ತಲೆಯನ್ನು ತುರಿಸಿ ಕಪ್ಪು ಮಾಡಿಕೊಂಡಿದ್ದ ವ್ಯಕ್ತಿ, ಅಲ್ಲದೆ ಹುಚ್ಚನಂತೆ ತನ್ನ ಮೈಗೆ ಬೂದಿ ಹಚ್ಚಿಕೊಳ್ಳುವ ಗೊರವ, ಅವನು ಯಾರ ರಕ್ಷಣೆಗೆ ಒಳಗಾಗದ ವ್ಯಕ್ತಿ ಕಾಪಾಲಿಕ. ಒಟ್ಟಾರೆಯಾಗಿ ಯಾರಿಗೂ ಹಿತವಾಗದ ಅಸಹ್ಯ ಲಕ್ಷಣವುಳ್ಳ ವ್ಯಕ್ತಿಯಾಗಿದ್ದಾನೆ. ಇದರಿಂದ ಕಾಪಾಲಿಕನು ಸೌಂದರ್ಯೋಪಾಸಕನಲ್ಲ ಎನ್ನಬಹುದು. ಇಂಥ ಲಕ್ಷಣವನ್ನು ಶಿವನ ಹಲವು ವೇಷಗಳಲ್ಲಿ ಕಾಪಾಲಿಕರ ವೇಷವೂ ಒಂದು ಎಂದು ಹೇಳಿಕೊಳ್ಳುವಂತಿದೆ.

ಹಾಗೆಯೇ ಕವಿ ಮುಂದುವರಿದು ಶಿವನನ್ನು ವರ್ಣಿಸುವಾಗ
"ಈ ಪರಿಶ್ರುತಿಗಾತ್ರದ ನುತಪಾತ್ರನ
ಕಾಪಾಲಿಯನಸ್ತಿಮಾಲಿಯ
ಆ ಪರಮೇಶನ ಪೊಗಳ್ದೆನು ದೇವ ಕ
ಲಾಪಕಬೇಧ್ಯ ಚಾರಿತ್ರನ"(೧೬/೪೫)

ಅಂದರೆ ಪಾನಮತ್ತನಾಗಿ ಹಾಡುತ್ತಾ ಕೊರಳಲ್ಲಿ ಮೂಳೆಗಳ ಮಾಲೆ ಧರಿಸಿ ಕಪಾಲ ಹಿಡಿದು ಭಿಕ್ಷೆ ಬೇಡುವ ಪರಮೇಶ್ವರನನ್ನು ಚಿತ್ರಿಸಿರುವ ಸಂದರ್ಭದಲ್ಲಿ ಕಾಪಾಲಿಕನ ಲಕ್ಷಣವನ್ನು ಹೇಳಿದ್ದಾನೆ ಎನ್ನಿಸುತ್ತದೆ.

ಹೀಗಾಗಿ ದೇಪರಾಜ ತಾನು ಬದುಕಿದ ಹದಿನೈದನೆಯ ಶತಮಾನದ ಆರಂಭದಲ್ಲಿ ಕಾಪಾಲಿಕ ಪಂಥವು ಇನ್ನೂ ಅಸ್ತಿತ್ವದಲ್ಲಿತ್ತೆಂಬುದನ್ನು ಗ್ರಹಿಸಬಹುದಾಗಿದೆ.

"ಕಾಪಾಲಿಕರು ಸಮಾಜದ ಒಂದು ಭಾಗವಾಗಿರದೆ ಅಲೆಮಾರಿಗಳಾಗಿ ಬೆಟ್ಟಗುಡ್ಡಗಳಲ್ಲಿ ಕೇಂದ್ರಗಳನ್ನು ಸ್ಥಾಪಿಸಿಕೊಂಡು ತಮ್ಮ ಧಾರ್ಮಿಕ ನಿಯಮಗಳನ್ನು ಅನುಸರಿಸಿಕೊಂಡು ಬಂದರು. ಸಮಾಜದ ಪ್ರತಿನಿಧಿಯಾಗಿ ಭಾಗವಹಿಸದೇ ಇದ್ದುದು, ರಾಜಾಶ್ರಯವನ್ನು ಯೋಚನೆಮಾಡದಿದ್ದುದು, ವೈಯಕ್ತಿಕ ಸಾಧನೆಯ ವಿಚಿತ್ರ ಆಚರಣೆಗಳು, ಆಗಲೇ ಜನಾನುರಾಗವನ್ನು ಗಳಿಸುತ್ತಿದ್ದ ಕಾಳಾಮುಖರ ಜೊತೆ ಸೂರ್ಯನ ಮುಂದೆ ಸೊಡರಂತೆ ಗೋಚರಿಸಿದ್ದು ಇತ್ಯಾದಿ ಅಂಶಗಳಿಂದ ತಮ್ಮ

ಪರಂಪರೆಯನ್ನು ಕನ್ನಡ ನಾಡಿನಲ್ಲಿ ಮುಂದುವರಿಸಿಕೊಂಡು ಬರಲು ಸಾಧ್ಯವಾಗಲಿಲ್ಲ ಎಂದೆನಿಸುತ್ತದೆ."[೨೪] ಹೀಗೆ ವಾಮಾಚಾರಪಂಥವಾದ ಕಾಪಾಲಿಕರ ನಡೆನುಡಿಗಳನ್ನು, ಅವರ ಸ್ವರೂಪವನ್ನು ಕವಿ ತುಂಬ ವಸ್ತುನಿಷ್ಠವಾಗಿ ಚಿತ್ರಿಸಿರುವುದು ಕಂಡುಬರುತ್ತದೆ.

**೭.೨.೫. ಯೋಗಿಣಿಯರು**

ಭಾರತೀಯ ಪರಂಪರೆಯಲ್ಲಿ ಯೋಗ, ಸಂನ್ಯಾಸ, ತಪಸ್ಸು, ಧ್ಯಾನ, ಆಧ್ಯಾತ್ಮ ಇವುಗಳಿಗೆ ಪ್ರಮುಖ ಸ್ಥಾನವಿದೆ. ಯೋಗ ಮತ್ತು ಸಂನ್ಯಾಸದಿಂದ ಮನುಷ್ಯನ ಮನಸ್ಸನ್ನು ಸ್ವಾಸ್ಥ್ಯ ಸ್ಥಿತಿಯಲ್ಲಿಡಲು ಸಾಧ್ಯ ಎಂಬುದನ್ನು ಭಾರತವು ಜಗತ್ತಿಗೆ ಸಾರಿದೆ. ಯೋಗವು ದೈಹಿಕ ಹಾಗೂ ಮಾನಸಿಕ ಸಮತೋಲನ ಕಾಯ್ದುಕೊಳ್ಳುವ ಮೂಲಕ ವ್ಯಕ್ತಿಯನ್ನು ಸುಸ್ಥಿತಿಯಲ್ಲಿಡುತ್ತದೆ. ಪ್ರಾಚೀನ ಕಾಲದಿಂದಲೂ ಇದು ಭಾರತದಲ್ಲಿ ಅಸ್ತಿತ್ವದಲ್ಲಿದೆ. ತಪಸ್ಸು, ಸಂನ್ಯಾಸ ಮಾನವನ ಕಲ್ಯಾಣಕ್ಕಾಗಿ ಇವುಗಳನ್ನು ಸಿದ್ಧಿಸಿಕೊಳ್ಳಲು ಯೋಗಬೇಕು. ಈ ಯೋಗ ಸಾಧನೆಯ ಮೂಲಕ ಸಂನ್ಯಾಸನ ವ್ರತದಿಂದ ತಪಗೈದು ಮಾನವ ಕಲ್ಯಾಣಕ್ಕಾಗಿ ಅಹರ್ನಿಶವಾಗಿ ದುಡಿದ ಅನೇಕ ತಪಸ್ವಿಗಳು, ಯೋಗಿಗಳು ಆಗಿ ಹೋಗಿದ್ದಾರೆ.

ಯೋಗ ತಪಸ್ಸು ಕೇವಲ ಪುರುಷರಿಗೆ ಮಾತ್ರ ಸೀಮಿತವಾಗಿಲ್ಲ. ಮಹಿಳೆಯರೂ ಅದರಲ್ಲಿ ಅದ್ವಿತೀಯ ಸಾಧನೆ ಮಾಡಿದ್ದಾರೆ. ಪುರುಷರಿಗೆ ಸರಿಸಮಾನವಾಗಿ ಯೋಗ ಸಾಧನೆ ಮಾಡಿ ತಮ್ಮದೇ ಆದ ಸ್ಥಾನಮಾನ ಹೊಂದಿದ್ದಾರೆ. ತಪಸ್ಸು ಯೋಗವನ್ನು ಅನುಸರಿಸುವ ಮಹಿಳೆಯರನ್ನು ಯೋಗಿಣಿಯರೆಂದು ಕರೆಯುತ್ತಾರೆ. 'ಯೋಗಿಣಿ' ಎಂಬ ಪದಕ್ಕೆ ಕಿಟೆಲ್‌ರ ಕನ್ನಡ-ಇಂಗ್ಲಿಷ್ ನಿಘಂಟುವಿನಲ್ಲಿ ''a female demon of being endowed with magical power, a fairy, a sorcercess, one of the eight yoginis created by and attendant on Durga a class of yoginis, of which sixty four are enumrated."[೨೫] ಅಂದರೆ ಹೆಣ್ಣು ದೆವ್ವ, ಪಿಶಾಚಿ, ಭೂತ, ತಂತ್ರಶಕ್ತಿ, ಮಂತ್ರವಾದಿ ಎಂಬ ಎಂಟು ಪ್ರಕಾರದ ದುರ್ಗಿಯರು, ಅರವತ್ನಾಲ್ಕು ಯೋಗಿಣಿಯರು ಎಂಬಿತ್ಯಾದಿ ಅರ್ಥ ನೀಡಲಾಗಿದೆ.

ಕಸಾಪದ ಕನ್ನಡ ನಿಘಂಟುವಿನಲ್ಲಿ "ಮಾಟಗಾತಿ, ಮಾಯಾವಿನಿ, ದುರ್ಗಾದೇವತೆಯ (ಅಥವಾ ಶಿವನ) ಸೇವೆಗೆ ಇರುವ ಎಂಟು ಜನ ಶಕ್ತಿಯರು, ಅಷ್ಟದೇವತೆಗಳು"[೨೬] ಎಂದು ಅರ್ಥ ನೀಡಿದೆ.

ದೇಪರಾಜ ತನ್ನ ಕಾಲದಲ್ಲಿದ್ದ ಮಂತ್ರಗಾತಿಯರು ಅಥವಾ ಮಾಟಗಾತಿಯರು ಅಥವಾ ಯೋಗ ಸಾಧಕಿಯರ ಬಗ್ಗೆ ಸೊಬಗಿನ ಸೋನೆ ಕಾವ್ಯದಲ್ಲಿ ದಾಖಲಿಸಿದ್ದಾನೆ. ಅವರು

> "ತೊಱೆವೆಣ್ಗಳು ಬನವೆಣ್ಗಳು ದೆಸೆವೆಣ್ಗ
> ಳಱುವತ್ತು ನಾಲ್ಕು ಯೋಗಿಣಿಯರು
> ಅಱಿಕೆವೆಣ್ಮೊದಲಾದ ಪಲವೆಂಗಳೋಲಗ
> ಮೆಱೆದುದು ಜಸಗಂಪನ ಕಣ್ಗೆ"(೯/೩೩) ಶೋಭಿಸಿದರು.

ನದಿ ತೀರದಿಂದ ಬಂದ ಸ್ತ್ರೀಯರು, ಅರಣ್ಯವಾಸಿ ಸ್ತ್ರೀಯರು ನಾನಾ ದಿಕ್ಕಿನ ಕಡೆಯಿಂದ ಬಂದ ಸ್ತ್ರೀಯರು ಅಲ್ಲದೆ ಅರವತ್ನಾಲ್ಕು ಯೋಗಿಣಿಯರು, ವ್ರತನಿರತ ಸ್ತ್ರೀಯರು ಇನ್ನು ಮೊದಲಾದವರು ಜಸಗಂಪನ ಓಲಗದಲ್ಲಿ ನರ್ತಿಸುತ್ತಿದ್ದರು. ಇಲ್ಲಿ ಯೋಗಿಣಿಯರೆಂದರೆ ಆಕರ್ಷಣೆ ಹೊಂದಿದ ನರ್ತನಾ ಸ್ತ್ರೀಯರು ಎಂದರ್ಥ. ಇಂತಹ ಅಪೂರ್ವ ಸುಂದರಿಯರು ಅರಮನೆಯಲ್ಲಿದ್ದರೆಂದು ಕವಿ ಹೇಳುತ್ತಾನೆ. ಕವಿ ಯೋಗಿಣಿಯರ ಕುರಿತು ಮುಂದುವರೆದು

"ಅಷ್ಟವಿಧಾರ್ಚನೆಯಿಂ ವಿಕ್ರಮ ಚೌ
ಷಷ್ಠಿಯೋಗಿಣಿಯರೋಲೈಪಳ
ತುಷ್ಟಿಬಡಿಸಿ ನುಡಿದನು ಎನ್ನ ಮಾನಸ
ದಿಷ್ಟವ ಸಲಿಸೆಂದಗಜೆಗೆ"(೧೦/೫೯)

ವಿಕ್ರಮ ಕುಮಾರನು ಎಂಟು ತೆರನಾದ ಪೂಜೆ ಪುನಸ್ಕಾರಗಳಿಂದ ಅರವತ್ನಾಲ್ಕು ಯೋಗಿಣಿಯರನ್ನು ಸಂತೃಪ್ತಿಗೊಳಿಸಿ ಒಲಿಸಿಕೊಂಡನು ಎಂಬ ಕವಿಯ ಉಕ್ತಿಯನ್ನು ಗಮನಿಸಿದಾಗ ಅರವತ್ನಾಲ್ಕು ಯೋಗಿಣಿಯರು ದೇವತೆಗಳ ಸಾಲಿಗೆ ಸೇರಿದವರು ಎಂಬರ್ಥ ಬರುತ್ತದೆ.

ಕವಿ ದೇಪರಾಜ ಯೋಗಿಣಿಯರನ್ನು ಅತ್ಯಂತ ಸುಂದರಿಯರು ದೇವತೆಗಳಿಗೆ ಸಮಾನರು ಎಂಬರ್ಥದಲ್ಲಿ ಹೇಳಿದ್ದಾನೆ. ಅಂದರೆ ಕವಿ ಬದುಕಿದ್ದ ಕಾಲದಲ್ಲಿ ದೇವತೆಗಳನ್ನು ಮೀರಿಸುವ ಏಕಾಗ್ರತೆ ಹೊಂದಿದವರು ಮತ್ತು ತುಂಬಾ ಸುಂದರಿಯರು ಸಾಮಾಜಿಕ ವ್ಯವಸ್ಥೆಯಲ್ಲಿದ್ದರೆಂದು ತಿಳಿದುಬರುತ್ತದೆ.

ಒಟ್ಟಾರೆಯಾಗಿ ಕವಿಯು ತನ್ನ ಕಾಲದ ಧರ್ಮ ಹಾಗೂ ದೈವಗಳನ್ನು ಪ್ರಧಾನವಾಗಿ ಸಮನ್ವಯಗೊಳಿಸಿದ್ದಾನೆ. ಏಕೆಂದರೆ ಶಿವ ತನ್ನ ಭಕ್ತರ ಅಪೇಕ್ಷೆಗಳನ್ನು ಈಡೇರಿಸುವ ದೈವವಾಗಿ ಕಂಡುಬರುತ್ತಾನೆ. ಪ್ರಮುಖವಾಗಿ ಮಹಾಕಾಳಿಯಂತಹ ಶಕ್ತಿ ದೇವತೆಯನ್ನು ಒಲಿಸಿಕೊಳ್ಳಲು ಭಕ್ತರು ತಮ್ಮನ್ನು ಉಗ್ರ ಪರೀಕ್ಷೆಗಳಿಗೆ ಒಡ್ಡಿಕೊಂಡು, ಕೆಲವೊಮ್ಮೆ ಬಲಿಯನ್ನು ಕೊಟ್ಟು ಇಷ್ಟಾರ್ಥಗಳನ್ನು ಪಡೆಯುತ್ತಿದ್ದರು. ಇಂತಹ ಸಂದರ್ಭಗಳಲ್ಲಿ ಇವರುಗಳಿಗೆ ಮುನಿ ಇಲ್ಲವೆ ತಪಸ್ವಿಗಳು ಮಾರ್ಗದರ್ಶನ ಮಾಡುತ್ತಿದ್ದರು. ಹಾಗೆಯೇ ಕೆಲವೊಮ್ಮೆ ಶಾಪಕೊಟ್ಟು ಎಚ್ಚರಿಸುತ್ತಿದ್ದರು. ಹಾಗಾಗಿ ತಪಸ್ವಿಗಳು ಧಾರ್ಮಿಕ ನಾಯಕತ್ವದ ಶ್ರೇಷ್ಠ ಮಾದರಿಗಳಾಗಿದ್ದರು. ಅಂದು ಕಾಪಾಲಿಕರು ವಾಮಾಚಾರದಿಂದ ಕೂಡಿದ್ದು ಭೈರವನ ಆರಾಧಕರಾಗಿದ್ದರೆಂದು ಕಂಡುಬರುತ್ತದೆ. ಅಲ್ಲದೆ ಅರವತ್ನಾಲ್ಕು ಯೋಗಿಣಿಯರು ಇದ್ದರೆಂದು ಗ್ರಹಿಸಬಹುದು. ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಅಂದು ಶೈವ ಧರ್ಮ ಪ್ರಸಾರದಲ್ಲಿದ್ದು ಜನರ ಜೀವನದಲ್ಲಿ ಹಾಸುಹೊಕ್ಕಾಗಿತ್ತೆಂದು ಸ್ಪಷ್ಟವಾಗುತ್ತದೆ. ದೈವಗಳ ಆರಾಧನೆಯಿಂದ ಜನ ತಮಗೊದಗಿದ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವುದೂ ಅಲ್ಲದೇ ನಿಷ್ಠೆ, ಶ್ರದ್ಧೆ, ಏಕಾಗ್ರತೆ, ಅಚಲಭಾವಗಳು ಪ್ರಾಪ್ತವಾಗಿ ಎಂತಹ ಕಷ್ಟಗಳು ಎದುರಾದರೂ ಸಾಧಿಸಿ ಗೆಲ್ಲಬಹುದು ಎಂಬ ಆತ್ಮವಿಶ್ವಾಸವನ್ನು ತಂದುಕೊಂಡು ಸುಮಧುರ ಜೀವನ ಕಂಡು ಕೊಳ್ಳುತ್ತಿದ್ದರೆಂಬುದನ್ನು ಗಮನಿಸಬಹುದು.

## ೭.೩. ಆಡಳಿತ

ಮಾನವ ಸಂಘಜೀವಿ, ಅನಾಗರಿಕನಾಗಿದ್ದಾಗ ಅವನು ಎಲ್ಲ ಪ್ರಾಣಿಗಳಂತೆ ಪ್ರಕೃತಿ ಸಹಜವಾಗಿ ಬಾಳುತ್ತಿದ್ದ. ಅವನಲ್ಲಿ ಪ್ರಜ್ಞೆ ಮೂಡುತ್ತಾ ಬಂದಂತೆ ಕಾಡು ಪ್ರಾಣಿಗಳಿಗಿಂತ ಭಿನ್ನ ಬದುಕನ್ನು ಕಂಡುಕೊಳ್ಳುತ್ತ ಬಂದ. ತನ್ನನ್ನು ತಾನು ರಕ್ಷಿಸಿಕೊಳ್ಳುತ್ತ ಮುನ್ನೆಡೆದ. ತಾನು ಬದುಕಲು ವ್ಯವಸ್ಥೆ ಇರುವ ಕಡೆ ನೆಲೆನಿಂತ. ಮಳೆ, ಗಾಳಿ, ಬಿಸಿಲು ಮುಂತಾದ ಪ್ರಕೃತಿ ವಿಕೋಪಗಳ ರಕ್ಷಣೆ ಪಡೆಯಲು ಗುಡಿಸಲು ಕಟ್ಟಿಕೊಂಡ ಕಾಡು ಪ್ರಾಣಿಗಳಿಂದ ರಕ್ಷಿಸಿಕೊಳ್ಳಲು ತನ್ನದೇ ಆದ ಗುಂಪು ನಿರ್ಮಿಸಿಕೊಂಡ. ಮುಂದೆ ಇದೇ ಹಟ್ಟಿ, ಕೇರಿ, ಊರಾಯಿತು. ಹೀಗೆ ಸಮೂಹ ಸಹಬಾಳ್ವೆಯಲ್ಲಿ ಬದುಕಲು ಆರಂಭಿಸಿದಾಗ ತನ್ನ ಗುಂಪಿನಲ್ಲಿದ್ದ ಎಲ್ಲರ ರಕ್ಷಿಸುವ ಹೊಣೆ ಹೊತ್ತು ಆ ಗುಂಪಿಗೆ ನಾಯಕನಾದ ಹೀಗೆ ಹತ್ತು ಹಲವು ಗುಂಪುಗಳು ಒಂದೆಡೆ ನೆಲೆ ನಿಂತಾಗ ಹಳ್ಳಿ, ಪುರಗಳು ನಿರ್ಮಾಣಗೊಂಡವು. ಹೀಗೆ ಹತ್ತು ಹಲವು ಗುಂಪುಗಳಲ್ಲಿ ನಾಯಕತ್ವಕ್ಕಾಗಿ ಕಿತ್ತಾಟ ನಡೆದು ಮನುಷ್ಯ ಮನುಷ್ಯನ ನಡುವೆ ದ್ವೇಷ-ಮತ್ಸರ ಉಂಟಾಗಿ ವೈರತ್ವ ಪ್ರಾರಂಭವಾಯಿತು. ಮನುಷ್ಯ-ಮನುಷ್ಯನನ್ನು ನಂಬದ ಸ್ಥಿತಿ ತಲುಪಿ ತನ್ನನ್ನು ಇತರ ಮನುಷ್ಯರಿಂದ ರಕ್ಷಿಸಿಕೊಳ್ಳಲು ಹಂಬಲಿಸುವಂತಾಗಿ ತನ್ನ ನೆಲೆಗೆ ಗಡಿರೇಖೆ ಹಾಕಿಕೊಂಡ, ಆ ಗಡಿರೇಖೆಯ ರಕ್ಷಣಾ ಜವಾಬ್ದಾರಿಯೇ ಸೈನ್ಯ ಕಟ್ಟಲು ಸಾಧ್ಯವಾಯಿತು. ಹೀಗೆ ಒಂದು ಆಡಳಿತ ವ್ಯವಸ್ಥೆ ಪ್ರಾರಂಭವಾಗಿ ಪಾಳೆ ಪಟ್ಟುಗಳು, ರಾಜ್ಯಗಳು, ಸಾಮ್ರಾಜ್ಯಗಳು ಹುಟ್ಟಿಕೊಂಡವು. ಇವುಗಳಿಗೆ ಒಂದು ಆಡಳಿತ ವ್ಯವಸ್ಥೆ ಅಸ್ತಿತ್ವಕ್ಕೆ ಬಂದಿತು.

ಆಡಳಿತ ವ್ಯವಸ್ಥೆಯಲ್ಲಿ ರಾಜ, ಮಂತ್ರಿ, ಮಾಂಡಲಿಕರು, ಸೇನಾಪತಿಗಳು, ಪ್ರಾಂತಾಧಿಕಾರಿಗಳು, ಯೋಧರು, ಕಾವಲುಗಾರರು, (ತಳವಾರರು), ಆಯುಧಗಳು, ಕೋಟೆಗಳು ಮುಂತಾದವುಗಳು ನಿರ್ಮಾಣಗೊಂಡು ಬದುಕು ನೀತಿ ನಿಯಮಗಳ ಅಡಿಯಲ್ಲಿ ಸಾಗಿತು. ನೀತಿ ನಿಯಮಗಳ ಅಡಿಯಲ್ಲಿ ಹಳ್ಳಿ, ಪಟ್ಟಣಗಳ ಬಂಧಿಯಾಗುವಂತಾಯಿತೋ ಅಂದೇ ಆಡಳಿತ ವ್ಯವಸ್ಥೆ ಜಾರಿಗೆ ಬಂದಿತು. ಆಡಳಿತ ವ್ಯವಸ್ಥೆಯಲ್ಲಿ ನೀತಿ, ನಿಯಮ, ಆಜ್ಞೆಗಳನ್ನು ರೂಪಿಸುವವರು ರಾಜರು. ಇವರ ಗುರಿ ಆದರ್ಶಗಳೇ ಆಡಳಿತದಲ್ಲಿ ಪ್ರಮುಖವಾಗಿ ಸ್ಥಾನ ಪಡೆಯುತ್ತವೆ. ಅರಸರ ಆಜ್ಞೆಗಳನ್ನು ರೂಪಿಸುವರು ಮತ್ತು ಅನುಷ್ಠಾನಕ್ಕೆ ತರುವವರು ಮಂತ್ರಿಗಳು. ನಾಡ ರಕ್ಷಣೆಯನ್ನು ಸೈನಿಕರು, ಊರಿನ ರಕ್ಷಣೆಯನ್ನು ಕಾವಲುಗಾರರು, ಇತರ ಅಧಿಕಾರಿಗಳು ರಾಜನಿಗೆ ಆಡಳಿತದಲ್ಲಿ ಸಹಾಯಕರಾಗಿ ನಿಲ್ಲುತ್ತಾರೆ.

ಸೊಬಗಿನ ಸೋನೆ ಕಾವ್ಯದಲ್ಲಿ ವ್ಯಕ್ತವಾಗಿರುವ ಆಡಳಿತಕ್ಕೆ ಸಂಬಂಧಿಸಿದ ಅರಸತ್ವ, ರಾಜಕುಮಾರರ ಶಿಕ್ಷಣ, ತಳವಾರರು, ಆಯುಧಗಳು ಕುರಿತು ಚರ್ಚಿಸಲಾಗಿದೆ.

### ೭.೩.೧. ಅರಸ, ಅರಸತ್ವ, ರಾಜಕುಮಾರರ ಶಿಕ್ಷಣ

ರಾಜ್ಯದ ಆಡಳಿತದ ಮುಖ್ಯ ವ್ಯಕ್ತಿ ಅರಸ. ಈತನಿಗೆ ಅಧಿಕಾರ ವಂಶಪಾರಂಪರ್ಯವಾಗಿ ಲಭಿಸುತ್ತಿತ್ತು. ಅರಸನ ಬುದ್ಧಿ,ವಿದ್ಯೆ, ಸಂತಾನ, ಶಕ್ತಿಯನ್ನು ಆಧರಿಸಿ ಸಾಮ್ರಾಜ್ಯವಿರುತ್ತಿತ್ತು. ರಾಜನು ರಾಜಕೀಯ, ಆರ್ಥಿಕ, ಸಾಮಾಜಿಕ ಕ್ಷೇತ್ರಗಳೆಲ್ಲವನ್ನು ಪ್ರತಿನಿಧಿಸುವುದರೊಂದಿಗೆ ಎಲ್ಲ

ಅರವತ್ನಾಲ್ಕು ಕಲೆಗಳನ್ನು ಬಲ್ಲವನಾಗಿರಬೇಕಾಗಿತ್ತು. ಅರಸನಿಗೆ ರಾಣಿಯರು ಎಲ್ಲ ರೀತಿಯಲ್ಲಿ ಪ್ರೇರಕವಾಗಿರುತ್ತಿದ್ದರು. ಈ ಕುರಿತು ಜಯಶೇಖರನ ರಾಣಿ ಸುರಭಾವತಿಯು ಪುತ್ರಸಂತಾನ ಪಡೆಯಲು "ಸುತರಾಡದಂಗಳ ಭುವನೇಶ ಕಂಗೆಸವುದೆ ಪೇಳ"(೨/೨೭) ಎಂದು ಪ್ರಶ್ನಿಸುತ್ತಾಳೆ, ಇದಕ್ಕೆ ಅರಸ ಹೀಗೆ ಪ್ರತಿಕ್ರಿಯಿಸುತ್ತಾನೆ.

"ಚಿಂತಿಸದಿರು ಪ್ರಿಯೆ ತಪದಿಂದ ಶಶಿಕಲೆ
ಯಾಂತನನೊಲಿಸಿ ಕಣ್ಗೆನಿದೀವ
ಸಂತಾನವ ಪಡೆವೆನು ನಿನ್ನ ಮನದಳ
ಲಂತವಿಸುವೆನೆಂದರಸನೆದ್ದ"(೨/೩೨)

ಶಿವನ ಕೃಪೆಯಿಂದ ವಿಕ್ರಮನಂತ ಪುತ್ರನನ್ನು ಪಡೆಯುವೆನು ಎನ್ನುತ್ತಾನೆ.

ಸೌಂದರರಾಜ ರೋಷಭಾಸ್ಕರ ಮುನಿಯ ಆಶ್ರಮದ ಪ್ರಕೃತಿ ಸೌಂದರ್ಯವನ್ನು ಹಾಳು ಮಾಡುತ್ತಾನೆ. ಆಗ ಮುನಿಯಿಂದ ಶಾಪಕ್ಕೆ ಒಳಗಾದಾಗ ಸಾಮ್ರಾಜ್ಯದಲ್ಲಿ ಕ್ಷೋಭೆ ಉಂಟಾಗುತ್ತದೆ. ಅರಸ ಸತ್ತು ಈತನ ಮಗ ಮತ್ತು ಕಂಜರೆ ಮಗಳನ್ನು ರಾಕ್ಷಸಿ ಅಪಹರಿಸುತ್ತದೆ. ಇದರಿಂದ ಅರಸರು ಮುನಿ ಸಂತರ ಪ್ರೋತ್ಸಾಹವಿಲ್ಲದೆ ಸಾಮ್ರಾಜ್ಯ ಆಳುವುದು ಸಾಧ್ಯವಿಲ್ಲ ಎಂಬ ಸತ್ಯವನ್ನು ನಾವಿಲ್ಲಿ ಕಂಡುಕೊಳ್ಳಬಹುದಾಗಿದೆ.

ಅರಸ ಕುಹಳ ಮತ್ತು ರಾಣಿ ನಳಿನಿ ಇವರು ಮಹಾಕಾಳಿ ದೇವಿಯ ಕೃಪೆಯಿಂದ ವಸಂತೆ ಎಂಬ ಪುತ್ರಿಯನ್ನು ಪಡೆಯುತ್ತಾರೆ. ನಂತರ ಇವಳಿಗೆ ಸ್ವಯಂವರ ಏರ್ಪಡಿಸಿ ವಿವಾಹ ಮಾಡಲು ಮುಂದಾಗುತ್ತಾರೆ. ಈ ಪದ್ದತಿಯನ್ನು ಮಗಳು ತಿರಸ್ಕರಿಸಿ ಮಹಾಕಾಳಿ ಕೃಪೆಯನ್ನು ಪಡೆದು ವಿವಾಹವಾಗುತ್ತಾಳೆ. ದೈವಬಲದಂತೆ ಸ್ವತಃ ಕಾರ್ಯಗಳು ನೆರವೇರಿಸಿಕೊಳ್ಳುತ್ತಾಳೆ.

ಇಲ್ಲಿ ಜಯಶೇಖರ ರಾಜ ತನ್ನ ರಾಣಿಯ ಆಸೆಯಂತೆ ಸ್ವತಃ ತಪಸ್ಸಿನ ಮೂಲಕ ಕಾರ್ಯಸಿದ್ಧಿ ಮಾಡಿಕೊಳ್ಳುತ್ತಾನೆ. ನಂತರ ಸೌಂದರರಾಜ ತನ್ನ ಅಹಂಕಾರದಿಂದ ಸಾಮ್ರಾಜ್ಯ ನಾಶಪಡಿಸಿಕೊಳ್ಳುತ್ತಾನೆ. ಹಾಗೆಯೇ ವಂಸತೆಯ ವಿವಹಾವೂ ಸಹ ಸ್ವತಃ ಅವಳಿಂದಲೇ ಜರುಗುವುದು. ಇವೆಲ್ಲವುಗಳನ್ನು ಗಮನಿಸಿದರೆ ಅರಸನ ಪಾತ್ರ ಪ್ರಜಾನುರಾಗಿಯಾಗಿ ಸಕಲ ಕೆಲಸ ಕಾರ್ಯಗಳಲ್ಲಿ ಸೂತ್ರಧಾರನೆನಿಸುತ್ತಾನೆ.

**ಅರಸರ ದೌರ್ಬಲ್ಯಗಳ ಕುರಿತು**

"ಅರಸುಗಳತಿ ಮೂರ್ಖರು ಛಲಿಗಳು ಕಾ
ತರರು ಜಡರು ದಯಹೀನರು
ಪರಿಕಿಸರುಚಿತ ವಚನವನುಸುರ್ದು ಬಾ
ಹಿರರಾಗಲಾಗದ"(೨೧/೪೪)

"ಪುಟ್ಟುತ ಸುಖವನಲ್ಲದೆ ಕನಸಿನಲೊಮ್ಮೆ
ನಿಟ್ಟಿಸರಳಲ ಕೇಳ್ದಜಿಯರು
ನೆಟ್ಟನೆ ಪರರ ಮಹಾದುಃಖವವರ್ಗಳ್ತಿ
ವಟ್ಟಿಹುದಿಟ್ಟಡೆ"(೨೧/೪೫)

"ಗರ್ಭದ ಮರ್ಬಿಂದ ದುರ್ಬೋಧೆಯುರ್ಬಿಂದ
ಪರ್ಬಿದ ಸಿರಿಯ ಪೆರ್ಗರದಿಂದ
ಕರ್ಬೊನ್ನ ಕಱುವಿನಂತಿಟ್ಟಸರಾಲಿಸರ್
ನಿರ್ಬಂಧಿಸರೊಮ್ಮೆ ನುಡಿಯರು"(೨೧/೪೭)

"ಹಿತವನುಸುರೆ ಹೇವರಿಪರು ಕುಹಕೋಕ್ತಿ
ಯುತರನೊಲಿದು ಮನ್ನಿಸುವರು
ಕ್ಷಿತಿಪತಿ ಕುಲಜಾತರ ಶೀಲವಿದು"(೨೧/೪೮)

ಕೆಲವು ಅರಸರು ಅತಿ ಮೂರ್ಖರು, ಚಪಲವುಳ್ಳವರು, ಜಡರು, ದಯಾಹೀನರು, ಪರೀಕ್ಷಿಸದವರು, ಇಂಥವರು ಉಪದೇಶದ ಮಾತನ್ನು ಹೇಳುತ್ತ ಪ್ರತ್ಯೇಕವಾಗಿರುತ್ತಾರೆ. ಜನ್ಮತಃ ಸುಖವನ್ನೇ ಅನುಭವಿಸಿದ ಇವರು ಕಷ್ಟವನ್ನು, ದುಃಖವನ್ನು ಕನಸಿನಲ್ಲೂ ಕಂಡಿಲ್ಲ, ಮನಸ್ಸಿನಲ್ಲೂ ಕೇಳಿ ತಿಳಿದವರಲ್ಲ. ಇದ್ದಕ್ಕಿದ್ದ ಹಾಗೆ ಜನರ ದುಃಖವನ್ನು ಪರಿಹರಿಸುತ್ತೇವೆ ಎಂದು ಹೇಳಿದರೆ ನಂಬಲು ಸಾಧ್ಯವೇ, ಇಂತವರು ಕಬ್ಬಿಣದ ಬೊಂಬೆಯಂತೆ ಇದ್ದು ಗರ್ವದ ಮಬ್ಬಿನಿಂದ, ದುರ್ಬೋಧೆಯ ಹುಂಬತನದಿಂದ, ಶ್ರೀಮಂತಿಕೆಯ ಸೊಕ್ಕಿನಿಂದ ಯಾವ ಹಿತವನ್ನು ಮಾಡದೆ ಇರುತ್ತಾರೆ. ಹಿತವನ್ನು ಹೇಳುತ್ತಲೇ ಹೇಯವನ್ನು, ಕುಹಕವನ್ನು ಮಾಡಿ ಮನ್ನಿಸುತ್ತಾರೆ. ಇಂತಹ ಅರಸರು ಜನಸಾಮಾನ್ಯರ ಮೇಲೆ ಎಂತಹ ಪರಿಣಾಮ ಬೀರುತ್ತಾರೆ ಎಂಬುದನ್ನು ಸೂಚಿಸುತ್ತದೆ.

ಈ ಕುರಿತಂತೆ "ರಾಜರೆಂಬುವರು ಅವಿವೇಕಿಗಳು, ಅವರನ್ನು ಓಲೈಸಿ ಬಾಳುವುದು ಕಷ್ಟ ಅವರಲ್ಲಿ ವಂಶ ಮದ, ಅಹಂಕಾರ ಇವೆಲ್ಲವುಗಳಿಗೂ ಮಿಗಿಲಾಗಿ ತೊತ್ತಿನ ಮೊಲೆಯ ಹಾಲನ್ನುಂಡ ಕೀಳ್ಗುಣಗಳು ಮನೆಮಾಡಿಕೊಂಡಿರುತ್ತವೆ. ಅಂತೆಯೇ ಅವರು ಮಾಡುವುದೆಲ್ಲವೂ ಉಚಿತವೆನ್ನಲಾಗದು ಎಂಬುದು ಪಂಪನ ಸ್ಪಷ್ಟ ಅಭಿಪ್ರಾಯವಾಗಿದೆ."[೨೭] ಎಂದು ಶಾಂತಿನಾಥ ದಿಬ್ಬದ ಅಭಿಪ್ರಾಯಪಟ್ಟಿದ್ದಾರೆ.

ರಾಜ ಒಬ್ಬ ಆದರ್ಶ ವ್ಯಕ್ತಿ. ಅವನು ನಡೆನುಡಿಗಳೆರಡಲ್ಲಿಯೂ ಶುದ್ಧನಾಗಿರಬೇಕು. ಯಥಾರಾಜ ತಥಾಪ್ರಜೆ ಎಂಬಂತೆ ಪ್ರಜೆಗಳು ಇವನನ್ನ ಎಲ್ಲ ರೀತಿಯಿಂದಲು ಅನುಸರಿಸುವರು. ಆದರೆ ಕೆಲವೊಂದು ರಾಜರು ಅವಗುಣಗಳನ್ನು ಹೊಂದಿದ್ದ ಬಗ್ಗೆ ನಾಗರಿಕ ಪಕ್ಷಿಯ ರೂಪಕದ ಮೂಲಕ ಹೇಳಿದ್ದಾನೆ.

### ರಾಜಕುಮಾರರ ಶಿಕ್ಷಣ

ಪ್ರಾಚೀನ ಕಾಲದಲ್ಲಿ ವಿದ್ಯಾಭ್ಯಾಸ ಕೇವಲ ಬ್ರಾಹ್ಮಣ ಮತ್ತು ಕ್ಷತ್ರಿಯರಿಗೆ ಮಾತ್ರ ಸೀಮಿತವಾಗಿತ್ತು. ಬ್ರಾಹ್ಮಣರ ಮಕ್ಕಳಿಗೆ ವೇದಾಧ್ಯಯನ, ವೇದ, ಆಗಮ, ಉಪನಿಷತ್ತುಗಳ ಅಧ್ಯಯನ ಮಾಡಿದರೆ ಕ್ಷತ್ರಿಯರ ಮಕ್ಕಳಿಗೆ ಬಿಲ್ವಿದ್ಯೆ, ಧನುರ್ವಿದ್ಯೆ, ಕತ್ತಿವರಸೆ, ಯುದ್ಧತರಬೇತಿ ಮೊದಲಾದ ವಿದ್ಯೆಗಳನ್ನು ಕಲಿಸುತ್ತಿದ್ದರು. ರಾಜಕುಮಾರರ ಬಾಲ್ಯ ವಿದ್ಯಾಭ್ಯಾಸವನ್ನು ಕುರಿತು ಹೇಳಬೇಕಾದ ಸಂದರ್ಭಗಳೆಲ್ಲೆಲ್ಲ ಧನುರ್ವಿದ್ಯಾಭ್ಯಾಸದ, ವಿಚಾರವನ್ನು ಕವಿಗಳು ತಮ್ಮ ಕಾವ್ಯಗಳಲ್ಲಿ ಪ್ರಸ್ತಾಪಿಸಿದ್ದಾರೆ. ಸೊಬಗಿನ ಸೋನೆಯಲ್ಲಿ ಗುರು ಮತ್ತು ವಿದ್ಯೆ ನೀಡುವ ಸಂಸ್ಥೆ ಬಗ್ಗೆ ವಿವರ ಬರುವುದಿಲ್ಲ. ಆದರೆ

ರಾಜಕುಮಾರರು ಮಾತ್ರ ವಿದ್ಯೆಯನ್ನು ಕಲಿಯುತ್ತಿರುವ ಬಗೆಗೆ ದೊರೆಯುತ್ತದೆ. ವಿಕ್ರಮ ಕುಮಾರ ಬಾಲ್ಯದಲ್ಲಿ ಕಲಿತ ವಿದ್ಯೆ ಗಮನಿಸುವುದಾದರೆ

"ಗಜಾಶ್ವ ವರೂಥ ಶಸ್ತ್ರಾಸ್ತ್ರಂ
ಗಳು ಮೊದಲಾದ ವಿದ್ಯೆಗಳನು"(೪/೩೫) ಅಭ್ಯಾಸ ಮಾಡುತ್ತಾನೆ.

"ಪವಣಱೆವಧಟು ಚದುರು ದಯ ದಾಕ್ಷಣ್ಯ
ವಿವರ ಜಾಣುವೆ ಜವ್ವನ ವಿದ್ಯೆ
ಶಿವಭಕ್ತಿ ಶಾಂತಿ ಮಮತೆ ಜಸ ವಿಕ್ರಮ
ವವನೊಳೊಬ್ಬುಳಿಗೊಂಡು ಮೆಱೆದವು"(೪/೩೭)

ಯುದ್ಧದಲ್ಲಿ ವಿವಿಧ ಅಸ್ತ್ರಗಳ ಪ್ರಯೋಗ ಮತ್ತು ಆನೆ, ಕುದುರೆಗಳ ಸವಾರಿಯಂಥ ವಿದ್ಯೆ ಸಾಧನೆಗಳನ್ನು ಕಲಿಸುವ ಪದ್ದತಿ ಇದ್ದುದಾಗಿ ತಿಳಿದುಬರುತ್ತದೆ. ವಿದ್ಯೆ ಕಲಿತ ರಾಜಕುಮಾರರು ಧೈರ್ಯ, ಚತುರತೆ, ದಯೆ, ದಾಕ್ಷಿಣ್ಯ, ಜಾಣ್ಮೆ, ಶಿವಭಕ್ತಿ, ಶಾಂತಿ, ಮಮತೆ, ಯಶಸ್ಸು ಮುಂತಾದ ಗುಣಗಳನ್ನು ಹೊಂದಿರುತ್ತಿದ್ದರು.

"ಕರಿ ತುರಗವ ತಿದ್ದುವ ರಾಜಕುವರರ
ಸರಗೊಳಿಸುವ ನೃತ್ಯ ಮೊದಲಾದ
ಭರತ ಕಲೆಯನಱುಪುವರೋದುವರ
ಬ್ಬರವಿಲ್ಲದರ ಕೇರಿಗಳಿಲ್ಲ"(೧/೫೦)

ಸಸಿವೊಳಲಿನಲ್ಲಿ ರಾಜಕುಮಾರರು ಆನೆ, ಕುದುರೆಗಳನ್ನು ಪಳಗಿಸುವ ವಿದ್ಯೆಯೊಂದಿಗೆ ಭರತ ಕಲೆಯನ್ನು ತಿಳಿದಿರುತ್ತಿದ್ದರು. ಓದುತ್ತಿದ್ದರು. ಜೊತೆಗೆ ಅವರು

"ಅಱುವತ್ತು ನಾಲ್ಕು ವಿದ್ಯೆಯೊಳೊಂದನಱೆಯದ
ಬಱೆಬರಿಲ್ಲ ಸಸಿವೊಳಲೊಳು"(೧/೫೩)

ಅರವತ್ತುನಾಲ್ಕು ವಿದ್ಯೆಗಳಲ್ಲೂ ಪಾರಂಗತರಾಗಿ ಗುಣವಂತರು, ಧೈರ್ಯಶಾಲಿಗಳು, ಸಂಪತ್ತು ಉಳ್ಳವರಾಗಿ ಪರರ ಸುಖವನ್ನು ಬಯಸುವಂತ ಹೃದಯವಂತರಾಗಿರುತ್ತಿದ್ದರು. ಅಲ್ಲದೆ ಅವರು ಸತ್ಯಶೀಲರಾಗಿ ವೀರರಂತೆ ಮೆರೆಯುತ್ತಿದ್ದರು.

"ಎಲ್ಲರು ಶಿವಭಕ್ತರು ನನ್ನಿಯುಳ್ಳರು
ಬಲ್ಲಜಾಣರು ಭೋಗಿ ಸುಖಿಗಳು
ಗೆಲ್ಲಗ್ಯೆಯರು ವೀರರು ಜಸವೆಣ್ಣೊಲ
ವಿಲ್ಲದವರಿಲ್ಲವಾಪೊಳಲೊಳು"(೧/೫೪)

ಅಂದು ವಿದ್ಯೆ ಕಲಿತ ವೀರರು ಸುಸಂಸ್ಕೃತರಾಗಿ ಸಮಾಜದಲ್ಲಿ ಮಾದರಿಯಾದ ಬದುಕನ್ನು ನಡೆಸುತ್ತಿದ್ದರು. ಇಂತವರು "ಅಱೆಯದೆಯುಳಿದಿರ್ದ ಕಲೆಯಿಲ್ಲ"(೧/೬೨) ಎಂದು ರಾಜಕುಮಾರರು ಕಲಾ ಪಾರಂಗತರಾಗಿದ್ದರು. ವಿಕ್ರಮ ಕುಮಾರನು

"ಪವಣಜೀವಧಟು ಚದುರುದಯ ದಾಕ್ಷಣ್ಯ
ವಿವರ ಜಾಣುವೆ ಜವ್ವನ ವಿದ್ಯೆ
ಶಿವಭಕ್ತಿ ಶಾಂತಿ ಮಮತೆ ಜಸವಿಕ್ರಮ
ವವನೊಳೊಬ್ಬುಳಿಗೊಂಡು ಮೆಱದವು"(೪/೩೭)

ವಿಕ್ರಮನು ವಿದ್ಯೆಯನ್ನು ಕಲಿತುಕೊಂಡು ಧೈರ್ಯ, ಚತುರತೆ, ದಯೆ, ದಾಕ್ಷಿಣ್ಯ, ಜಾಣ್ಮೆ, ಶಿವಭಕ್ತಿ, ಶಾಂತಿ, ಮಮತೆ, ಯಶಸ್ಸು ಮುಂತಾದ ಗುಣಗಳನ್ನು ಹೊಂದಿ ಪ್ರಸಿದ್ಧಿಗೆ ಬಂದಿದ್ದನು. ಇಂತಹ ರಾಜಕುಮಾರನನ್ನು ನೋಡಲು ಬಂದ "ಸಿಂಧು, ಮಾಳವ ದೇಶದ ರಾಜಕುಮಾರರಾದ ಮಧುರ, ಮಾಳವರು ವಿದ್ಯೆಯನ್ನು ಪ್ರೀತಿಯಿಂದ ಕಲಿಯುತ್ತಾರೆ."(೪/೩೮)

"...ಧನುರ್ವಿ
ದ್ಯಾದಿ ವಿದ್ಯವನಜೆದರು ಕೂಡೆ
ಭೇದವೇಕವರಿರ್ವರು ವಿಕ್ರಮಗೆ ಸ
ಹೋದರರಾದರು..."(೪/೩೯)

ವಿದ್ಯೆಯನ್ನು ಕಲಿತ ರಾಜಕುಮಾರರು ಸಹೋದರರಂತೆ ಪರಿವರ್ತನೆ ಆಗುತ್ತಾರೆ. ಇದರಿಂದ ವಿದ್ಯೆವುಳ್ಳವರು ಬದುಕಿನ ವಿಕಾಸದತ್ತ ಸಾಗುತ್ತಾರೆ. ಹಾಗೂ ಇತರರಿಗೂ ಮಾದರಿಯಾಗಿರುತ್ತಾರೆ.

"ಚತುರ ಕಳಾಕುಶಲರು ವೀರರು ಬಲ
ಯುತರು ಮನದ ಪವಣಜೀವರು
ಮತಿವಂತರು ಸರಸಿಗಳು ವಿಕ್ರಮಗತಿ
ಹಿತವರು..."(೪/೪೦)

ಮಧುರಮಾಳವರು ವೀರರಾಗುತ್ತಿರುವುದರ ಜೊತೆಗೆ ನೀತಿವಂತರಾಗಿ ಪ್ರಸಿದ್ಧಿಗೆ ಬರುತ್ತಾರೆ. ಅಂದಿನ ಜೀವನ ಪ್ರಧಾನವಾಗಿ ಧರ್ಮ ಹಾಗೂ ಶೌರ್ಯಸಮ್ಮತವಾಗಿರುತ್ತಿತ್ತು. ಅಂದು ವಿದ್ಯೆಯನ್ನು ಧರ್ಮ ಮತ್ತು ಯುದ್ಧ ತರಬೇತಿಗೆ ಸಂಬಂಧಿಸಿ ನೀಡಲಾಗುತ್ತಿತ್ತು.

"ಶ್ರುತಿ ನೀತಿ ತರ್ಕಭರತ ವೈದ್ಯ ಜ್ಯೋತಿಷ್ಯ
ಯಿತಿಹಾಸ ಚಿತ್ರ ಚಮತ್ಕಾರ
ರತಿಶಾಸ್ತ್ರ ಮಂತ್ರ ಮೋಹನವಾದ ವಿದ್ಯಾ
ಪ್ರತತಿಯೊಳಿನಿಸಿಸಜೆವೆನು"(೧೬/೧೩)

ಯುವಕರನ್ನು ಆಕರ್ಷಣೆ ಉಂಟುಮಾಡುವ ವಿದ್ಯೆಗಳಾದ ಶ್ರುತಿ. ನೀತಿ, ತರ್ಕ, ಭರತ, ವೈದ್ಯ, ಜ್ಯೋತಿಷ್ಯ, ಇತಿಹಾಸ, ಚಿತ್ರಚಮತ್ಕಾರ, ರತಿಶಾಸ್ತ್ರ, ಮಂತ್ರ ಇವುಗಳನ್ನು ತಿಳಿದು ಪ್ರಯೋಗಿಸುವುದರಲ್ಲಿ ಪರಿಣಿತವಾಗಿತ್ತು. ಅಷ್ಟೇ ಅಲ್ಲದೆ ಕಲೆಯಲ್ಲೂ ಪರಿಣಿತಿಯನ್ನು ಹೊಂದಿದ್ದರೆಂದು ಈ ಪದ್ಯಗಳಿಂದ ಗ್ರಹಿಸಬಹುದು.

"ಸವಿವೆನು ಪಾಡುಗಬ್ಬವ ಮಾಳ್ಪೆ ಸಂಗೀ
ತವನಜೆವೆನು ಮುಳಿದೋಪರ
ಸವಿವಾತನಿತ್ತೊಂದಿಸಬಲ್ಲೆ ಪಲವೇಕೆ
ಚವುಷಷ್ಟಿ ಕಳೆಯಜೆವಿನಿಸುಂಟು"(೧೬/೧೪)

ಹಾಡುಗಬ್ಬವನ್ನು ಆಲಿಸುವ, ಸಂಗೀತವನ್ನು ಮಾಡುವ, ಪ್ರಿಯಕರ ಪ್ರಿಯತಮೆಯರ ಸವಿಮಾತು, ವಿರಸದ ಮಾತುಗಳನ್ನು ತಿಳಿದು ಸರಿಪಡಿಸುವ, ಅರವತ್ನಾಲ್ಕು ಕಲೆಗಳನ್ನು ಕರಗತ ಮಾಡಿಕೊಂಡಿದ್ದೇನೆ ಎಂದು ಹೇಳುತ್ತ ಬೇಡನ ಬಲೆಗೆ ಸಿಕ್ಕು ಅಲ್ಲಿ 'ಕುಂಟಣೆ' ವಿದ್ಯೆಯನ್ನು ಕಲಿತಿರುವೆ ಎನ್ನುತ್ತದೆ. ಅಂದರೆ, ಕುತಂತ್ರ ಮೋಸ ಮಾಡುವುದನ್ನು ಕಲಿತಿರುವುದು ಎಂದು ವಿಕ್ರಮ ರಾಜನಿಗೆ ತಿಳಿಸಿತು. ಅದು "ನಮ್ಮ ಕುಲದ ಪರಂಪರಾಗತ ವಿದ್ಯೆಯನ್ನು ಯಾರು ಕದಿಯಲು ಸಾಧ್ಯವಿಲ್ಲ ನಮ್ಮ ಹಣೆಬರಹದಲ್ಲಿ ಬರೆದ ಅಕ್ಷರಗಳಂತಿವೆ"(೨೦/೪೯) ಎನ್ನುತ್ತದೆ. ಹಾಗಾಗಿ ಪತ್ರಿಣಿಯು ತೊಡುವ ರತ್ನದ ಪದಕವನ್ನು ತಂದು ಬೇಡನನ್ನು ವಂಚಿಸಿ ಕೊಲ್ಲುವ ಕುತಂತ್ರದ ವಿದ್ಯೆಯನ್ನು ಪ್ರಯೋಗಿಸಿದ್ದು ಕಂಡುಬರುತ್ತದೆ. ಇದರಿಂದ ದುಷ್ಟರನ್ನು ಮಣಿಸಲು ಕುತಂತ್ರದಿಂದ ಮಾತ್ರ ಸಾಧ್ಯ ಎಂಬುದನ್ನು ಕವಿ ತಿಳಿಸಿರಬೇಕೆನಿಸುತ್ತದೆ.

ರಾಜಕುಮಾರನಿಗೆ ನೀಡುವ ವಿದ್ಯೆ ಕೌಶಲ್ಯಧಾರಿತವಾಗಿದ್ದು, ಚಾರಿತ್ರ್ಯ ಸಂವರ್ಧನೆ, ಜ್ಞಾನವಿಸ್ತಾರ, ವ್ಯಕ್ತಿತ್ವ ವಿಕಾಸ, ಶೀಲಪ್ರತಿಪಾದನೆ, ಧರ್ಮ ರಕ್ಷಣೆ ಮಾಡುವ ಮುಖ್ಯ ಉದ್ದೇಶವಾಗಿತ್ತು.

**೭.೩.೨. ತಳವಾರರು**

ಅರಸರು ಸಾಮ್ರಾಜ್ಯದಲ್ಲಿ ತಮ್ಮ ಆಜ್ಞೆಗಳನ್ನು ಪಾಲನೆ ಮಾಡುವ ಇಲ್ಲವೆ ಕಾವಲು ಕಾಯುವ ಕೆಲಸವನ್ನು ತಳವಾರನಿಗೆ ವಹಿಸುತ್ತಿದ್ದರು. ಅಂದು ಕಳ್ಳತನ, ಅಪರಾಧ, ಶಿಕ್ಷೆ ಮುಂತಾದ ಸಂದರ್ಭದಲ್ಲಿ ಪ್ರಮಾಣಿಕತೆ ಮತ್ತು ನಿಷ್ಠೆಯಿಂದ ಕಾರ್ಯನಿರ್ವಹಿಸಿದಾಗ ರಾಜನಿಂದ ಪುರಸ್ಕಾರಕ್ಕೆ ಒಳಗಾಗುತ್ತಿದ್ದರು. ಅಪರಾಧಿಗಳನ್ನು ಪತ್ತೆ ಹಚ್ಚದಿದ್ದಾಗ ಇವರೇ ಕಠಿಣವಾದ ಶಿಕ್ಷೆಗೆ ಒಳಗಾಗುತ್ತಿದ್ದರು. ಪ್ರಾಚೀನ ಕಾಲದಿಂದಲೂ ತಮ್ಮ ಕಾರ್ಯವನ್ನು ನಿರ್ವಹಿಸುತ್ತ ಬಂದ ತಳವಾರರು ಇದನ್ನೇ ತಮ್ಮ ವೃತ್ತಿಯಾಗಿ ಮುಂದುವರಿಸಿಕೊಂಡು ಬಂದಿರುತ್ತಾರೆ. ಆಡಳಿತದ ತಳಹಂತದಲ್ಲಿ ಕಾನೂನು ರಕ್ಷಿಸುವ ಜವಾಬ್ದಾರಿ ತಳವಾರರದು. ಅರಮನೆಯಲ್ಲಿ ಕಳ್ಳತನವಾದಾಗ ತಳವಾರನನ್ನೇ ಹೊಣೆಗಾರನನ್ನಾಗಿ ಮಾಡಿದ ಅರಸ ಆ ತಳವಾರರ ಮೂಲಕ ಕಳೆದುಹೋದ ಬಂಗಾರದ ಪದಕವನ್ನು ಮರಳಿ ಪಡೆಯುತ್ತಾನೆ. ಈ ತೆರನಾದ ಪ್ರಸಂಗ ಸೊಬಗಿನ ಸೋನೆಯಲ್ಲಿ ಚಿತ್ರಿತವಾಗಿದೆ.

> "ಪೊಱಮಡದಿರಿ, ಸುಳಿಯದಿರಡಯಿಡದಿರಿ
> ಪುರದೆಣ್ಣೆಸೆಯ ಬೀದಿಯೊಳೆಂದು
> ತಱವಳರಾ ರನ್ನವೊಳಲ್ಗೇರಿಗೇರಿಯೊ
> ಳೊಱಲಿಸಿದರು ಡಂಗುರವನು"(೨೦/೩೧)

ರಾಜಕುಮಾರಿ ಪತ್ರಿಣಿಯು ತೊಡುವ 'ರತ್ನದ ಪದಕ' ಕಳ್ಳತನವಾದಾಗ ತಳವಾರನು ಡಂಗುರ ಹಾಕುತ್ತಾನೆ.

> "ಬಾಜಿಪ ತೂಳುವೆಱೆಗಳ ಬೆಚ್ಚುಗಹಳೆಗ
> ಳಾ ಜಳಪಿಸುವಸಿಯಾಳ್ಗಳ

ರಾಜಿಯೊಳೆಳ್ತಂದ ತಳವಾಜಿರೆಜೆಯ ವಿ

ರಾಜಿಸುವರಮನೆಯಗುಸೆಯ"(೨೦/೩೫)

ತಳವಾರರು ರನ್ನಪಟ್ಟಣದ ಬೀದಿ, ಕೇರಿ ಕೇರಿಗಳಲ್ಲಿ ಡಂಗುರ ಹೊಡೆದು ಸಾರಿದರು. ಕಲಿಗಳು ಕಳ್ಳರನ್ನು ಹಿಡಿದುತರಲು ಅರಮನೆಯ ಅಗುಸೆ ಬಾಗಿಲಲ್ಲೇ ಇದ್ದ ತಳವಾರರು ಕರೆತಂದ ಕಳ್ಳರನ್ನು ಶಿಕ್ಷಿಸಲು ರಾಜನ ಆಜ್ಞೆಗೆ ಕಾಯುತ್ತಿದ್ದರು. ಅಲ್ಲದೆ ಇವರು ಬೇಹುಗಾರಿಕೆಯಲ್ಲಿ ಪರಿಣಿತರಾಗಿರುತ್ತಿದ್ದರು.

"ಕಾಯ್ದೆಮನಾಳ್ಗಳಬ್ಬರದಂತೆ ಮೊರದುರ್ವಿ

ಮಯ್ದೋಜೆ ಮನೆಯೊಳಗಿರ್ದಡೆ

ಪೊಯ್ದೆತ್ತುವ ಪೊಜಮಡವೇಳ್‌ಚೋರನನೆನು

ತೆಯ್ದುವರಿವರು ತಳವಾಜಿರು"(೨೦/೩೭)

ತಳವಾರರು ಕಳ್ಳರನ್ನು ಹಿಡಿದು ಕರೆತರುವಾಗ ಅವರು ಯಮನ ಆಳುಗಳಂತೆ ವರ್ತಿಸುತ್ತಿದ್ದರು. ಮುಂದುವರಿದು ಅರಸನ ಆಜ್ಞೆಯಂತೆ ಪಟ್ಟಣದಲ್ಲಿ ಕಳ್ಳನನ್ನು ಮೆರವಣಿಗೆ ಮಾಡಿ ತಲೆ ಕತ್ತರಿಸಿದ ವಿವರ ಇಲ್ಲಿದೆ.

"ಮೆಜಸಿದರಾಗವನನು ಮುಂದೊಜಿಲುವ

ಪಜೆಕಾಳೆ ಸಹಿತ ಮೇಲ್ಪೊಳಲಿನ

ಪೊಜಿವಳಯಕೆ ಕೊಂಡೊಯ್ದರಾಕ್ಷಣ ತಲೆ

ದಜೆದರು ಕವರ್ದರು ಮನೆಯನು"(೨೦/೬೩)

ಅಂದು ಅರಸರು ಅಪರಾಧಿಗಳನ್ನು ಬಹಿರಂಗಪಡಿಸುತ್ತ ಕೆಟ್ಟ ಕೆಲಸಕ್ಕೆ ಕಠಿಣವಾದ ಶಿಕ್ಷೆ ತಪ್ಪಿದ್ದಲ್ಲವೆಂಬುದನ್ನು ಸಾರುವುದಾಗಿತ್ತು. ಹಾಗಾಗಿ ತಳವಾರರು ಬೇಹುಗಾರಿಕೆಯಲ್ಲಿ ಪರಿಣಿತರಾಗಿದ್ದು, ಆಡಳಿತದಲ್ಲಿ ಅರಸನ ಆಜ್ಞೆಗಳನ್ನು ಕಾರ್ಯರೂಪಕ್ಕೆ ತರುವಲ್ಲಿ ಪ್ರಮುಖ ಪಾತ್ರವಹಿಸಿದ್ದರು.

**೭.೩.೩. ಆಯುಧಗಳು**

ಪ್ರಾಚೀನ ಕಾಲದಿಂದ ಆಧುನಿಕ ಕಾಲದವರೆಗೆ ಮಾನವ ವಿವಿಧ ರೀತಿಯ ಆಯುಧಗಳನ್ನು ತಯಾರಿಸಿ ತನ್ನ ರಕ್ಷಣೆಯ ಜೊತೆಗೆ ಅವುಗಳನ್ನು ಬೇಟೆಗಾಗಿ, ಯುದ್ಧಕ್ಕಾಗಿ ಬಳಸಿಕೊಂಡು ಬಂದಿರುವುದನ್ನು ಕಾಣಬಹುದು. ಈ ಕಾವ್ಯದ ಕೆಲವು ಪದ್ಯಗಳಲ್ಲಿ ಆಯುಧಗಳನ್ನು ಉಲ್ಲೇಖಿಸಿರುವುದನ್ನು ಕಾಣಬಹುದು. ಅಂದು ಬೇಟೆಯಲ್ಲಿ ಬಳಸುತ್ತಿದ್ದ ಆಯುಧಗಳೆಂದರೆ

"ಕೊಂಬು ಕೊಳಲು ಬೀರಣ ತಂಬಟ ಹರೆ

ಚೆಂಬಕ ಡವುಡೆ ತಿತ್ತಿರಿಗಹಳೆ

ಬೊಂಬುಳಿ ಡೋಲು ನಿಸ್ಸಾಳ ಬೊಬ್ಬೆಯ ದನಿ

ತುಂಬಿದುದಂದೆಣ್ದೆಸೆಯನು"(೫/೪೩)

ಅಂದರೆ ಬಲೆ, ಬಿಲ್ಲು, ಕೊಂಬು, ಕೊಳಲು, ಬೀರಣ, ತಂಬಟ, ಹರೆಚೆಂಬಕ, ಡವುಡೆ, ತಿತ್ತಿರಿಗಹಳೆ, ಬೊಂಬುಳಿ, ಡೋಳು, ಸಿಸ್ಸಾಳ, ಬೊಬ್ಬೆಯ ಧ್ವನಿ ಎಂಬ ಆಯುಧಗಳು ಬಳಕೆಯಲ್ಲಿದ್ದವು.

"ದಡಿಸಿಡಿ ಸೆಳೆಗಾಣನೇಣಂಟುಗಳೇ ಬಱ
ಸಿಡಿಲ್ಪಲೆ ಕಣ್ಣಿಗುನ್ನಿಲು ಗುಂಡು
ತಡಿಕೆ ಮಕ್ಕರಿ ಪಟಗಳ ತಳೆದವನೊಳು
ನಡೆತಂದರು ಉಬ್ಧಕರಾಗ"(೧೭/೩೬)

ಬೇಡರು ದಡಿ, ಸಿಡಿ, ಸೆಳೆಗಾಣ, ಬಲೆ, ಗುಂಡು, ತಡಿಕೆ, ಮಕ್ಕರಿ, ಪಟಗಳೆಂಬ ಆಯುಧಗಳೊಂದಿಗೆ ಬೇಟೆಗೆ ಹೋಗುತ್ತಿದ್ದ ಚಿತ್ರಣವನ್ನು ಕವಿ ನೀಡುತ್ತಾನೆ. ಮಹಾಕಾಳಿ ದೇವಿ ಮುಂದೆ ವೀರರು ಭಕ್ತಿಯನ್ನು ಅರ್ಪಿಸಲು ಬಳಸುತ್ತಿದ್ದ ಆಯುಧಗಳೆಂದರೆ,

"ಒಡ್ಡಿದ ಸಿಡಿ ಡೆಂಕಣಿ ಶೂಲ ಸೂನಂಗಿ
ಯಡ್ಡಗರಗಸ ಕತ್ತರಿಗಿಚ್ಚು
ಅಡ್ಡಾಯುಧ ತೀವಿದ ಬಾವಿ ನೆಲಹು ಕಂ
ಗೆಡ್ಡಮಾಗಿರ್ದವಾ ಹುರದೊಳು"(೯/೨೮)

ಅಂದರೆ ಸಿಡಿ, ಶೂಲ, ಅಡ್ಡ ಗರಗಸ, ಕತ್ತರಿ, ಬೆಂಕಿ, ಬಾವಿ, ಅಡ್ಡಾಯುಧಗಳು ಅಲ್ಲಿದ್ದವು.

"ವಿಷದ ಕಮ್ಮಡು ಕೆಂಡದ ಕೊಂಡ ಕಮ್ಮರಿ
ದಸಿ ಕಾದುಕ್ಕುವೆಣ್ಣೆಯ ಬೆಂಚಿ
ಮಸದೊಡ್ಡಿದ ಕೂರಂಬು ಗಂಟಲ ಗಾಣ
ವೆಸದವು"(೯/೨೯) ಅಲ್ಲಿ ವೀರರು, ಭಕ್ತರು ತಮ್ಮ ಪ್ರಾಣವನ್ನು ಸಮರ್ಪಿಸಿಕೊಳ್ಳುವ ಆಯುಧಗಳಿದ್ದವು. ದೈವಭಕ್ತಿ ಮೆರೆಯಲು ಉಲ್ಲೇಖಗೊಂಡ ಆಯುಧಗಳನ್ನು ವೀರರು ಯುದ್ಧದಂತಹ ಹೋರಾಟಗಳಲ್ಲಿಯೂ ಬಳಸುತ್ತಿದ್ದರು. ಅವು

"ಶರ ಕೊಂತ ಖಡ್ಗ ತೋಮರ ಶಕ್ತಿ ಸೆಲ್ಲೆಹ
ಪರಶು ಡೊಂಕಣಿ ಗದೆ ಬಲ್ಲೆಹ
ಪರಿಘ ಉಬ್ಬಣ ಗುಂಡು ಲವುಡಿ ಮುದ್ಗರ ಶೂಲ
ಸುರಗಿ ವಳೆಯ ಕಱದರು ಕೂಡೆ"(೬/೫೪)

ಈ ಕಾವ್ಯದ ಮತ್ತೊಂದು ಕಡೆಯಲ್ಲಿ "ಸುತ್ತಿರ್ದ ಮಿಂಚುಗಳೆನೆ ಭಟರೆಸದರು ಬತ್ತೀಸಾಯುಧಂಗಳನಾಂತು" (೧೮/೧೬) ಎಂದಿದೆ. ಆದರೆ ಮೂವತ್ತೆರಡು ಆಯುಧಗಳಾವವೆಂಬುದನ್ನು ಹೆಸರಿಸಿಲ್ಲ. ಈ ಕುರಿತು ನಿಜಗುಣರು 'ವಿವೇಕ ಚಿಂತಾಮಣಿ'ಯಲ್ಲಿ ಮೂವತ್ತೆರಡು ಆಯುಧಗಳ ಹೆಸರನ್ನು ನೀಡಿದ್ದಾರೆ. ಅವುಗಳೆಂದರೆ "ಖಡ್ಗ, ಕರಾಚೂರಿ, ಕಕ್ಕಡೆ, ಕಡುಗತ್ತಿ, ಸಣೆಗತ್ತಿ, ಸಬಳ, ಈಟಿ, ಇದುರುಗತ್ತಿ, ಉಬ್ಬಣ, ಕಬ್ಬಿ(ಣ) ಕೋಲು, ಚಕ್ರ[?] ಚಂಡು[?], ಪೋತಿ[?], ಚಲ್ಲಿಹ[?], ಬಲ್ಲೆಹ, ಬಂಕು, ಬಾಣ, ನೆದೆ[?], ನರಾದಿ[?], ಶೂಲ, ಶಿರಾದಿ, ಚೂರಿ, ಚಿಕ್ಕತಾರಿ, ಕಿರಸೆ, ಪರಸು, ಪಾಶ, ಪಟ್ಟೆಯ, ಮಟ್ಟ, ಅಂಕುಶ, ವಂಕಿ, ಲಾಡಿ,

ಜವದಾಡೆ" (ಶ್ರೀವತ್ಸನಿ ಪು ೮೫) ಇವುಗಳಲ್ಲಿ ಕೇವಲ ೧೬ ಆಯುಧಗಳನ್ನು ಕುರಿತಿದೆ. ಅವು ಶರ, ಕೊಂತ, ಖಡ್ಗ, ತೋಮರ, ಸೆಲ್ಲೆಹ, ಪರಶು, ಡೊಂಕಣಿ, ಗುಂಡು, ಗದೆ, ಬಲ್ಲೆಹ, ಪರಿಘ, ಉಬ್ಬಣ, ಲವುಡಿ, ಮುದ್ಗರ, ಶೂಲ, ಸುರಗಿ ಇವುಗಳನ್ನು ಉಲ್ಲೇಖಿಸಿದೆ.

ದೇಪರಾಜ ಉಲ್ಲೇಖಿಸಿರುವ ಮೂವತ್ತೆರಡು ಆಯುಧಗಳನ್ನೇ ನಿಜಗುಣ ಶಿವಯೋಗಿಗಳು ಹೆಸರಿಸಿರುವ ಸಾಧ್ಯತೆಯಿದೆ. ಆಯುಧಗಳು ವಿವಿಧ ತೆರನಾಗಿದ್ದು ಇವುಗಳನ್ನು ಬೇಟೆಯಾಡಲು ಮತ್ತು ಯುದ್ಧದಲ್ಲಿ ಹೋರಾಡಲು ಹಾಗೂ ದೇವರಿಗೆ ಭಕ್ತಿಯನ್ನು ಸಮರ್ಪಿಸಲು ಬಳಸುತ್ತಿದ್ದರು.

ಅರಸರು ಸಕಲಕಲಾವಲ್ಲಭರಾಗಿದ್ದು ಜನಪರ ಕಾರ್ಯಗಳನ್ನು ಮಾಡುವ ಮೂಲಕ ಆದರ್ಶ ನಾಯಕರಾಗಿದ್ದರು. ಇವರು ನಡೆ ನುಡಿಗಳಲ್ಲಿ ಶುದ್ಧರಾಗಿದ್ದು ಕೆಲವೊಮ್ಮೆ ನಿರಂಕುಶ ಆಡಳಿತವನ್ನು ನಡೆಸುತ್ತಿದ್ದರು. ಆದರೆ ಕೆಲವು ಅರಸರು ಅತಿ ಮೂರ್ಖರು, ಚಪಲರು, ಜಡರು, ದಯಾಹೀನರು, ಸಂಪತ್ತು ಹಾಗೂ ಅಧಿಕಾರ ಮದದಿಂದ ಉಪದೇಶಗೈಯುತ್ತ ಹೇಯಕರವಾದ ಕೃತ್ಯವನ್ನು ಎಸಗುತ್ತಿದ್ದರು. ಅದಕ್ಕಾಗಿ ಇಂತವರಿಗೆ ಬಾಲ್ಯದಲ್ಲೇ ಕೌಶಲ್ಯ ತರಬೇತಿ, ಚಾರಿತ್ರ್ಯನಿರ್ಮಾಣ, ನೀತಿಪಾಲನೆ, ಧರ್ಮರಕ್ಷಣೆ ಮಾಡುವ ವಿದ್ಯಾಭ್ಯಾಸವನ್ನು ನೀಡಲಾಗುತ್ತಿತ್ತು. ಆಡಳಿತದಲ್ಲಿ ತಳವಾರರು ಬೇಹುಗಾರಿಕೆ, ರಕ್ಷಣೆ, ಆಜ್ಞೆಗಳನ್ನು ಕಾರ್ಯರೂಪಕ್ಕೆ ತರುವಲ್ಲಿ ಪ್ರಮುಖ ಪಾತ್ರವಾಗಿತ್ತು. ಅಂದು ಆಯುಧಗಳು ವಿವಿಧ ತೆರನಾಗಿದ್ದು ಇವುಗಳನ್ನು ಬೇಟೆಯಾಡಲು ಮತ್ತು ಯುದ್ಧದಲ್ಲಿ ಹೋರಾಡಲು ಹಾಗೂ ದೇವರಿಗೆ ಭಕ್ತಿಯನ್ನು ಸಮರ್ಪಿಸಲು ಬಳಸುತ್ತಿದ್ದರು.

### ೭.೪. ಸಾಮಾಜಿಕ ಆಯಾಮ

ಕೂಡಿ ಬಾಳುವುದು ಭಾರತೀಯ ಸಂಸ್ಕೃತಿ. ಇದು ಆದಿಮಾನವನ ಕಾಲದಿಂದ ನಡೆದುಕೊಂಡು ಬಂದ ಪರಂಪರೆಯಾಗಿದೆ. ತಂದೆ, ತಾಯಿ, ಗಂಡ, ಹೆಂಡತಿ, ಮಕ್ಕಳು ಹಾಗೂ ಇತರೆಯವರು ಇರುವ ಒಂದು ಪರಿವಾರ ಕುಟುಂಬ ಎನಿಸುತ್ತದೆ. ಇಂತಹ ಹಲವಾರು ಕುಟುಂಬಗಳು ಒಂದು ಕಡೆ ನೆಲೆಸಿ ವ್ಯವಸ್ಥಿತವಾಗಿ ಬದುಕುವುದನ್ನು ಸಮಾಜ ಎನ್ನಬಹುದು. ಸಮಾಜದಲ್ಲಿ ಹತ್ತು ಹಲವು ಬದುಕಿನ ಕ್ರಮಗಳಿರುತ್ತವೆ. ಸಮಾಜದ ಊರು, ಕೇರಿ ಪಟ್ಟಣ, ಬಸಿರು, ಬಾಣಂತಿ, ಮಕ್ಕಳು, ಸ್ತ್ರೀವರ್ಣನೆ, ವೇಶ್ಯಾವಾಟಿಕೆ, ಬೇಡರು, ಬೇಟೆ, ಜೂಜು, ನೀತಿ ಈ ಅಂಶಗಳನ್ನು ಸಾಮಾಜಿಕ ಆಯಾಮ ಎಂದು ಪ್ರಸ್ತುತ ಅಧ್ಯಯನದಲ್ಲಿ ಪರಿಭಾವಿಸಲಾಗಿದೆ.

ಮಾನವನ ಸಾಮಾಜಿಕ ಸಂಬಂಧಗಳ ಬಲೆಯೇ ಸಮಾಜವಾಗಿರುವುದರಿಂದ ವ್ಯಕ್ತಿ ಮತ್ತು ಸಮಾಜ ಪರಸ್ಪರ ಬೇರ್ಪಡಿಸಲಾಗದ ಸಂಬಂಧ ಹೊಂದಿ ಸಾಮಾಜಿಕ ಭಾವನೆಗಳನ್ನು, ವರ್ತನೆಗಳನ್ನು ಮೈಗೂಡಿಸಿಕೊಳ್ಳುವ ಪ್ರಕ್ರಿಯೆ ನಿರಂತರ. ಮಾನವರು ಯಾವ ಸಮೂಹ, ಸಮಾಜದ ಸದಸ್ಯರಾಗಿರುತ್ತಾರೋ ಆ ಸಮೂಹದ ಸಾಂಸ್ಕೃತಿಕ ಮತ್ತು ವರ್ತನಾ ಮಾದರಿಗಳನ್ನು ಕಲಿತುಕೊಂಡು ಅದರಂತೆ ನಡೆದುಕೊಳ್ಳುತ್ತಾರೆನ್ನುವುದು ನಿರ್ವಿವಾದ.

ದೇಪರಾಜನ "ಸೊಬಗಿನ ಸೋನೆ" ಕಾವ್ಯದಲ್ಲಿ ಅಂದಿನ ಸಮಕಾಲೀನ ಸಾಮಾಜಿಕ ವ್ಯವಸ್ಥೆಯನ್ನು ಕುರಿತು ಚರ್ಚಿಸಲಾಗಿದೆ.

### ೭.೪.೧. ಊರು, ಕೇರಿ, ಪಟ್ಟಣ

ಪ್ರಕೃತಿದತ್ತವಾಗಿ ಅನುಕೂಲಕರವಾದ ಪ್ರದೇಶವನ್ನು ಆಯ್ಕೆ ಮಾಡಿಕೊಂಡು ನೆಲನಿಂತ ಜನ ಮನೆಯನ್ನು ಕಟ್ಟಿಕೊಂಡರು. ಹಲವು ಮನೆಗಳು ಒಂದೆಡೆಯಲ್ಲಿ ಇರುವ ಜನ ಸಮುದಾಯ ವಾಸಿಸಿರುವುದನ್ನು ಊರು ಎಂದು ಕರೆಯುತ್ತೇವೆ. ವಿವಿಧ ವೃತ್ತಿಯ ಜನ ಒಂದು ಕಡೆಯಲ್ಲಿ ವಾಸಿಸುವ ಭಾಗವನ್ನು ಕೇರಿಗಳೆಂದು ಕರೆಯುವರು. ಆಡಳಿತದ ಅನುಕೂಲಕ್ಕಾಗಿ ಹೆಚ್ಚು ಜನರಿರುವ ಕ್ರಮಬದ್ಧವಾದ ಯೋಜನೆಗಳಿಂದ ರೂಪುಗೊಂಡ ಪ್ರದೇಶವನ್ನು ಪಟ್ಟಣವೆಂದು ಕರೆಯುತ್ತಿದ್ದರು. ಪಟ್ಟಣಗಳು ಅರಸರು ವಾಸಿಸುವುದಕ್ಕೆ, ರಾಜಧಾನಿ ಮಾಡಿಕೊಂಡು ಆಡಳಿತ ನಡೆಸಲಿಕ್ಕೆ ಇರುವ ಸೌಲಭ್ಯಗಳನ್ನು ಹೊಂದಿರುತ್ತದೆ. ಅಂದು ಕನ್ನಡ ನಾಡಿನಲ್ಲಿ ಪ್ರಕೃತಿ ಸಂಪತ್ತಿನಿಂದ ಕೂಡಿದ ಊರುಗಳಿದ್ದವೆಂದು ಸೊಬಗಿನ ಸೋನೆಯಲ್ಲಿ ವರ್ಣಿಸಲ್ಪಟ್ಟಿದೆ.

"ಕಱವುದು ಸುಖವ ಕಂಗೊಳಿಪುದು ನೋಳ್ಪರ<br>
ಮೆಱವ ನಾಡೊಳಂಗನೆ ಕೇಳ<br>
ತೊಱೆ ಕಾಲ್ಗೊಡದಿಹವಿಲ್ಲ ಕಾಲ್ಪೊಗದಿಹ<br>
ಕೆಱೆಯಿಲ್ಲ ಕೆಱೆಯಿಲ್ಲ ದೂರಿಲ್ಲ"(೧/೨೮)

ಕನ್ನಡ ನಾಡಿನೊಳಗೆ ಊರುಗಳು ಕೆರೆ, ತೊರೆ, ಕಾಲುವೆಗಳಿಂದ ಕೂಡಿದ್ದು ನೋಡುಗರ ಕಣ್ಮನಗಳಿಗೆ ಸುಖದಾನಂದವನ್ನು ಕೊಟ್ಟು ಮೆರೆಯುತ್ತಿದ್ದವು.

**ಕೇರಿಗಳ ವರ್ಣನೆ:** ಬೇರೆ ಬೇರೆ ಜಾತಿ, ವೃತ್ತಿ, ವರ್ಗಗಳಿಗೆ ಸೇರಿದ ಜನರು ಒಂದು ಕಡೆಯಲ್ಲಿ ವಾಸಿಸುವುದನ್ನು ಕೇರಿಗಳೆಂದು ಕರೆಯಲಾಗುತ್ತದೆ. ಈ ರೀತಿಯ ಜನರು ಇದ್ದರೆಂಬುದನ್ನು ಸೊಬಗಿನ ಸೋನೆಯಲ್ಲಿ ವರ್ಣಿಸಲ್ಪಟ್ಟಿದೆ.

"ಕರಿ ತುರಗವ ತಿದ್ದುವ ರಾಜಕುವರರ<br>
ಸರಗೊಳಿಸುವ ನೃತ್ಯ ಮೊದಲಾದ<br>
ಭರತಕಲೆಯನಱುಪುವರೋದುವರ<br>
ಬ್ಬರವಿಲ್ಲದರ ಕೇರಿಗಳಿಲ್ಲ"(೧/೩೦)

"ಮಲ್ಲರ ಮಣಿಗಾಱರನಂಕಗಾಱರ<br>
ಗೆಲ್ಲವಱವ ಜೂಜುಗಾಱರ<br>
ಕೊಲ್ಲಟಿಗರ ಸೂಳೆಯರ ಚಿತ್ರಕಲೆಗಳ<br>
ಬಲ್ಲರ ಕೇರಿಗಳೆಸದವು"(೧/೩೧)

ಆ ಕಾಲದ ಪುರಗಳಲ್ಲಿ ನಾನಾ ವೃತ್ತಿಬಾಂಧವರು ವಾಸಿಸುತ್ತಿದ್ದ ಕೇರಿಗಳು ಶೋಭಿಸುತ್ತಿದ್ದವು ಎಂದು ಕವಿ ಪ್ರಸ್ತಾಪಿಸಿದ್ದಾನೆ. ಅಲ್ಲಿ ಆನೆ, ಕುದುರೆಗಳನ್ನು ಪಳಗಿಸುವವರು, ಬಿಲ್ವಿದ್ಯೆ, ನೃತ್ಯ ಭರತಕಲೆಯನ್ನು ಕಲಿಸುವವರ, ಅಭ್ಯಾಸ ಮಾಡುವವರ ಅಬ್ಬರವುಳ್ಳ ಕೇರಿಗಳಿದ್ದರೆ, ಮತ್ತೆ ಮಲ್ಲರ, ಮಣೆಗಾರರ ಅಂಕಗಾರರ(ಶೂರರ) ಕೊಲ್ಲಟಿಗರ (ಡೊಂಬರು), ಸೂಳೆಯರ, ಚಿತ್ರಗಳಲ್ಲಿ ಕಲಾಕುಶಲರು, ಮೊದಲಾದವರ ಕೇರಿಗಳಿದ್ದವೆಂದು ಈ ಕಾವ್ಯದಲ್ಲಿ ಉಲ್ಲೇಖಿತವಾಗಿದೆ. ಕಾವ್ಯ ಮುಂದುವರಿದು

"ವೇದವಿದರ ಶಾಸ್ತ್ರಜ್ಞರ ಮಣಿಮಂ
ತ್ರೋದಯಾದ್ಯರ ಕಾವ್ಯಕುಶಲರ
ನಾದವರರ ನರ್ತನ ಪರಿಣತರ್ಮೊದ
ಲಾದರ ಕೇರಿಕೇರಿಯ ಕಂಡ"(೨೩/೧೮)

ಈ ವರ್ಣನೆಗಳಲ್ಲಿ ವೇದ, ಶಾಸ್ತ್ರ, ಮಣಿ, ಮಂತ್ರ, ನರ್ತನ, ವಿದ್ಯಾರತ್ನ, ಕಾವ್ಯಕುಶಲವನ್ನು ಬಲ್ಲ ಪರಿಣಿತರ ಕೇರಿಗಳು ರನ್ನವೊಳಲೆಂಬ ಪಟ್ಟಣದಲ್ಲಿದ್ದವು. ಮುಂದುವರಿದು ಬೇಡರ ಕೇರಿಗಳು ಪ್ರತ್ಯೇಕವಾಗಿದ್ದವು.

"...ದೀಹದ
ಗಿಳಿ ಸೋಗೆ ಪಱಮೆಗಳಿರೆ ನಟ್ಟ
ನೆಲೆಯಾಂತ ಪೊಂಬಳ್ಳಿಗಳ ಗೂಡುಗಳಿಂ
ಸಲೆ ತೋರ್ಪ ಬಿಯದಗೇರಿಯ ಕಂಡೆ"(೧೮/೨೦)

ಸೂಳೆಗೇರಿಗಳು

"ಜಾರರ ನೆಲೆ ಜವನಿಗರಱ ಕವಿಕಾ
ರರ ರಚ್ಚೆ ದೂರ್ತರ ಬೆಳೆ
ಆರವೆ ಶೃಂಗಾರದ ಪೇಟಿಯಹ
ಸೂಳೆಗೇರಿಯ ಕಂಡೆ..."(೧೮/೨೧)

ಅಂದರೆ ಜಾರರ ನೆಲೆಯಂತೆ, ಜವನಿಗರ, ಕವಿಕಾರರ ರಚ್ಚೆ, ದೂರ್ತರ ಜೆಳೆ, ಶೃಂಗಾರದ ಪೇಟಿಯಂತೆ ಇದ್ದವು. ಇದನ್ನು ಕವಿ ಅಷ್ಟಾದಶ ವರ್ಣನೆಗಳಲ್ಲಿ ಸೂಳೆಗೇರಿಯ ವರ್ಣನೆ ಒಂದು. ಆದ್ದರಿಂದ ಕವಿ ಸೊಬಗಿನ ಸೋನೆಯಲ್ಲಿ ಸೂಳೆಗೇರಿಯ ವರ್ಣನೆ ಮಾಡಿದ್ದಾನೆ ಎನ್ನಿಸುತ್ತದೆ.

"ರನ್ನದ ಕರುವಾಡಗಳ್ದುಕೂಲವ ಗುಡಿ
ಚಿನ್ನದ ನವಿಲುಯ್ಯಲೆಗಳು
ಕನ್ನಡಿ ಬಿಗಿದ ತೋರಣಗಳೆಲ್ಲೆಡೆಯೊಳು
ಚೆನ್ನಳವಟ್ಟೆಸದವು ಕೇರಿ"(೧೮/೪)

"ನೆಲೆವಾಡದೊಳು ರಾಜಬೀದಿಯೊಳುಪವನ
ದೊಳು ಪೊನ್ನ ನವಿಲುಯ್ಯಲೆಯೊಳು
ಪೊಳೆವೆಳೆ ಮೀನ್ಗಳೆಣೆಯ ಲೋಚನೆಯರಿ
ಟ್ಟಳಿಸಿಹರ್ಕೇರಿ ಕೇರಿಗಳಲ್ಲಿ"(೧೮/೭)

ಕೇರಿಗಳಲ್ಲಿ ಅಂತಸ್ತಿನ ಮನೆಗಳಿದ್ದು ಚಿನ್ನ, ರತ್ನ, ಕನ್ನಡಿಗಳಿದ್ದ ತೋರಣಗಳು ಆಕರ್ಷಿಸುತ್ತಿದ್ದವು. ರಾಜಬೀದಿಯಲ್ಲಿ, ಉಪ್ಪರಿಗೆಯಲ್ಲಿ ನವಿಲುಗರಿಗಳು ಗಾಳಿಬೀಸುವಂತೆ ಕಂಡವು. ಅಲ್ಲಿ ಬಂಗಾರದ ಆಭರಣಗಳು ಹೊಳೆದು ಕಣ್ಣಿಗೆ ಕುಕ್ಕುವಂತಿದ್ದವು.

**ಪಟ್ಟಣ:** ಅರಸರು ಆಡಳಿತದ ಕೇಂದ್ರವನ್ನಾಗಿ ಪುರ ಅಥವಾ ಪಟ್ಟಣವನ್ನು ಮಾಡಿಕೊಂಡಿರುತ್ತಾರೆ. ರಾಜಕೀಯ, ಆರ್ಥಿಕ, ಸಾಮಾಜಿಕ, ಧಾರ್ಮಿಕ ಚಟುವಟಿಕೆಗಳು ಪಟ್ಟಣಗಳಲ್ಲಿ ಹೆಚ್ಚಾಗಿ ಜರುಗುತ್ತಿದ್ದವು. ಎಲ್ಲ ಊರು ಕೇರಿಗಳಿಗೆ ಅನುಕೂಲವಾದ ಸಂಪರ್ಕವನ್ನು ಪಟ್ಟಣದಲ್ಲಿ ಕಲ್ಪಿಸಿಕೊಂಡು ಜನಜೀವನಕ್ಕೆ ಅರಸರು ಪ್ರೇರಕರಾಗಿದ್ದರು ಎನ್ನಬಹುದು.

"ಪರಿಕಿಸಲಾದಿ ವರಾಹನಾದ ಹರಿ
ಹರಹುತಂದಿಳೆಯನೀಯೆಡೆಯನು
ಮಱದನೊ ಪರಿಕೆಗೆಂದುಳುಹಿದನೊಯೆಂಬ
ತೆಱದಲಾ ಪೊಳಲಗಳೆಸದುದು"(೧/೪೦)

"ಎಲ್ಲರು ಶಿವಭಕ್ತರು ನನ್ನಿಯುಳ್ಳರು
ಬಲ್ಲ ಜಾಣರು ಭೋಗಿ ಸುಖಿಗಳು
ಗೆಲ್ಲಗೈಯರು ವೀರರು ಜಸವೆಣ್ಣೊಲ
ವಿಲ್ಲದರಿಲ್ಲವಾ ಪೊಳಲೊಳು"(೧/೫೪)

ವಿಜಯನಗರದ ಪಟ್ಟಣದ ಜನರೆಲ್ಲ ಶಿವಭಕ್ತರು, ಸತ್ಯವಂತರು, ಜಾಣರು, ರಸಿಕರು, ಸುಖಿಗಳು, ಗೆಲ್ಲಬಲ್ಲ ಶೂರರು, ವಿಜಯಲಕ್ಷ್ಮಿಯ ಒಲವುಳ್ಳವರು ಇದ್ದು, ಹರಿಹರರು ಈ ನೆಲದಲ್ಲಿ ನಿಂದು ಭಕ್ತರನ್ನು ಪರೀಕ್ಷಿಸಲೆಂದು ಬಂದು ನೆಲೆಸಿದ್ದಾರೊ ಎಂಬಂತೆ ಅಲ್ಲಿ ಭಾಸವಾಗುತ್ತಿತ್ತು. ಅದು

"...ಪಲವು ಪಸರಗಳಿಂದಾದ
ಶಿವ ಹರಿಗಳ ದೇಗುಲದಿಂದ
ಕವಿ ಭಯಕಾಱ ರಸಿಕರ ಗೋಷ್ಠಿಗಳಿಂದ
ರವಿ ಶಶಿ ವೀದಿಗಳೆಸದವು"(೧/೪೯)

ವಿಜಯನಗರದ ರಾಜಬೀದಿಗಳು ಅಲಂಕಾರದಿಂದಲೇ ಆಕರ್ಷಿಸುವಂತಿದ್ದವು.

"...ಪೂವಲಿಯಿಂದ
ರಂಗವಲಿಯ ಮುತ್ತುಗಳಿಂದ
ಪೊಂಗೆಲಸದ ತೋರಣದಿಂದ ಸುಳಿವೆಳೆ
ವೆಂಗಳ ನೂಪುರದುಲುಪಿಂದ"(೧/೪೫)

ಕಣ್ಗೆ ಶೋಭಿಸುತ್ತಿದ್ದವು. ಆ ಪುರದ ಗೋಪುರಗಳು ಪ್ರವಾಸಿಗರನ್ನು, ರಸಿಕರನ್ನು ತಮ್ಮ ಕಡೆಗೆ ಸೆಳೆಯುವಂತಿದ್ದವು.

"ಆ ಪುರಕೈತಪ್ಪರ ಕ್ಷೇಮ ಕುಶಲವ
ನೋಪಳೆ ಪ್ರಿಯದಿ ಕೇಳುವವೊಲು
ಗೋಪುರಗಳು ಸುಳಿವಚ್ಚರಿಯ ರಮಣಿ
ನೂಪುರದುಲುಪಿಂದಲೆಸೆದವು"(೧/೪೪)

ನಾರಿಯರ ಕಾಲ್ಗೆಜ್ಜೆಯ ಧ್ವನಿಗಳು ವೀಕ್ಷಿಸುತ್ತಿದ್ದ ಜನರನ್ನು ಕ್ಷೇಮ ಕುಶಲವನ್ನು ವಿಚಾರಿಸುವಂತೆ ಇತ್ತು.

ರನ್ನವೊಳಲೆಂಬ ಪಟ್ಟಣದ ಕವಿ ವರ್ಣನೆ ಉತ್ಪ್ರೇಕ್ಷೆಯಿಂದ ಕೂಡಿದೆ ಎನ್ನಿಸುತ್ತದೆ. ಅದು

"ಸುರನಗರವೊ ಖೇಚರರ ಪಟ್ಟಣವೊ ಕಿನ್ನ
ರರ ರಾಜಧಾನಿಯೊ ಗಂಧರ್ವ
ಪುರವೊ ಗುಹ್ಯಕ ಜನಪದವೊ ಕಣ್ಗಿದು ನಾ
ಗರ ಮಾತುಳ ಪೊಳಲೊಪೇಳ"(೨೩/೧೫)

ದೇವರ, ಖೇಚರ, ಗಂಧರ್ವ, ಕಿನ್ನರ, ಗುಹ್ಯಕ ಜನಪದ (ಕುಬೇರ) ನಗರವೊ ಎಂಬಂತೆ ಮಾತುಳ ಅರಸನ ಪಟ್ಟಣವಿತ್ತು. ಈ ನಗರದಲ್ಲಿ

"ವಣಿಜರ ವರ್ಮಜ್ಞರ ವಾಗುರಿಗರ
ಮಣಿಗಾಱರ ಮಾಂದುರಿಗರ
ಗಣಿಕೆಯರಕ್ಕರಿಗರ ಶಿಲ್ಪಿಗರ ಪೆ
ಕ್ಕಣಿಗರ ಗೃಹವೀದಿಯ ಕಂಡ"(೨೩/೧೭)

ವ್ಯಾಪಾರಸ್ಥರು, ವರ್ಮಜ್ಞರು, ವಾಗುರಿಗರ (ಬಲೆಗಾರರ), ಮಣಿಗಾರರು, ಮಾಂದುರಿಗರ (ಕಾಸ್ತಾರ, ಕುದುರೆಗಳನ್ನು ನೋಡಿಕೊಳ್ಳುವವ), ಗಣಿಕೆಯರು, ಅಕ್ಕರಿಗರು, ಶಿಲ್ಪಿಗಳು, ಪ್ರೇಕ್ಷಕರ ಗೃಹವೀದಿಗಳಿದ್ದವು. 'ಸಸಿವೊಳ'ಲೆಂಬ ಪಟ್ಟಣವು ಪ್ರಕೃತಿ ಸಂಪತ್ತಿನಿಂದ ಸುತ್ತುವರೆದಿತ್ತು.

"ಪರಿದಾ ಪೊಳಲ ಸುತ್ತಿಹ ತೊಱೆವೆಸರನೊ
ಲ್ದರಸಂಜೆ ಕೋಕವಾಱಿಡಿ ಕೊಂಚೆ
ಸರಸವತಿಗೆಯೆಂದಱು ಪುವೊಲಲ್ಲಿಯಿಂ
ಚರದಿಂದಲುಲಿವವಿತ್ತಡಿಯಲ್ಲಿ"(೧/೩೩)

"ಬೆಳಗೆಯಿಗಳು ಕರ್ವುದೋಂಟ ತೀವಿದ ಕೆಱೆ
ಕೊಳಮಡು ಕವುಂಗೇಱೆದೆಳವಳ್ಳಿ
ಫಲತೀವಿದ ನಾನಾ ತರುಗಳೊಳಾ ಪೊ
ಳಲ ಪೊಱಗು ಕಂಗೊಳಿಸಿತು"(೧/೩೬)

ಪಟ್ಟಣದ ಸುತ್ತ ಮುತ್ತ ಕಬ್ಬಿನ ತೋಟ, ತುಂಬಿದಕೆರೆ ಕೊಳ, ಮಡು, ಅಡಿಕೆ ಏರಿದ ಎಲೆಬಳ್ಳಿಗಳು, ಫಲತುಂಬಿದ ನಾನಾ ತೆರನಾದ ಮರಗಳು ಸುಂದರವಾಗಿ ಕಂಗೊಳಿಸಿದ್ದವು. ಈ ವಿವರವನ್ನು ಗಮನಿಸಿದಾಗ ಇಂದಿನ ಹಂಪಿಯ ಪಟ್ಟಣ ನೆನಪಿಗೆ ಬರುತ್ತದೆ. ದೇಪರಾಜನ ಕಾಲಕ್ಕೆ ವಿಜಯನಗರವು ಕಬ್ಬಿನ ತೋಟ, ತುಂಬಿದಕೆರೆ. ಕೊಳ. ಮಡು, ಅಡಿಕೆ ಮರಗಳ, ಎಲೆಬಳ್ಳಿಗಳನ್ನು ಹೊಂದಿತ್ತು. ಈಗಲೂ ಹಂಪಿಯ ಸುತ್ತ ಇವುಗಳು ಇರುವುದನ್ನು ಕಾಣಬಹುದು.

ಊರುಗಳು ಪ್ರಕೃತಿ ಸಂಪತ್ತಿನಿಂದ ಕೂಡಿದ್ದವು. ಅಲ್ಲಿ ಕೆರೆ, ತೊರೆ, ಕಾಲುವೆ, ಉದ್ಯಾನವಗಳಿಂದ ಕಣ್ಮನಗಳಿಗೆ ಆನಂದವನ್ನು ಉಂಟುಮಾಡುವಂತಿದ್ದವು. ಅಲ್ಲಿ ನಾನಾ ಜಾತಿ, ವೃತ್ತಿಗಳಿಗೆ ಸಂಬಂಧಿಸಿದ ಕೇರಿಗಳಿದ್ದವು. ಅಲ್ಲಿ ಬೇಡರ ಕೇರಿಗಳು ಪ್ರತ್ಯೇಕವಾಗಿದ್ದವು. ಸೂಳೆಗೇರಿಗಳು ಶೃಂಗಾರದ ಪೇಟೆಯಂತಿದ್ದವು. ಪಟ್ಟಣಗಳ ಸುತ್ತ ಕಬ್ಬಿನತೋಟ, ತುಂಬಿದ ಕೆರೆ, ಕೊಳ,

ಮಡು, ತೆಂಗು, ಅಡಿಕೆ, ಫಲಭರಿತ ಮರಗಳು ಇನ್ನು ಮುಂತಾದವುಗಳಿದ್ದು ವ್ಯಾಪಾರ ವಹಿವಾಟಿಗೆ ಪಟ್ಟಣ ಕೇಂದ್ರವಾಗಿದ್ದವು.

**೭.೪.೨. ಬಸಿರು, ಬಾಣಂತಿ, ಮಕ್ಕಳು**

'ಇಂದಿನ ಮಕ್ಕಳು ನಾಳಿನ ಪ್ರಜೆಗಳು' ಎಂಬಂತೆ ಮಕ್ಕಳ ಪಡೆಯುವುದು, ಬೆಳೆಸುವುದು, ಶಿಕ್ಷಣ ನೀಡಿ ಉತ್ತಮ ವ್ಯಕ್ತಿಯನ್ನು ಮಾಡುವುದು ಕುಟುಂಬದ ಜವಾಬ್ದಾರಿಯಾಗಿರುತ್ತದೆ. ಸುಖ ಸಂಸಾರಕ್ಕೆ ಮಕ್ಕಳೇ ಕಾರಣರೆಂಬುದನ್ನು ಕವಿ ದೇಪರಾಜ ಸುರಭಾವತಿ ರಾಣಿಯ ಮೂಲಕ ಹೀಗೆ ವ್ಯಕ್ತಪಡಿಸಿದ್ದಾನೆ. "ಕಾಂತ ಬಾಳಿಗೆ ಬಾಲಕೇಳಿಯ ಸಿರಿಗೆ ನಾನೋಂತುದಿಲ್ಲ" (೨/೨೬) "ಸುತರಾಡದಂಗಳ ಭುವನೇಶ ಕಂಗೆಸವುದೆ,"(೨/೨೭) "ಪ್ರಾಯದೊಳೆಳೆ ಬರೊಗೆಯದ ಪಾಳ್ದೊಡೆರಾಯ ಕೇಳಿಳೆಯಾಳಗೆಸವುದೆ"(೨/೨೮) "ಕಂದಗೆ ಮೊಲೆಯೀವ ಸಿರಿ ಮುನ್ನ ನೋನದವಳ್ಗುಂಟೆ"(೨/೨೯) "ಮಕ್ಕಳ ಮುದ್ದು ನೆಜೆ ಮುನ್ನ ನೋನದವಳ್ಗುಂಟೆ"(೨/೩೧) ಎಂದು ರಾಜನನ್ನು ಪ್ರಶ್ನಿಸುತ್ತ ರಾಣಿಯು ಗಂಡು ಮಗುವಿನ ಬಗ್ಗೆ "ಸಂಸಾರದ ಸುಖಸಾರವಿಲ್ಲ ಬಾಲಕರಿಲ್ಲದವರಿಗೆ" (೨/೩೧) ಎನ್ನುತ್ತಾಳೆ. ತಾನು ತಾಯಿಯಾಗಿ ಮಕ್ಕಳನ್ನು ಬೆಳೆಸಿ ಅವರ ಮೂಲಕ ಬದುಕಿನ ಸಾರ್ಥಕತೆಯನ್ನು ಹೊಂದಬೇಕೆಂದು ಬಯಸುತ್ತಾಳೆ.

ಸುರಭಾವತಿ ಮತ್ತು ಜಯಶೇಖರ ರಾಜ "ಕಾಮಕಲೆಯ ಕಲಾಪವನನುಭವಿಸುತಲಿರೆ ಓಪಳೆ ಸುರಭವತಿಗೆ ಗರ್ಭಮೊಳೆತುದು"(೪/೧೧) ಆಗ ಅವಳು ಗರ್ಭವತಿಯಾಗಿ ಕಾಂತಿಯುಕ್ತವಾಗಿ ಕಂಡಳು ಅವಳ ಗರ್ಭವು

"ರನ್ನದೊಳಿದ್ದ ಲಹರಿ ಪೊಳೆವೊಲು ಪೊಸ
ಪೊನ್ನೊಳೊಪ್ಪುವ ಮಿನುಗಿನೊಲು
ಚೆನ್ನೆಯ ತೆಳುವಸುಜೊಳು ಬೆಳೆವಳೆ ಗರ್ಭ
ಜೊನ್ನದುರುಳಿಯಂತೆ ಪೊಳೆದುದು"(೪/೧೫)

ತೆಳ್ಳನೆಯ ಚೆಲುವೆ ಬೆಳದಿಂಗಳ ಚಂದ್ರಮ ದಿನದಿನಕ್ಕೂ ಬೆಳೆಯುವಂತೆ ಚಿನ್ನದೊಳಗೆ ಒಪ್ಪುವ ರತ್ನ ಹೊಳೆವಂತೆ, ಗರ್ಭ ಇತ್ತೆಂದು ಕವಿ ವರ್ಣಿಸಿದ್ದಾನೆ. ಪ್ರಸವ ವೇದನೆಯು ರಾಣಿಯಲ್ಲಿ ಆದ ಅನುಭವ ಮುಖ್ಯವಾಗಿದೆ. ಅಂದು ಪರಿಣಿತಿ ಹೊಂದಿದ ಸೂಲಗಿತ್ತಿಯರೇ ಇದ್ದರು.

"ತೊಡಗಿತು ಬೇನೆ ಮೆಲ್ಲನೆ ಕೆಳದಿಯರಾಂತು
ತಡೆಗಡಿದೆಡೆಯಾಡಿಸಿ ಬೆನ್ನ
ಪಿಡಿದುಪಚರಿಸಿ ಪೆಂಗಳು ಸುಮೂರ್ತದಿ
ಪಡೆದಳು ಮಗನ ಸುರಭಿವತಿ"(೪/೧೭)

ಅದಕ್ಕೆ ಬೇನೆಯಲ್ಲಿದ್ದ ರಾಣಿ ಸುರಭಾವತಿಗೆ ಸೂಲಗಿತ್ತಿಯರು ಉಪಚರಿಸಿದರು ರಾಣಿ ಗಂಡು ಮಗುವನ್ನು ಹೆತ್ತಳು.

"ಬಾಲಗೆ ಬೆಚ್ಚುನೀರಂ ಸೂಸಿ ಸೋಗಿಲೊ
ಳ್ತಾಳಿ ಪೊಂಬರಿವಾಣದೊಳಿಟ್ಟು
ಸೂಲಗಿತ್ತಿಯರು ಪೊಕ್ಕುಳ್ಗೊಯಿದು ಮೇಲೆ ನಿ
ವಾಳಿಸಿದರು ರತ್ನದಾರತಿಗಳ"(೪/೧೮)

ಹೊಕ್ಕಳ ಹುರಿಯನ್ನು ಕತ್ತರಿಸಿ ಶಿಶುವನ್ನು ಸೂಲಗಿತ್ತಿಯರು ಮೈತೊಳೆದು ನಿವಾಳಿ ತೆಗೆದು ಹಾಕಿ ಬಂಗಾರದ ಹರಿವಾಣದಲ್ಲಿ ಮಗುವನ್ನು ಕೂರಿಸಿ ರತ್ನದ ಆರತಿ ಎತ್ತಿದರು. ಈ ಕುರಿತಂತೆ ಶಾಂತಿನಾಥ ದಿಬ್ಬದ ಅವರು "ಮಗು ಹುಟ್ಟಿದ ಕೂಡಲೇ ಅದಕ್ಕೆ ಇತರರ ಹಾಗೂ ಪಿಶಾಚಿಗಳ ದೃಷ್ಟಿಬಾದೆ ತಾಗದಿರಲೆಂದು ಬೆಚ್ಚುನೀರ್ದಳಿಯುವುದು ಅಂದಿನ ವಾಮಾಚಾರವೇ ಆಗಿದ್ದಿತು ಈ ಬೆಚ್ಚು ನೀರ್ದಳಿಯುವ ರೂಢಿ ಇಂದಿಗೂ ಜಾರಿಯಲ್ಲಿದ್ದು 'ನಿವಾಳಿಸು' 'ನಿವಾಳಿ ತೆಗೆ' 'ದೃಷ್ಟಿತೆಗೆ' ಎಂದೆಲ್ಲ ಅದನ್ನು ಕರೆಯಲಾಗುತ್ತದೆ"[೨೮] ಎಂಬ ಅಭಿಪ್ರಾಯಪಟ್ಟಿದ್ದಾರೆ.

"ಬೆಚ್ಚು ನೀರೆಂದರೆ, ಮಕ್ಕಳ ಮೇಲೆ ಪರಿಣಮಿಸಬಹುದಾದ ಲೋಕದ ದೃಷ್ಟಿಬಾದೆ, ಪಿಶಾಚಿ ಪೀಡೆ ವಚನ ದೋಷಗಳನ್ನು ಬೆಚ್ಚಿಸಿ ಹೋಗಲಾಡಿಸಲೆಂದು ಪರಂಪರಾಗತ ವಿಶ್ವಾಸದಿಂದ ಎರಚುವ ಅದೊಂದು ಮಂತ್ರ ಪೂರಿತವಾದ ಬೇಳಂಜಿದ ನೀರು. ಆ ತರಹದ ನಡವಳಿ ಇಂದಿಗೂ ನಾಡಿನೊಳಗೆ ನೆಲೆಗೊಂಡಿರುವುದನ್ನು ನೋಡಬಹುದು"[೨೯]

"ಬಳಿಕ ಮೂವಟ್ಟಲೀಜೆಲು ಕುಯ್ಯಲು ದಿಟ್ಟ
ಬಳಿಬಾಯಿನ ತರ್ಪಣ ಜಪ
ಉಳಿದ ಲೌಕಿಕ ವೈದಿಕ ಶಾಂತಿಗಳನಂ
ದಿಳೆಗತಿಶಯದಿ ಮಾಡಿದರಂದು"(೪/೨೩)

ಮೂವಟ್ಟಲೀಜೆಲು ಎಂದರೆ ಪುಣ್ಯಾಹ ಮೊದಲಾದ ಶುಭಕಾರ್ಯಗಳಲ್ಲಿ ಮೂರು ಪಾತ್ರೆಗಳನ್ನಿಟ್ಟು ಮಾಡುವ ಒಂದು ಧಾರ್ಮಿಕ ವಿಧಿ ಎಂದು ಕರೆಯುವರು. ನಾಮಕರಣಶಾಸ್ತ್ರವನ್ನು ನೆರವೇರಿಸಿದರು.

ಈ ಹಿನ್ನೆಲೆಯಲ್ಲಿ ತಾಯಿಯಾದವಳು ತಾನು ಆರೋಗ್ಯವಾಗಿದ್ದು ಮಗುವನ್ನು ಧರ್ಮ ಸಂಪ್ರದಾಯದಲ್ಲಿ ಬೆಳೆಸಿ ಉತ್ತಮ ವ್ಯಕ್ತಿ ಮಾಡಲು ತ್ಯಾಗಿಯಾಗಿ ಬಾಳುತ್ತಾಳೆ. ತನ್ನ ಆಸೆಯನ್ನು ಮನಗನಲ್ಲಿ ಕಂಡು ತೃಪ್ತಿಪಡುತ್ತಾಳೆ.

**೭.೪.೩. ಸ್ತ್ರೀ ವರ್ಣನೆ, ವೇಶ್ಯಾವಾಟಿಕೆ**

'ಸ್ತ್ರೀರೂಪಮೆ ರೂಪಂ ಶೃಂಗಾರಮೇ ರಸಂ'... ಎನ್ನುವ ಕವಿ ನೇಮಿಚಂದ್ರನ ಮಾತು ಅದೆಷ್ಟು ಸತ್ಯ. ಶೃಂಗಾರ ರಸಕ್ಕೆ ಮೌಲ್ಯಬರಲು ಸ್ತ್ರೀವರ್ಣನೆ ಅಗತ್ಯ. ಸ್ತ್ರೀಯರ ರೂಪ ಲಾವಣ್ಯ, ಹೊಗಳಿಕೆ ಬರುವುದು ಶೃಂಗಾರರಸದಲ್ಲಿ. ಅದು ಶೃಂಗಾರರಸದ ಜೀವಂತಿಕೆ. ಕಾವ್ಯಕ್ಕೆ ಹೆಚ್ಚಿನ ಮೌಲ್ಯ ಒದಗುವುದು ಕೂಡ ಸ್ತ್ರೀ ವರ್ಣನೆಯಿಂದ. ಈ ತೆರನಾದ ಸ್ತ್ರೀ ವರ್ಣನೆಯನ್ನು ದೇಪರಾಜನ ಸೊಬಗಿನ ಸೋನೆಯಲ್ಲಿ ಕಾಣಬಹುದು.

"ತಳಿರಡಿಗೈಯಿಂದ ಪೊಂಬಾಳೆದೊಡೆಯಿಂದ
ಸೆಳೆನಡು ಎಳೆವಳ್ಳಿ ಮೈಯಿಂದ
ಬೆಳಗಾಯಿ ಮೊಲೆ ತಾವರೆ ಮೊಗದಿಂ ಬೇಜೊಂ
ದೆಳೆವನವೆನೆ ಹೆಂಗಳೆಸೆದರು"(೩/೨೨)

ಸ್ತ್ರೀಯರ ಅಂಗೈ ಚಿಗಿದ ಎಲೆಯಂತೆ, ತೊಡೆ ಬಾಳೆಯ ದಿಂಡಿನಂತೆ, ತೆಳ್ಳನೆಯ ಸೊಂಟ, ಬೆಳಕಾಯಿಯಂತಹ ಮೊಲೆ, ತಾವರೆಯಂತಹ ಮುಖ ಇದ್ದು ಇವರು ಚೆಲುವಾಗಿ ಕಂಗೊಳಿಸಿದರು. ಇಂತಹ ಚೆಲುವುಳ್ಳ ಸ್ತ್ರೀಯರ ಸಮೂಹ ನವವಸಂತದ ವನದಂತೆ ಇತ್ತು.

"ಅಲರ್ಗಣೆ ಕರ್ವುವಿಲ್ಗಳನೇಱೆ ಪರಿವೊಲು ಕ
ಣ್ಣಲರ್ಮಿಂಚು ಪುರ್ಬುವಿಲ್ಗಳನೇಱೆ
ಪೊಳಪೇಱೆ ಮೇಲ್ನೋಡಿ ನೆನೆಯೇಱೆಸಿದರು ಕೇ
ಳೆಳವೆಂಗಳೆಸವ ತಿಲಕಗಳ"(೩/೩೪)

ಸ್ತ್ರೀ ಕಣ್ಣಿನ ಹುಬ್ಬುಗಳು ಕಬ್ಬಿನ ಬಿಲ್ಲಿಗೆ ಹೂವಿನ ಬಾಣವನ್ನು ಊಡಿದಂತೆ ಕಣ್ಣು ಮಿಂಚಿನಂತೆ ಹೊಳಪೇರಿ ಕಂಗೊಳಿಸಿತು. ಹಣೆಯಲ್ಲಿಟ್ಟ ತಿಲಕ ಶೋಭಿಸುತಿತ್ತು.

"ಚೆಂದಾವರೆಯೊಳುದಕವ ತೀವಿಯೊರ್ವಳು
ಚಂದಳಿರ್ಗೈಯಿಂದರಸಗೊಲ್ದು
ಇಂದೆನ್ನೆರ್ದೆದಾವರೆಯ ನಿರ್ಮಳವಿಂ
ತೆಂದು ತೋರ್ಪೊಲು ಕಂಗೆಸದಳು"(೩/೫೭)

ಕೆಂಪನೆಯ ತಾವರೆಗೆ ನೀರನ್ನು ಹಂಚುವ ಸ್ತ್ರೀಯೊಬ್ಬಳು ಅರಸನನ್ನು ತಾನೇ ಪ್ರೀತಿಯಿಂದ ಕೈಚಾಚಿ ತನ್ನ ಹೃದಯ ನಿರ್ಮಲವಾದ ಈ ತಾವರೆಯಂತಿದೆ ಎಂಬಂತೆ ಕಂಡಳು.

"ನುಡಿಯಿಂಪು ಕಣ್ಮಲರಲರಂಬು ಮುಗುಳ್ನಗೆ
ವೆಡಗು ಬೆಳ್ದಿಂಗಳಿನುಗುರ್ಮಿಂಚು
ಬಿಡದೊಲಿದರಳ ಸರಿಯೊಲು ಸುರಿದರು ಕೇ
ಳ್ಮಡದಿಯರ್ನೀರ ನೃಪನ ಮೇಲೆ"(೩/೫೮)

ಮನ್ಮಥನ ಹೂಬಾಣದಂತೆ, ಬೆಳದಿಂಗಳ ತಂಪಿನಂತೆ, ಕೋಲ್ಮಿಂಚಿನಂತೆ, ಮುತ್ತಿನಂತೆ ಇರುವ ಚೆಲುವನ್ನು ಮೀರಿದಂತಹ ಮಡದಿಯರು ಮೆಲುವಾದ ಮಾತು, ಕಣ್ಣಿನ ನೋಟ, ಮುಗುಳ್ನಗೆಯ ಬೆಡಗುಗಳಿಂದ ಅರಸನನ್ನು ಆಕರ್ಷಿಸಿದರು.

"ಕಡೆಗೆಂಪಡರಿದ ಕಣ್ಬೆಳ್ದುಟಿ ಜೋಲ್ದಿರ್ದ
ನಿಡುಮುಡಿ ನನೆದ ನಿಱೆಗಳಿಂದ
ತಡಿಮೆಟ್ಟುವೆಳೆವೆಂಗಳೆಸೆದರು ಮದ ಮಧು
ವಡದಚ್ಚಗರಗಣಿಕೆಯರಂತೆ"(೩/೬೧)

ಕೆಂಪಾದ ತುಟಿ, ಜೋತುಬಿದ್ದ ಉದ್ದವಾದ ಜಡೆಗಳು, ಸೀರೆಯ ನಿರಿಗೆಗೆ ತಕ್ಕಂತೆ ಹೆಜ್ಜೆ ಹಾಕುತ್ತ ನಡೆವ ನಾರಿಯರು ಮದ ಮಧುವನ್ನು ಪಡೆದಂತ ಗಣಕೆಯರಂತೆ ಶೋಭಿಸಿದರು.

"ಕುಟಿಲದ ನೆಲೆ ಕುಹಕಗೊಳೊಗೆದೆಡೆಯಟ
ಮಟದ ಬೀಡಳಲ ತವರ್ಮನೆ
ದಿಟಗೆಟ್ಟ ತಾಣ ಮಚೆಯ ಮನೆ ಸಹಸದು
ಬ್ಬಟೆ ಹೆಂಗಳೆದೆ ಕೇಳಿನಿಯಳೆ"(೮/೨೭)

ಕುಟಿಲ, ಕುಹಕ, ಸುಳ್ಳುಗಳ ಸೃಷ್ಟಿಗೆ ತವರೆಂಬಂತಿರುವ ಹೆಣ್ಣಿನ ಮನಸ್ಸು ಅರ್ಥಮಾಡಿಕೊಳ್ಳುವುದು ಕಷ್ಟವೆಂದು ಕವಿ ತಿಳಿಸಿದ್ದಾನೆ. ಇಲ್ಲಿ ಹುಂಬುತನ ಸ್ವಭಾವದ ಹೆಣ್ಣಿನ ಹೃದಯದ ಚಿತ್ರಣವಿದೆ.

"ಕಂಡೆ ಕಾರ್ಮುಗಿಲೊಳು ಪೊಳೆವೆಳೆ ಮಿಂಚಿನ
ದಂಡಿಯೊಲ್ಕತ್ತಲೆ ವನದೊಳು
ಗೆಂಡೆ ಮೀನ್ಗಳ್ಪೊಳಪಿನ ಕಂಗಳೆಸೆವೆಳೆ
ವೆಂಡಿರ ತಂಡತಂಡವನಲ್ಲಿ"(೧೭/೫೫)

ಕತ್ತಲೆಯ ವನದಲ್ಲಿ ಸ್ತ್ರೀಯರು ತಂಡತಂಡೋಪಾದಿಯಲ್ಲಿ ಹೊರಟಾಗ ಮಳೆ ಮೋಡದಲ್ಲಿ ಕಾಣುವ ಕೋಲ್‌ಮಿಂಚಿನಂತೆ, ಕಣ್ಣುಗಳ ಗೆಂಡೆಮೀನಿಂತೆ ಶೋಭಿಸಿದರು. ಕವಿ ತನ್ನ ಪತ್ನಿಯನ್ನು ವರ್ಣಿಸುತ್ತ

"ಪಿಡಿನಡುವಿನ ನಲ್ಲಳೆ ಬಟ್ಟ ಮೊಲೆಯಳೆ
ಕುಡಿತೆಗಣ್ಣಳೆ ಕೊಂಕುಗುರುಳಳೆ
ನಿಡುಮುಡಿಯಳೆ ಅಂಚೆಯಡಿಯಳೆ ಕೈದಳ
ಪೊಡೆಯಸಿಯಳೆ ಮೆಲ್ಲಥಗೇಳ"(೧೮/೩)

ಅವಳು ನಡುಸಣ್ಣ, ಬಟ್ಟಮೊಲೆ, ಗುಂಗುರುಕೂದಲು, ಬೊಗಸೆಯಂತ ಅಗಲವಾದ ಕಣ್ಣು, ಹಂಸದಂತ ನಡಿಗೆಯುಳ್ಳವಳು, ಕೈ ಅಲುಗಿನಂತೆ ಚೆಲುವಾಗಿದ್ದಳು.

"ಉಲಿವಂದುಗೆಯ ಮೊಳಗುಗಳ ಸೋರ್ಮುಡಿ
ಗಳ ಮುಗಿಲ್ಗಳ ಕಡೆಗಂಗಳ
ಎಳೆ ಮಿಂಚುಗಳ ಪಲ್ಗದಿರ್ಸರಿಗಳ ಹೆಂಗ
ಳ್ಗುಳಿದರು ಮುಂಗಾರ ಸಿರಿಯಂತೆ"(೮/೬)

ಕಾಲ್ಗೆಜ್ಜೆಯ ಧ್ವನಿಯಿಂದ, ಸಡಿಲವಾದ ತಲೆಗೂದುಲುಗಳಿಂದ, ಕೋಲ್ಮಿಂಚಿನಂತ ಕಣ್ಣುಗಳಿಂದ ಶುಭ್ರವಾದ ಹಲ್ಲುಗಳಿಂದ ನಾರಿಯರು ಮುಂಗಾರು ಸಿರಿಯಂತೆ ಕಂಡರು.

"ಅಲರ್ಗಂಗಳೆ ನಿಡುಗಂಗಳ ತುಱುಗೆವೆ
ಯೊಳುಗಂಗಳ ಸೋಗೆಗಂಗಳ
ತಳಪಗಂಗಳ ಚಲ್ಲೆಗಂಗಳೆಸಲುಗಂಗ
ಳೆಳವೆಂಡಿರೆಸದರೆಲ್ಲೆಡೆಯೊಳು"(೨೧/೧೭)

ಚಿಕ್ಕಪ್ರಾಯದ ನಾರಿಯ ಕಣ್ಣುಗಳ ನೋಟವು ಹೂವಿನಂತೆ, ನೇರದೃಷ್ಟಿ, ವಾರೆನೋಟ, ಆಸೆಗಣ್ಣು, ಕನ್ನಡಿಯ ಹೊಳಪಿನಂತೆ, ಚಂಚಲವಾಗಿ ಹೊಳೆಯುವಂತೆ ಚೆಲುವಾಗಿದ್ದವು.

"ಮೊಳೆಮೊಲೆಯರು ಪರಳ್ಮೊಲೆಯರು ಬೆಳಗಾಯಿ
ಮೊಲೆಯರು ಮುಗುಳ ಪೊಂದಾವರೆ
ಮೊಲೆಯರು ತೆಂಗಾಯಿ ಮೊಲೆಯರಲ್ಲದ ಹೆಂ
ಗಳ ಕಾಣೆನವಳಾಳಿಯರೊಳು"(೨೧/೧೮)

ನಾರಿಯರ ಮೊಳೆ, ಹರಳು, ಬೆಳಕಾಯಿ, ಮುಗುಳ ಹೊಂದಾವರೆ, ತೆಂಗಿನಕಾಯಿಯಂತಹ ಹೋಲಿಕೆಯಿರುವ ಮೊಲೆಗಳ ವರ್ಣನೆ ಕುರಿತಿದೆ. ಈ ಮೂಲಕ ವಿವಿಧ ವಯೋಮಾನದ ಚೆಲುವುಳ್ಳ ಮಹಿಳೆಯರನ್ನು ಪ್ರತಿನಿಧಿಸುವಂತಿದೆ.

"ಕಾವವಡೆಯೊ ಕರ್ವುವಿಲ್ಲಣಿಯೊ ಪೊಸ
ಪೂವಿನೋಳಿಯೊ ಪೊಂಪುತ್ಥಳಿಗಳ
ದಾವಣೆಯೊ ಥಾಳಿಪ ಮಿಂಚಿನೇಳ್ಗೆಯ
ಲಾವಣೆಯೊ ಲತಾಂಗಿಯರೊಗ್ಗೊ"(೨೧/೧೯)

ಬಳ್ಳಿಯಂತೆ ಬಳುಕುವ ನಾರಿಯರು ಕಾವಲುಪಡೆಯಂತೆ, ಮನ್ಮಥನ ಬಾಣದಂತೆ, ಹೊಸ ಹೂ ಅರಸುವ ದುಂಬಿಗಳಂತೆ, ಬಂಗಾರದ ಪುತ್ಥಳಿಯಂತೆ, ಮಿಂಚಿನ ಲಾವಣ್ಯದಂತೆ ಸುಂದರವಾಗಿದ್ದರು.

ವಿಜಯನಗರ ಸಾಮ್ರಾಜ್ಯದಲ್ಲಿ ಅಲಂಕೃತಗೊಂಡ ನಾರಿಯರು, ಸಾಮಾನ್ಯ ಮಹಿಳೆಯರು ಎಂತವರನ್ನು ಆಕರ್ಷಿಸಿ ಮನಸೂರೆಗೊಳ್ಳುವಂತಿದ್ದರು. ಅವರ ಮಾತು, ನೋಟ, ಮುಗುಳ್ನಗೆಗಳಿಂದ ಅತಿಶಯವಾದ ಸೌಂದರ್ಯ ಹೊಂದಿದ್ದರು.

**ವೇಶ್ಯೆವಾಟಿಕೆ**

ಅಷ್ಟಾದಶ ವರ್ಣನೆಗಳಲ್ಲಿ ವೇಶ್ಯಾವಾಟಿಕೆಯ ವರ್ಣನೆಯು ಒಂದು. ಮಹಾಕಾವ್ಯ ಸಂಪ್ರದಾಯದಂತೆ ಸೊಬಗಿನ ಸೋನೆ ಕಾವ್ಯದಲ್ಲಿ ಕವಿ ವೇಶ್ಯೆಯ ಚಿತ್ರಣವನ್ನು ಪ್ರಾಸಂಗಿಕವಾಗಿ ವರ್ಣಿಸಿದ್ದಾನೆ. 'ವೇಶ್ಯೆ' ಎಂಬ ಪದವನ್ನು ಕವಿ "ಪಾಣ್ಸೆ, ಕುಟಿಲೆ, ಕುಲಟೆ, ಪ್ರಂಶ್ಚರಿ (ಹಾದರಗಿತ್ತಿ, ಗಂಡುಬೀರಿ), ಜಾರೆ" ಎಂದು ಬೇರೆ ಬೇರೆ ಹೆಸರಿನಿಂದ ಕರೆದು ಮತ್ತೊಂದೆಡೆ 'ಬೆದೆಗುಂಟಣೆ"(೧೯/೬೧) ಎಂಬುದಾಗಿ ಹೆಸರಿಸಿದ್ದಾನೆ. ಅಂದರೆ ವೇಶ್ಯೆಯರ ವರ್ತನೆಗಳಿಂದ ಪುರುಷರು ಎಚ್ಚರಿಕೆಯಿಂದ ಬಾಳಬೇಕೆಂದು ಸಂದೇಶವನ್ನು ಈ ಕೆಳಗಿನ ಪದ್ಯಗಳಲ್ಲಿ ವರ್ಣಿಸಿದ್ದಾನೆ.

"ಪಾವಿನ ಪುದುವೊಳ್ಳಿತು ಮದಕಳದಂ
ತಾವಳನೊಳು ಕೂಟವತಿಲೇಸು
ಭಾವಿಸೆ ಸಿಂಗದ ಕೆಳೆ ಸುಖ ಕುಲಟೆಯೊ
ಳೋವಿ ಬಾಳ್ವ ಬಲ್ಲಿದನಾರೊ"(೧೮/೮೪)

"ಉರಿವಗ್ನಿಯ ಪುಲಿಬಿಲಬಶರಭಗಂ
ಹ್ವರ ಬಿಸದ ಕಮ್ಮಡುವೊಕ್ಕು
ಇರಲಕ್ಕು ಪುಂಶ್ಚರಿಯಿಹ ಮನೆಯೊಳು ಬಾಳ
ಲರಿದರೆ ಘಳಿಗೆಯಂತಪ್ಪಗೆ"(೧೮/೮೫)

ಹಾವು, ಸಿಂಹ, ಹುಲಿಗಳಂತ ಅಪಾಯಕಾರಿ ಜೀವಗಳೊಂದಿಗೆ ನೆಮ್ಮದಿಯಾಗಿ ಇರಲೆಂದು ಯಾರತಾನೆ ಬಾಳುತ್ತಾರೆ. ಹುಲಿ, ಶರಭಗಳ ಗವಿಗಹ್ವರದಲ್ಲಿ ವಿಷ, ಅಗ್ನಿಯಂತ ಅಪಾಯಕರ ವಸ್ತುಗಳ ಜೊತೆಯಲ್ಲಿ ಎಚ್ಚರದಿಂದ ಜೀವಿಸಬಹುದು ಆದರೆ ಗಂಡುಬೀರಿಯಂತಹ ಜಾರೆಯೊಂದಿಗೆ ಅರೆಘಳಿಗೆಯೂ ಇರಲು ಸಾಧ್ಯವಿಲ್ಲ. ಇಂತವಳೊಂದಿಗೆ ಇದ್ದ ಬದುಕು "ಚೇಳು, ವೈರಿಗಳು, ಹೊಗೆತುಂಬಿದ ಮಾಳಿಗೆ ಮನೆಯಲ್ಲಿ ವಾಸಿಸುವ ರೀತಿಯಂತೆ ಆಗುತ್ತದೆ"(೧೮/೮೬) ಎಂದಿದ್ದಾನೆ.

ಅಂದಿನ ಕಾಲದಲ್ಲಿ ವೇಶ್ಯಾವಾಟಿಕೆಗೆ ಮಾನ್ಯತೆ ಇತ್ತು. ಹಾಗಾಗಿ ಪುರುಷರು ಮೋಸಕ್ಕೊಳಗಾಗದೆ ಎಚ್ಚರಿಕೆಯಿಂದ ಇರಲು ಕಾವ್ಯದ ಮೂಲಕ ಸಾರಿದ್ದಾನೆ.

**೭.೪.೪. ಬೇಡರು-ಬೇಟೆ**

ಬೇಟೆಯನ್ನು ಕಸುಬಾಗಿ ಮುಂದುವರಿಸಿಕೊಂಡುಬಂದ ಜನರನ್ನು ಬೇಡರೆಂದು ಕರೆದಿರಬೇಕೆನ್ನಿಸುತ್ತದೆ. ಸೊಬಗಿನ ಸೋನೆ ಕಾವ್ಯದಲ್ಲಿ ಬೇಡರನ್ನು ಕುರಿತು ಬಿಯದ, ಶಬರ, ಬ್ಯಾಡರು, ಪುಳಿಂದರು, ವನಚರ, ವ್ಯಾಧಾ, ಬೇಡ ಎಂಬ ಹೆಸರಿನಿಂದ ಕರೆಯಲಾಗಿದೆ. ರಾಜ ಬೇಟೆಗೆ ಹೊರಟಾಗ ಸಹಾಯಕವಾಗಿ ಬೇಡರು ಬೇಟೆಯಾಡುತ್ತಿದ್ದರು. ದಟ್ಟವಾದ ಕಾಡಿನಲ್ಲಿ ಕಾಡುಮೃಗಗಳನ್ನು ಬೇಟೆಯಾಡಿ ಮಾರಾಟ ಮಾಡಿ ತಮ್ಮ ಜೀವನ ಸಾಗಿಸುತ್ತಿದ್ದರೆನಿಸುತ್ತದೆ. ಹಾಗೆಯೇ ಹಂದಿ ಬೇಟೆಯನ್ನು ಬೇಡರು ಆಡುವ ಚಿತ್ರಣವನ್ನು ದೇಪರಾಜ ವರ್ಣಿಸಿದ್ದಾನೆ.

"ಪರಿವ ನೆತ್ತರ ಪೊನಲೊಳ್ಪೊಕ್ಕು ಮೂಗಿಟ್ಟು
ಸುಜುಕಿಟ್ಟು ಕುಡಿದು ಕೊಗ್ಗೆಸಜೊಳು
ಪೊರಳ್ದುದು ಬಳಲ್ಕೆಯಳಿಯಲಿಬ್ಬರಿಗೊಂಡು
ಮರಳ್ದೆದ್ದು ಪಂದಿ ನಿಂದುದು ಕೇಳ"(೧೨/೯)

ಹಂದಿಯು ಬೇಟೆಗಾರನನ್ನೇ ಹೆದರಿಸುವಂತೆ ಇತ್ತೆಂದು ಕವಿ ಕಲ್ಪನೆ.

**ಬೇಟೆ:** ಮಾನವ ಅನಾದಿಕಾಲದಿಂದ ಜೀವನೋಪಾಯಕ್ಕೆ ಬೇಟೆಯನ್ನಾಡುತ್ತ ಬಂದಿದ್ದಾನೆ. ನಂತರ ಹವ್ಯಾಸ, ಮನೋರಂಜನೆಗಾಗಿ ಬೇಟೆ ಆಡುತ್ತ ಬಂದಿದ್ದಾನೆ. ರಾಜರು ಬೇಟೆಯಾಡುವುದು ಮನೋರಂಜನೆಗಾಗಿಯೇ ಹೊರತು ಜೀವನೋಪಾಯಕ್ಕಾಗಿ ಅಲ್ಲ. ಬೇಡರು ತಮ್ಮ ವೃತ್ತಿಯಾಗಿ ಬೇಟೆಯನ್ನೇ ಅವಲಂಬಿಸಿದ್ದಾರೆ. ಬೇಡರು ರಾಜರಾಗಿ ಅರಣ್ಯ ಸಂಪತ್ತನ್ನು ಕಾಪಾಡಿರುತ್ತಾರೆ. ಮೃಗಗಳ ಹಾವಳಿ ತೀವ್ರವಾದಾಗ ಕೆಲವು ಸಂದರ್ಭಗಳಲ್ಲಿ ಬೇಡರು ತಮ್ಮನ್ನು ರಕ್ಷಿಸಬೇಕೆಂದು ರಾಜನ ಬಳಿ ಬಂದು ಬೇಡಿಕೊಳ್ಳುತ್ತಿದ್ದರು. ಕೂಡಲೇ ಅರಸ ಬೇಟೆ ಆಡಿ ಜನರನ್ನು ಕಾಪಾಡು ತ್ತಿದ್ದನು. ಅಷ್ಟಾದಶ ವರ್ಣನೆಗಳಲ್ಲಿ ಬೇಟೆಯ ವರ್ಣನೆಯೂ ಒಂದಾಗಿರುವುದರಿಂದ ಕೆಲವು

ಕವಿಗಳು ಕಾವ್ಯಗಳಲ್ಲಿ ಸಾಂಪ್ರದಾಯಿಕವಾಗಿ ಬೇಟೆಯನ್ನು ವರ್ಣಿಸಿರುತ್ತಾರೆ. ಹಾಗಾಗಿ ಸೊಬಗಿನ ಸೋನೆ ಕಾವ್ಯದಲ್ಲಿ ಅರಸ ಬೇಟೆಗೆ ಅರಣ್ಯಕ್ಕೆ ಹೊರಟ ಪ್ರಸಂಗವಿದೆ.

"ಇಂತಿರೆ ಸೌಂದರ ರಿಪುನೃಪಕುಲ ಕಾ
ಲಾಂತಕ ನೊಡ್ಡೋಲಗವಿತ್ತು
ಸಂತಸ ಮಿಗೆ ಬೇಂಟೆಕಾಜಿನೋರ್ವನು ಬೆಮ
ರಂತೊಡವುತಲಲ್ಲಿಗೈತಂದ"(೫/೩೯)

"ದೇವ ಚಿತ್ತೈಸು ಗಂಡಿಗಸಿಂಗವೊಂದೆಮ್ಮ
ಕಾವಲ ಹೊಲಕೈತಂದುದು
ಭಾವಿಸೆ ನಿನ್ನ ಕೂರ್ಗಣೆಗುಣಿಸಾಗಲು
ಭೂವರ ತಕ್ಕುದೆಂದುಸುರಿದ"(೫/೪೦)

ಕಾಶ್ಮೀರದ ಅರಸ ಸೌಂದರ ಅರಮನೆಯ ಸಭೆಯಲ್ಲಿದ್ದಾಗ ಬೇಟೆಗಾರನೊಬ್ಬನು ತನ್ನ ಕಾವಲಾಗಿದ್ದ ಹೊಲಕ್ಕೆ ಸಿಂಹ ಧಾವಿಸಿದೆ ನೀನು ಬಂದು ನಮ್ಮನ್ನು ರಕ್ಷಿಸು ಎಂದು ಬೇಡಿಕೊಳ್ಳುತ್ತಾನೆ. ಅರಸ ಬೇಟೆಗೆ ಕುದುರೆಯನ್ನೇರಿ ಹೊರಟನು ಬಿಲ್ಲು ಬಲೆಗಳ ಜೊತೆಗೆ.

"ಕೊಂಬು ಕೊಳಲು ಬೀರಣ ತಂಬಟ ಹರೆ
ಚೆಂಬಕ ಡವುಡೆ ತಿತ್ತಿರಿಗಹಳೆ
ಬೊಂಬುಳಿ ಡೋಳು ನಿಸ್ಸಾಳ ಬೊಬ್ಬೆಯ ದನಿ
ತುಂಬಿದುದಂದೆಣ್ದೆಸೆಯನು"(೫/೪೩)

ವಿವಿಧ ಆಯುಧಗಳಿಂದ ಬೇಡರ ಪರಿವಾರ ಬೇಟೆಗೆ ಸಹಕರಿಸಿದರು. ಆ ಬೇಡರು ಬೇಟೆಯಿಂದ ನಾನಾ ವಿಧದ ಪ್ರಾಣಿ ಪಕ್ಷಿ ವನಸಂಪನ್ಮೂಲಗಳನ್ನು ಸಂಗ್ರಹಿಸುತ್ತಿದ್ದನ್ನು ಕವಿ ವರ್ಣಿಸಿದ್ದಾನೆ.

"ತರುವಿಂಗಿ ಕಾಳ್ಬೆಕ್ಕು ಮುಂಗುರಿ ಮುಸುವಂದಿ
ದರಿಬೆಟ್ಟು ಗುರಿಗುಮ್ಮ ಮಿಗಗಳ
ಮರಬೆಕ್ಕು ಕುರಂಗಿ ತೋಳ ಸೀಳ್ನಾಯಿ ಕ
ತ್ತುರಿ ಮಿಗಗಳ ಪೊತ್ತೆಯ್ದಿದರಾಗ"(೧೪/೯)

ಬೇಡರು ಸೀಳಂಗಿ, ಕಾಡುಬೆಕ್ಕು, ಮುಂಗಸಿ, ಹಂದಿ, ತೋಳ, ಸೀಳ್ನಾಯಿಗಳನ್ನು ಹಿಡಿದು ತಂದರು.

"ನಿಲ್ಲದೆ ಗಿಳಿ ಗೀಜಗ ಕುಕಿಲಿಬ್ಬಾಯ
ಕಲ್ಲೆಡೆ ಗೌಜು ಕಕ್ಕರ ಸೋಜೆ
ಪುಲ್ಲಡೆ ಕಿಱುವಕ್ಕಿಗಳನುದುರ್ಚಿದರಲ್ಲಿ
ನೆಲ್ಲಿಕಾಯಿಗಳ ಚಲ್ಲಬಡಿದಂತೆ"(೧೧/೫೦)

"ಅಲ್ಲಲ್ಲಿ ಆನೆ ಕರಡಿ ಸಿಂಗ ಕಾಡ್ಕೋಣ
ಜಲ್ಲಿ ಮಿಗೆಂಟಡಿ ಮರೆ ಪಂದಿ

ಪುಲ್ಲೆ ಸಾರಗವೊಂಟೆ ಕಿಱುಮಿಗವುರುಳ್ದವು
ಯೆಲ್ಲೆಡೆ ಜವನ ನಡುವನೆಯಂತೆ"(೧೧/೫೧)

ನಾನಾ ಪ್ರಾಣಿಗಳ ಬೇಟೆಯಲ್ಲಿ ಒಂಟೆಯ ಹೆಸರು ಕೇಳಿಬರುವುದು ಅಪರೂಪವೆನಿಸುತ್ತದೆ.

"ಕಿಱುವಕ್ಕಿಯ ಬೆಂಗಲ್ಲಿ ಕೈತೂಕದ
ತೋಱುವಕ್ಕಿ ಪೆರ್ಬಕ್ಕಿ ನವಿಲ್ಗಳ
ತುಱುಗಿರ್ದ ಇಲಿಯೇಡಿ ಅಣಿಲಾವೆ ಪುಡಿಕೆಯ
ಪೊಱೆಯ ಬಿಯದರು ತಳರ್ದರು ಕೇಳ"(೧೧/೫೪)

ಚಿಕ್ಕ ಚಿಕ್ಕ ಪಕ್ಷಿಗಳು, ದೊಡ್ಡ ಪಕ್ಷಿಗಳು, ಇಲಿ, ಏಡಿ ಮುಂತಾದವುಗಳನ್ನು ಮಡಕೆಗಳಲ್ಲಿ ಸಂಗ್ರಹಿಸಿಕೊಂಡರು. ಸೊಬಗಿನ ಸೋನೆಯಲ್ಲಿ ವಿಕ್ರಮ ಹಂದಿ ಬೇಟೆಯನ್ನು ಆಡಿದ್ದರ ವರ್ಣನೆ ವಿಸ್ತಾರವಾಗಿದೆ.

"ನೋಡುತ ಕಿಗ್ಗಣ್ಣಿಂ ಜಸಗಂಪನ
ಕಾಡೆಕ್ಕಲ ಪಲ್ಮೊರೆದೆತ್ತಿ
ಈಡಾಡಿ ಬಿಲ್ಕೋಲ್ಗಳ ಪೆರ್ಬಂದಿಯ
ಕೋಡ ಪಿಡಿದೆತ್ತಿ ಕುಕ್ಕರಿಸಿದ"(೧೨/೧೫)

ಆ ಕಾಲದಲ್ಲಿ ಬೇಡರು ಕಾಡಿನಲ್ಲಿ ಬೇಟೆಯಿಂದ ಬಂದ ಪ್ರಾಣಿ ಪಕ್ಷಿಗಳನ್ನು ಮಾರಾಟ ಮಾಡುತ್ತಿದ್ದರು. ಜೊತೆಗೆ ಅವುಗಳ ವಸ್ತುಗಳನ್ನು ಮಾರುತ್ತಿದ್ದರು.

"ಮೃಗಗಳ ಮೃಗಮಾಂಸವ ಮೃಗಚರ್ಮವ
ಮೃಗದಂತವ ಮೃಗಶಿಶುಗಳ
ಮೃಗ ಮಸ್ತಕ ಮುತ್ತ ಮುಕ್ತಾ ಫಳರತ್ನವ
ಮಿಗೆ ಮಾಱುವರೆಲ್ಲೆಡೆಯಲ್ಲಿ"(೧೮/೨೨)

ಅವುಗಳೆಂದರೆ ಜಿಂಕೆಯ ಮಾಂಸ, ಚರ್ಮ, ದಂತ, ಮರಿಗಳು, ರತ್ನಗಳನ್ನು ಬೇಟೆಯಾಡಿ ಕೊಂಡು ಮಾರುತ್ತಿದ್ದರು.

"ನುಡಿವಕ್ಕಿಯ ನೆಲೆವಕ್ಕಿಯ ನಟಣೆಯ
ನಡೆವಕ್ಕಿಯ ಕುಣಿವಕ್ಕಿಯ
ಜಡವಕ್ಕಿ ಮೊದಲಾದ ಪಲವಕ್ಕಿ ಮಾಱುವ
ಮಡದಿಯರೊಪ್ಪವನೇನೆಂಬೆ"(೧೮/೨೪)

ಮಾತಿನಿಂದ ರಂಜಿಸುವ ಬೇರೆ ಬೇರೆ ಪಕ್ಷಿಗಳನ್ನು ಮಾರುವ ಬೇಡತಿಯರು ಚೆಲುವಾಗಿ ಕಂಡರು.

"ಲಾವುಗೆ ಗೌಜುಜಿವುಲಿವುಳ್ಳ ನಿಬ್ಬಾಯ
ಬಾವನ್ನ ಬನವಣ್ಣ ಬಾನಾಡಿ
ಪೀವಕಕ್ಕಱ ಸೋಱೆ ಮೆಳೆಗಿಳಿ ಕಾಡ್ಕೋಳಿ
ಪೂವೆಱೆಗಳ ಮಾಱುವರ ಕಂಡೆ"(೧೮/೩೪)

ಗಿಡುಗ, ಗಿಳಿ, ಗೌಜು, ಬಾನಾಡಿ, ಸರಲೆ, ಕಾಡ್ಕೋಳಿ ಮುಂತಾದ ಪಕ್ಷಿಗಳನ್ನು ಬೇಟೆಯಾಡಿ ಮಾರುತ್ತಿದ್ದರು ಎಂಬ ವಿಚಾರ ಕಾವ್ಯದಿಂದ ತಿಳಿದುಬರುತ್ತದೆ.

**೭.೪.೫. ಜೂಜು-ನೀತಿ**

ಮಹಾಭಾರತದಲ್ಲಿ ಜೂಜು ಬದುಕಿನ ವಿಧಾನವನ್ನು ಬದಲಾಯಿಸುವ ಆಟದಂತೆ ಕಂಡಿದೆ. ಮನುಷ್ಯ ತನ್ನ ಮನೋರಂಜನೆಗಾಗಿ ಸೋಲು ಗೆಲುವಿನ ಹವಣಿಕೆಗಾಗಿ ಜೂಜಾಡುತ್ತಾನೆ. ಇದು ಪ್ರಾಚೀನ ಕಾಲದಿಂದ ನಡೆದುಕೊಂಡು ಬಂದಿದೆ. ಕಾವ್ಯದ ಅಷ್ಟಾದಶ ವರ್ಣನೆಗಳಲ್ಲಿ ಜೂಜು ಒಂದಾಗಿದೆ. ಜೂಜು ಎಂದರೆ ಪಣವನ್ನಿಟ್ಟು ಆಡುವ ಆಟ, ಪಂದ್ಯವನ್ನು ಒಡ್ಡಿ ಆಡುವ ಆಟ, ಪಂಥದ ಆಟ ಎಂಬ ಅರ್ಥಗಳಲ್ಲಿ ವಿವರಿಸಬಹುದು. ಹಿಂದೆ ಜನರು ತಮ್ಮ ಬಾಳಿನ ಬೇಸರವನ್ನು ಕಳೆಯಲು, ಜೀವನವನ್ನು ಹಗುರಾಗಿಸಲು ಬಿಡುವಿನ ಸಮಯದಲ್ಲಿ ಕವಡೆ, ಪಗಡೆಯಂತಹ ಜೂಜುಗಳನ್ನು ಆಡುತ್ತಿದ್ದರು. ಯುವರಾಜರು ಜೂಜನ್ನ ಏಕಾಗ್ರತೆಯಿಂದ ವೀಕ್ಷಿಸುತ್ತಿದ್ದರು. ಅದು ಸೊಬಗಿನ ಸೋನೆಯಲ್ಲಿ "ವಿಕ್ರಮ ಜೂಜಾಡುವನವಧಾನ ತಪ್ಪದೆ" (೪/೪೪) ಎಂಬಲ್ಲಿ ಯುವರಾಜನ ಏಕಾಗ್ರತೆ ಜೂಜಿನಲ್ಲಿತ್ತು ಎನಿಸುತ್ತದೆ. ಜೂಜಿನಲ್ಲಿದ್ದವರು ಪಗಡೆ ಆಟದಲ್ಲಿ ಇಟ್ಟ ಪಣವು ಎರಡರಷ್ಟು, ಮೂರರಷ್ಟು, ನಾಲ್ಕರಷ್ಟು ಎಂದು ಮುಂದಿನ ಭವಿಷ್ಯದ ಬಗ್ಗೆ ಲೆಕ್ಕಿಸದೆ ಆಡುತ್ತಿದ್ದರು. ಅದರ ವರ್ಣನೆ ಇಂತಿದೆ.

"ಪಣವೇನೊಡ್ಡು ಪಾಸಂಗಿಯ ಡಾಳಿಸು
ಗಣಿಸು ಮುಂದಾಯವನಗಲ್ಚದೆ
ಎಣೆಯಿಡು ಸಾರಿಯ ದ್ವಿಗುಣ ತ್ರಿಗುಣ ಚತು
ರ್ಗುಣವೆಂದು ನೆತ್ತವಾಡುವರಲ್ಲಿ"(೧೮/೮)

ಪ್ರಮುಖವಾದ ಸಂಪತ್ತನ್ನು ಜೂಜಿಗೆ ಇಡುತ್ತಿದ್ದರು. ಹಾಗೆ ಮುಂದುವರಿದು

"ಮದವನು ಬಗಿದಡ್ಡಿಯ ತೆಗೆ ಸಾರಿಯ
ಕೆದಚೆಡು ಸೂಳೆಯ ಬಿಡು ಜೂಜ
ಒದಗಾಡು ಡೊಪ್ಪೆಯನೆಂದಲ್ಲಿನವರ
ತ್ನದ ರಾಸಿಗಳಿಗಚ್ಚಿಡುವರು"(೧೮/೯)

"ಇದಿರಚ್ಚಿಡು ಜಾಗರ ಕಳನಂದಿಯ
ಚದುರಜೆದೊಡಾನೆ ಕುದುರೆಯ
ಪದೆದಂದು ಗೆಲ್ವರೆಂಬರಿಗೀವ ನೃಪಸುತ
ರೊದವಿದ ಜೂಜುಗಟ್ಟೆಗಳಿರ್ದವು"(೧೮/೧೦)

ಜೂಜುಕಟ್ಟೆಗಳಿದ್ದು ಅಲ್ಲಿ ರಾಜಕುಮಾರರು ಪಾಲ್ಗೊಂಡು ಆನೆ, ಕುದುರೆಗಳನ್ನು ಗೆಲ್ಲುತ್ತಿದ್ದರು. ಜೂಜಿನಲ್ಲಿ ಗೆದ್ದವರಿಗೂ ಇವುಗಳನ್ನು ರಾಜಕುಮಾರರು ಕೊಡುತ್ತಿದ್ದ ವರ್ಣನೆಯಿದೆ. ಹೀಗೆ ಜೂಜಿನಲ್ಲಿ ಜೂಜಾಟವನ್ನು ಕುರಿತು ಈ ಕಾವ್ಯದಲ್ಲಿ ವಿವಿಧ ತೆರನಾಗಿ ವರ್ಣಿಸಿರುವುದನ್ನು ಕಾಣಬಹುದಾಗಿದೆ.

**ನೀತಿ:** ರಾಜಕುಮಾರರಿಗೆ ಧನುರ್ವಿದ್ಯೆಯನ್ನು ಕಲಿಸುವುದರ ಜೊತೆಗೆ ರಾಜನೀತಿಯನ್ನು ಹೇಳಿಕೊಡುತ್ತಿದ್ದಂತೆ ತೋರುತ್ತದೆ. 'ನೀತಿ' ಎಂಬ ನಾಮ ಪದವನ್ನು "ಒಯ್ಯುವಿಕೆ, ಮಾರ್ಗದರ್ಶನ, ಮುನ್ನಡೆಸುವಿಕೆ, ಒಳ್ಳೆಯ ನಡತೆ, ಧರ್ಮ, ನ್ಯಾಯ, ಒಳ್ಳೆಯ ಉಪದೇಶ, ಹಿತೋಕ್ತಿ, ರಾಜನೀತಿ, ಅರ್ಥನೀತಿ, ರಾಜ್ಯಾಡಳಿತ ತಂತ್ರ, ವಿವೇಕ, ಸಾರಾಸಾರ ವಿಚಾರ, ವಿವೇಚನೆ, ತಂತ್ರ, ಯುಕ್ತಿ, ಕಾರ್ಯನೀತಿ, ಧೋರಣೆ"[೨೦] ಮುಂತಾದ ರೀತಿಯಲ್ಲಿ ಅರ್ಥವನ್ನು ನೀಡಿದೆ. ಗುರುಹಿರಿಯರ ಮಾತು ನೀತಿಯುಕ್ತವಾಗಿರುತ್ತವೆ.

"ಗುರುವಿನಾಜ್ಞೆಯ ಶಿಷ್ಯನು ಪಿತನಾಜ್ಞೆಯ
ವರಸುತನೊಡೆಯನಾಜ್ಞೆಯ ಬಂಟ
ಪುರುಷನಾಜ್ಞೆಯ ಹೆಂಡತಿ ಮೀಜೆ ರೌರವ
ನರಕ ತಪ್ಪದು ಕೇಳೆಂದ"(೬/೬೫)

ಗುರು, ತಂದೆ, ಒಡೆಯ, ಗಂಡರ ಆಜ್ಞೆಗಳನ್ನು ಮೀರಿ ನಡೆಯುವ ಶಿಷ್ಯ, ಸುತ, ಬಂಟ, ಹೆಂಡತಿಯರ ಬದುಕು ನರಕದಂತಾಗುತ್ತದೆ. ಗುರುಹಿರಿಯರ ಮಾರ್ಗದರ್ಶನದಿಂದ ಬದುಕು ಸುಖಮಯವಾಗಿರಲೆಂದು ಕವಿ ಬಯಸುತ್ತಾನೆ. ತನ್ನ ಗತಕಾಲವನ್ನು ನೆನಪಿಸಿಕೊಂಡು

"ಇಂದಿರ ದೂರ್ವಾಸನಿಂದ ವಿಶ್ವಾಮಿತ್ರ
ನಿಂದ ಹರಿಶ್ಚಂದ್ರನು ಕೇಳ
ಸೌಂದರ ರೋಷಭಾಸ್ಕರನಿಂದ ಅಗಸ್ತ್ಯನಿಂ
ದಂದು ನಹುಷ ಕೆಟ್ಟುದನಜೆಯೆಯ"(೭/೨೧)

ದೂರ್ವಾಸನಿಂದ ಇಂದ್ರ, ವಿಶ್ವಾಮಿತ್ರನಿಂದ ಹರಿಶ್ಚಂದ್ರ, ಅಗಸ್ತ್ಯನಿಂದ ನಹುಷ ಕೆಟ್ಟ ಹಾಗೆಯೇ ರೋಷಭಾಸ್ಕರ ಮುನಿಯಿಂದ ಸೌಂದರರಾಜ ಹಾಳಾಗಿ ಹೋದನು. ರಾಜನಾದವನು ಋಷಿಮುನಿಗಳೊಂದಿಗೆ ಮತ್ಸರಕ್ಕೆ ಇಳಿದು ತಾನೂ ಹಾಳಾಗಿ ಸಾಮ್ರಾಜ್ಯವನ್ನು ಹಾಳುಮಾಡುತ್ತಾನೆ ಎಂಬುದನ್ನು ಕವಿ ಸೂಚಿಸಿದ್ದಾನೆ.

"ಗುರುವಿನೆಡೆಯ ಮಚ್ಚರ ಪತಿಯೆಡೆಯನಾ
ದರ ಪಡದವರೆಡೆಯಲಿ ವಾಸಿ
ತರುಣಿ ಕೇಳೊಡೆಯನೆಡೆಯುಲಿ ಗರ್ವ ಕುಂಭೀ
ನರಕವಿಹದ ಸುಖದಳಿವೆಂದ"(೧೦/೫೨)

ಶಿಷ್ಯ ಗುರುವಿನೊಂದಿಗೆ ಮತ್ಸರ, ಸತಿಪತಿಯೊಡನೆ ಹಾದರ, ಹಡೆದವರೊಂದಿಗೆ ಜಗಳ ತಪ್ಪಲ್ಲ ಆದರೆ ಒಡೆಯನೊಂದಿಗೆ ಗರ್ವಪಟ್ಟರೆ ಸುಖದಳಿವಾಗಿ ನರಕ ಪ್ರಾಪ್ತಿಯಾಗುತ್ತದೆ. ಇಲ್ಲಿ ಗುರು, ಪತಿ ಮತ್ತು ತಂದೆ ತಾಯಿಗಳು ಸ್ವಾರ್ಥಿಗಳಾಗಿರದೆ ತಮ್ಮ ಶಿಷ್ಯ, ಸತಿ, ಮಕ್ಕಳಿಗಾಗಿ ತಮ್ಮ ಬದುಕನ್ನೇ ತ್ಯಾಗ ಮಾಡಿರುತ್ತಾರೆ. ಇವರ ತಪ್ಪುಗಳನ್ನು ತಿಳಿದು ತಿದ್ದುತ್ತಾರೆ. ಅಂದರೆ, ಅರಸರ ಆಜ್ಞೆಗಳನ್ನು ಮೀರಬಾರದೆಂಬುದನ್ನು ತಿಳಿಸುತ್ತಾ ಗುರುಹಿರಿಯರ ಮಾತನ್ನು ಮೀರಿದರೆ ಆಗುವ ಪರಿಣಾಮ ಕುರಿತು ಎಚ್ಚರಿಸಿದ್ದಾನೆ.

"ಮಾನಿನಿ ಜಪತಪವ್ರತ ನೋಂಪಿ ದಯದಾನ
ವೇನ ನೆಗಳ್ದಿಡೆ ಫಲವೇನು
ನೀನಱೆ ಪತಿಯಾಣ್ಮ ಪಿತೃವಚನವ ಮೀಱೆ
ಜೇನುಂಡು ನೀರ್ಗುಡಿದವೊಲೆಂದ"(೧೦/೫೩)

ಪತ್ನಿ ಕೇವಲ ಜಪ, ತಪ, ವ್ರತ, ನೋಂಪಿ, ದಯೆ, ದಾನ ಇವುಗಳನ್ನು ತನ್ನ ಪಾಡಿಗೆ ತಾನು ಆಚರಿಸಿ ಪ್ರಸಿದ್ಧಿಗೆ ಬಂದರೆ ಫಲವಾದರೂ ಏನಿದೆ ಎಂದು ಪ್ರಶ್ನಿಸುತ್ತ ಇಂತಹ ಸತಿಯರು ಪತಿಯನ್ನು ಅರ್ಥಮಾಡಿಕೊಂಡು, ತಂದೆ ತಾಯಿಯರ ಹಿತವನ್ನು ಮೀರದೇ ಬಾಳಬೇಕೆಂದು ಹೇಳಿದ್ದಾನೆ. ಇಲ್ಲವಾದರೆ ಅವಳ ಬದುಕು ಬರೀ ವ್ರತಾಚರಣೆಯಲ್ಲಿ ಕಾಲ ಕಳೆದರೆ ಜೇನು ತಿಂದು ನೀರು ಕುಡಿದಂತಾಗುತ್ತದೆ. ಅಂದರೆ ಸತಿ ಪತಿ ಮತ್ತು ತಂದೆ ತಾಯಿಯರ ಆದರ್ಶಗಳನ್ನು ಕಡೆಗಣಿಸದೆ ಅವರೊಂದಿಗೇ ಬಾಳಬೇಕು ಎಂದಿದ್ದಾನೆ.

"ಪಡದರ ನುಡಿ ಹಿರಿಯರ ಮಾತು ಗುರುವಾಕ್ಯ
ಮೃಡನ ಮಾತೊಳು ಗೆಳೆಯರ ಸೊಲ್ಲು
ಒಡೆಯನ ವಚನ ಗಂಡನ ಮಾತು ಜೀವನ
ದೊಡನೊಕ್ಕಲೆಂದಱೆ ನೀನೆಂದ"(೧೦/೫೪)

ತಂದೆ ತಾಯಿ, ಗುರುಹಿರಿಯರು, ಶಿವ, ಆತ್ಮೀಯರ, ಒಡೆಯನ, ಗಂಡನ ಮಾತು ಜೀವನಕ್ಕೆ ಒಳ್ಳೆಯದೆಂದು ತಿಳಿಯಬೇಕೆನ್ನುತ್ತಾನೆ.

"ನೀನೆ ಗುರು ನೀನೆ ದೈವ ಗತಿ ಮತಿ
ನೀನೆ ಮಾತೆ ಪಿತನು ನೀನೆ
ನೀನಲ್ಲದೆ ಪೆಱರಿಲ್ಲಕೇಳ್"(೧೩/೪೭)

ದೈವ ಬಲವೊಂದಿದ್ದರೆ ಸಾಕು ಆ ಮೂಲಕ ಗುರು, ತಂದೆ, ತಾಯಿ, ಸಂಪತ್ತು ಎಲ್ಲವೂ ತಮ್ಮ ಪಾಲಾಗುತ್ತದೆ. ಇವರಿಲ್ಲದಿದ್ದರೆ ಅವನಿಗೆ ಗತಿಯೂ ಇಲ್ಲ ಮತಿಯೂ ಇಲ್ಲವೆನ್ನುತ್ತಾನೆ. ಮುಂದುವರಿದು, ಚಾಡಿಕೋರರ ಬಗ್ಗೆ ಎಚ್ಚರಿಕೆಯಿಂದ ಇರಬೇಕೆನ್ನುತ್ತಾನೆ.

"..... ಪಲ್ಬೀಲದೊಳಹಿ ತುದಿ
ವಾಲದೊಳ್ ಚೇಳ್ದೋಱೆಹವೆಂದು
ಮೇಲವ ಜಱಿದು ತಾಳ್ದರು ಪಿಸುಣರು ತುದಿ
ನಾಲಗೆಯೊಳ್ ಪಚ್ಚಪಸಿನಂಜ"(೧೨/೧೧೩)

ಎಚ್ಚರಿಕೆಯ ಮಾತುಗಳನ್ನು ಹೇಳುತ್ತಲೇ ಚಾಡಿಯನ್ನು ಹೇಳುತ್ತಾರೆ. ಇಂತವರಿಂದ ಪಾಠ ಕಲಿಯಬೇಕು.

"ಕಿವಿಗೀವರು ಕಂಗಳನೊಡನಿಂದ್ರಜಾ
ಲವ ತೋರ್ಪರ್ ತುದಿನಾಲಗೆಯಿಂದ
ರವಿಯನು ತಣ್ಣನೆ ಮಾಡಿ ಶಶಿಯನು ಬಿಸಿಮಾಡು
ವವಗಡೆಯರು ಕೊಂಡೆಯರು ಪ್ರಿಯೆ"(೧೩/೨೧)

ಅಸಾಧ್ಯವಾದುದನ್ನು ಸಾಧ್ಯವಾಗಿಸುವುದೆಂದು ಚಾಡಿಕೋರರು ಮಾತಿನಲ್ಲೆ ವ್ಯಕ್ತಪಡಿಸುತ್ತಾರೆ. ಆದರೆ ಅವರ ಕೈಯಿಂದ ಸಾಧಿಸಲು ಆಗದಿದ್ದಾಗ ಈ ರೀತಿ ವರ್ತಿಸುತ್ತಾರೆ. ಇಂತವರು ಎಂದಿಗೂ ಸುಮ್ಮನಿರಲಾರರು.

"ಪೆತ್ತವರೆಡೆಗೆ ಪೆಗೆಯಿಡುವರ್ ಕಿಚ್ಚಿಲ್ಲದೆ
ಪೊತ್ತಿಕ್ಕಿ ಪೊಗಸಲೆಣೆಸುವರು
ಬಿತ್ತುವರ್ ಕಿವಿಯಲ್ಲಿ ಬೆಳಸುವರೆದೆಯೊಳು
ಬಿತ್ತರವೇನೊ ಪಿಸುಣವಿದ್ಯ"(೧೩/೨೪)

ಹೆತ್ತವರನ್ನೂ ಬಿಡದೆ ಹೊಗಳುತ್ತ ವಿಷಯ ತುಂಬುವರು, ಮನಸ್ಸಿಗೆ, ಹೃದಯಕ್ಕೆ ಕಿಚ್ಚನ್ನು ಹಚ್ಚುವಂತ ಚಾಡಿಕೋರ ವಿದ್ಯೆಯಲ್ಲಿ ಪಳಗಿರುತ್ತಾರೆ. ಇವರು ಮಾತಿನಿಂದಲೇ ಅಸಾಧ್ಯವಾದುದನ್ನು ಸಾಧ್ಯ ಮಾಡಿ ತೋರುತ್ತಾರೆ.

"ಕೊಂಡೆಯರ್ ಕೊಲಲು ಕಾವವರಿಲ್ಲವೀ ಭೂಮಂಡಲದೊಳು"(೧೩/೨೫) ಇವರನ್ನ ನಂಬದಂತೆ ಇರಬೇಕಾದರೆ ಪೂರ್ವಾಪರ ತಿಳುವಳಿಕೆಯಿಂದ ಮಾತ್ರ ಸಾಧ್ಯ. ಅದಕ್ಕೆ ಕಳ್ಳ ಸುಳ್ಳರ ಒಡನಾಟ ನೊಣವಿನ ಬೋನದಂತೆ ಅಸಹ್ಯಕರವಾದುದು ಎಂದಿದ್ದಾನೆ.

"ಕಂಡಡೆ ಕೂಡಿ ಕಳ್ಳರ ಕಂಡಡುಸುರಿ ಮಾ
ರ್ಕೊಂಡರ ತೋಳೆ ಮಾಳೆತ್ತರ
ಉಂಡರಕ್ಕರು ನೊಣವಿನ ಬೋನಲೇಸಲ್ಲ
ಮಂಡೆಯ ಮಾಜೂಡುವ ಚಲ್ಲ"(೨೦/೩೨)

ಕಳ್ಳರೊಂದಿಗೆ ಸೇರಿ ಅವರಂತೆ ವರ್ತಿಸಿದರೆ, ಜೀವಿಸಿದರೆ ಅದು ವಿವೇಕ ಬಿಟ್ಟು ಹೇಸಿಗೆ ತಿಂದಂತೆ ಎಂಬ ಹೋಲಿಕೆಯಾಗುತ್ತದೆ.

"ಬಿಳಿಕೈವತ್ತೆರಡಕ್ಕರ ಪೋದಿಸಿ
ತಿಳುಪಿ ಷಡ್ರಸಗಳ ಕುಟುಕಿತ್ತು
ತಲೆಗೂಡಿನೊಳೊದವಿದರೆಯು ತಪ್ಪಿಪ
ಲ್ಗಳೆವುದು ಜಿಹ್ವೆಯೆಂಬ ಕೀರ"(೧೯/೪೦)

ಅದಕ್ಕೆ ವಿವೇಕಿಗಳಾಗಿ ಮಾತನಾಡಬೇಕು. ಅವಿವೇಕಿಯಾದರೆ ಮಾತಿನಿಂದ ಹಲ್ಲುಗಳು ಕಳೆದುಕೊಳ್ಳುವ ಸ್ಥಿತಿ ಬರುತ್ತದೆ.

"ದುಷ್ಟನ ದುರ್ವ್ಯಸನಿಯ ದುರ್‌ಹೃದಯನ
ರಿಷ್ಟನ ಕಾಮೋರಗನಿಂ
ದುಷ್ಟನಾದತಿ ಮೂರ್ಖನ ನುಡಿಸುವುದತಿ
ಕಷ್ಟ ಕೇಳ್ಸುಜನರ್ಗೆ ಜಸಗಂಪ"(೧೯/೪೨)

ಕೆಟ್ಟವರನ್ನು, ಕೆಟ್ಟ ವ್ಯಸನಿಗಳನ್ನು, ಕೆಟ್ಟ ಹೃದಯದವರನ್ನು, ಕಡುಮೂರ್ಖರನ್ನು ಪರಿವರ್ತನೆ ಮಾಡುತ್ತೇವೆನ್ನುವುದು ಅತಿ ಮೂರ್ಖತನವಾಗುತ್ತದೆ. ಅದಕ್ಕಾಗಿ ಕವಿ ದುಷ್ಟ ಜನರನ್ನು ತಿದ್ದುವುದು ಕಷ್ಟವೆಂದಿದ್ದಾನೆ.

"ಪಿಸುಣನ ಮತಿವಿಕಳನ ಪಾಪಿಯ ನಿ
ರಸನ ನಿಷ್ಠುರ ನಿರ್ದಯನನು
ವಿಷಯಾಂಧನ ವಿಕಟನ ವಾಕ್ಪುಸಿಯ ಸೊ
ಲ್ಲಿಸಿದಂಗೆ ಸಂತಾಪವವನೀಶ"(೧೯/೪೩)

ಚಾಡಿಕೋರರನ್ನು, ಮತಿವಿಕಳರಾದವರನ್ನು, ಪಾಪಿಗಳನ್ನು, ನಿರಾಸಕ್ತರನ್ನು, ನಿಷ್ಠುರ ನಿರ್ದಯಿಗಳನ್ನು, ವಿಷಯಾಂಧಕರನ್ನು, ವಿಕಟರನ್ನು, ಸುಳ್ಳುಗಾರರನ್ನು ಯಾರು ಸಹವಾಸ ಮಾಡುವರೋ ಅವರಿಗೆ ಸಂತಾಪ ಒದಗುತ್ತದೆ.

"ಘೋರಾಹಿಗೆ ಮದದಂತಿಗೆ ಕಾಹಿರ್ದ
ವಾರಣರಿಪುಗೆ ತರಕ್ಷುಗೆ
ಕ್ರೂರರಿಗೆಡರಡಸಿದಡೆ ವಿವೇಕಿ ವಿ
ಚಾರಿಸಲಾಗದು ಜಸಗಂಪ"(೧೯/೪೪)

ಅದಕ್ಕಾಗಿ ಕ್ರೂರಿಗಳಿಗೆ, ದುರಾಚಾರಿಗಳಿಗೆ ಕೇಡಾದರೆ ವಿವೇಕವಂತರು ವಿಚಾರಿಸಬಾರದೆಂಬ ಸಲಹೆಯನ್ನು ನೀಡಿದ್ದಾನೆ.

"ನುಡಿಗೇಳದ ಮಗನಿಹಪರ ಸುಖತರು
ಕೊಡಲಿಕೂರದ ನಂಟನೆ ಪಗೆ
ಎಡಗಾರ್ಗದ ಬಂಟನೆ ವಿಷ ನೋಯಿಪ
ಮಡದಿಯೆ ನರಕ ನಲ್ಲಳೆ ಕೇಳ"(೧೩/೪೮)

ಅಂದರೆ ಮಾತುಕೇಳದ ಮಗ ತಂದೆಗೆ ಇಹಪರದಲ್ಲಿಯೂ ಸುಖ ಬಯಸುವುದಿಲ್ಲ, ಪ್ರೀತಿ ವಿಶ್ವಾಸವಿಲ್ಲದ ನಂಟನೇ ಶತ್ರು, ಆಪತ್ತಿಗಾಗದ ಬಂಟನೇ ವಿಷ. ಗಂಡನನ್ನು ಹಿಂಸಿಸುವ ಪತ್ನಿಯೇ ನರಕ ಎನ್ನುತ್ತಾ ವ್ಯಕ್ತಿಯ ಬದುಕಿನಲ್ಲಿ ಮಗ, ಮಡದಿ, ನೆಂಟ, ಬಂಟರು, ಚೆನ್ನಾಗಿದ್ದರೆ ಜೀವನ ಸುಖವಾಗಿರುತ್ತದೆ. ಇಲ್ಲವಾದರೆ ಇವರು ವಿರೋಧಿಗಳಾದರೆ ನರಕದ ಬಾಳು ತಪ್ಪಿದ್ದಲ್ಲ.

"ಬೈದರೆ ಕಿಚ್ಚಳಿವುದೆ ಜಱದಜೆ ಶಶಿ
ಮೈದಂಪಿಳಿವುದೆ ಪಳಿಯೆ ರವಿ
ಕೈದೆಗವನೆ ಖಳರೆನೆ ಸುಜನರ್ಕಳು
ಮೈದೆಗವರೆ ತಮ್ಮ ಗುಣದಿಂದಾ"(೧೩/೫೪)

ಕೆಟ್ಟವರು ಒಳ್ಳೆಯವರನ್ನು ನಿಂದಿಸಿದರೂ ಒಳ್ಳೆಯ ಗುಣವುಳ್ಳವರು ಸೂರ್ಯ, ಚಂದ್ರ, ಬೆಂಕಿಯಂತೆ ಪ್ರಕಾಶಿಸುತ್ತಾರೆ. ಶಾಂತಚಿತ್ತವುಳ್ಳವರ ವರ್ತನೆ ಕುರಿತು ಕವಿ ನಿಲುವು

"ಇಱಿದರೆ ಪುಸಿಯಂಬರು ಬಿಡದಳಲ್ಚಿತಾ
ಮಱವರು ವಿಷವಿಟ್ಟವರೊಳು
ಕರೆದಾಳು ಪೆಱರವಗುಣವನು ಬಿಟ್ಟು ಮೆಱೆ
ವರು ಶಾಂತರು ತಮ್ಮ ಸುಗುಣವ"(೧೩/೫೫)

ದುಷ್ಟರ ದುರ್ಗುಣವನ್ನು ಮತ್ತೆ ಮತ್ತೆ ನೆನಪಿಸಿಕೊಳ್ಳದಿರುವುದೇ ಲೇಸು.

"ಕಣ್ಣಿಳಿದಂ ಕಾಣ್ಬನೆ ಸೊಡರ್ಬೆಳಪುದೆ
ಯೆಣ್ಣೆಯಿರ್ಪಜಿತಿರೆ ದೆಸೆಗೆಟ್ಟ
ಹೆಣ್ಣಿಗೆ ಪತಿವಿರಹಿತ ಮತಿ ತೋರ್ಕುಮೆ..."(೧೬/೨೫)

ಕಣ್ಣು ಇಲ್ಲದವನ ನೋಟ, ಎಣ್ಣೆಯಿಲ್ಲದ ದೀಪ, ಕತ್ತಲೆಯಾಗಿರುವಂತೆ ದಿಕ್ಕುದೆಸೆ ಇಲ್ಲದ ಸತಿಗೆ ಮತಿ (ಬುದ್ಧಿ) ತೋರುವುದಾದರು ಹೇಗೆ ಸಾಧ್ಯ ಅಂದರೆ ಪತಿ ಸತಿಯರ ಸಾಮರಸ್ಯದಿಂದ ವಿವೇಕವಂತರಾಗಿ ಬಾಳುವರೆಂಬ ಆಶಯವನ್ನು ಹೊಂದಿದೆ.

"ಮಾಯೆಗೆ ಮಕ್ಷುಕ ಶಿಶು ಬುದ್ಧಿವೇಳ್ಪುದೆ
ತಾಯೆ ಕೇಳ್ ತ್ರಿದಶಮಂತ್ರಿಗೆ ಬಡ
ಆಯವಾರವ ಬೇಡುಂಬ ಛಾಂದಸ ಪಾರ್ವ
ಜೋಯಿಸ ಪೇಳ್ವನೇ ಪೇಳೆಂದ"(೧೬/೨೭)

ಸಮಾಜದ ಅತ್ಯಂತ ಕೆಳಸ್ತರದಲ್ಲಿದ್ದವರು ಉನ್ನತ ಸ್ಥಾನದಲ್ಲಿರುವವರಿಗೆ ಬುದ್ಧಿ ಹೇಳಲು ಸಾಧ್ಯವೇ ಎಂಬುದನ್ನು ಮಾಯೆಗೆ ನೊಣ, ದೇವಪದವಿ ಹೊಂದಿದ ಮಂತ್ರಿಗೆ ಬಡ ಆಯಗಾರ, ವೇದಾಧ್ಯಯನ ನಿರತ ಬ್ರಾಹ್ಮಣನಿಗೆ ಬಡವನಾದ ನಿರಕ್ಷರಿ ಬ್ರಾಹ್ಮಣ ಏನು ತಾನೇ ಹೇಳಲು ಸಾಧ್ಯ. ಅಂದರೆ ಸಾಮಾನ್ಯ ಜನರ ವಿವೇಕ ಅಸಾಮಾನ್ಯರನ್ನು ತಿದ್ದಲು ಸಾಧ್ಯವಾಗುವುದಿಲ್ಲ ಎಂಬ ಆಕ್ಷೇಪವನ್ನು ಕವಿ ತಾಳಿದ್ದಾನೆ. ಆದರೆ ವಿವೇಕ ವಯೋಮಾನಕ್ಕೆ ಸಂಬಂಧಿಸಿದ್ದಲ್ಲ. ಅದು ಬುದ್ಧಿಗೆ ಸಂಬಂಧಿಸಿದೆ.

"ಪಗೆಯರ ಕೆಳೆಮಾಳ್ಪುದು ಕೆಳೆಯರನಾಗ
ಪಗೆಮಾಳ್ಪುದು ಮೇಣು ಹರಣವ
ತೆಗೆವುದು ಪೋಪಸುವನು ನಿಲಿಪುದು ನಾ
ಲಗೆಯಲ್ಲದನ್ಯವಿಲ್ಲವನೀಶ"(೧೯/೩೯)

ಶತ್ರುಗಳ ಗೆಳೆತನ, ಗೆಳೆಯರ ಹಗೆತನ ಮತ್ತೆ ಪ್ರಾಣ ತೆಗೆಯುವುದು ಪ್ರಾಣ ಉಳಿಸುವುದು ನಾಲಗೆಯಲ್ಲದೆ ಬೇರೆ ಏನಿಲ್ಲ ಅಂದರೆ ಮಾತು ಬಲ್ಲವ ಮಾಣಿಕ್ಯ ತಂದ ಮಾತು ಅರಿಯದವ ಜಗಳ ತಂದ ಎಂಬುದನ್ನು ಕವಿ ತಿಳಿಸಿದ್ದಾನೆ.

**ಸ್ತ್ರೀ ಸಹವಾಸ:** ದುಷ್ಟ ಹೆಂಡತಿಯ ಬಾಳು ಅಪಾಯಕರವಾದದ್ದು, ಅವಳೊಂದಿಗೆ ಬಾಳಿದ ಪುರುಷನ ಅನುಭವಗಳನ್ನು ಕವಿ ನೀಡಿರುವ ಹೋಲಿಕೆಗಳು ಮುಖ್ಯವಾಗಿವೆ.

"ಅವಳಿಂದಲಮಕ್ಕಟ ಪಗೆ ಪೊಲ್ಲಮೆ
ಯವಳಿಂದಲವಗೆ ಬೇರ್ಬಿಸವುಂಟೆ
ಅವಳಿಂದಲವಗೆ ಪೆರ್ಮಾಜಿಯಿನ್ನೊಂದುಂಟೆ
ಅವಳಿಂದಲವಗೆ ಬಹುವ್ಯಾಧಿ"(೧೮/೮೨)

ಪ್ರಿಯ ಹೆಂಡತಿಯ ಹಗೆತನದಿಂದ ಆದ ಅನುಭವ ಅವನಿಗೆ ಬೇರೆ ವಿಷವೆಂಬುದೇ ಇಲ್ಲ, ಇವಳನ್ನು ಬಿಟ್ಟರೆ ಹೆಮ್ಮಾರಿ ಮತ್ತೊಬ್ಬಳಿಲ್ಲ ಇವಳೇ ಅವನಿಗೆ ಬಹುವ್ಯಾಧಿಯಾಗಿರುತ್ತಾಳೆ.

ಇಂತಹ ದುಷ್ಟ ಹೆಂಡತಿಯನ್ನು ಶತ್ರು, ವಿಷ, ಹೆಮ್ಮಾರಿಯಂತಹ ಹಲವು ರೋಗಗಳಿಗೆ ಹೋಲಿಸಿದ ಪರಿ ವಿಚಿತ್ರವಾಗಿದೆ.

"ಹಜೆಯದ ಶೂಲೆಯಕ್ಕಟರಿಷ್ಟರಜೆಯದ
ಬಱುಬೇನೆ ಕೆಡದುರ್ವಿದೆರ್ದೆಗಿಚ್ಚು
ಪೊಱಗಿಹ ರುಜೆಯಳಲ್ದೊಡೆಗಿಕ್ಕಿದ ಪಜೆ
ವಜೆಗೋಲು ದುಷ್ಟಪೆಂಡತಿ ಸುತ"(೧೮/೮೩)

ವಾಸಿಯಾಗದ ಕಾಯಿಲೆ, ಆತ್ಮೀಯರಿಗೂ ತಿಳಿಯದ ಕಷ್ಟ, ರೋಗದ ಬಾಧೆ, ಹೃದಯಂತರಾಳದ ದ್ವೇಷ, ನದಿಯಲ್ಲಿ ಹರಿಗೋಲನ್ನು ತೊರೆದು ಈಜುವವನಂತೆ ಈ ರೀತಿಯ ಹೋಲಿಕೆಗಳಂತೆ ದುಷ್ಟ ಹೆಂಡತಿ ಮತ್ತು ದುಷ್ಟ ಮಕ್ಕಳು ಇರುತ್ತಾರೆ

"ಪಾವಿನ ಪುದುವೊಳ್ಳಿತು ಮದಕಳದಂ
ತಾವಳನೊಳು ಕೂಟವತಿಲೇಸು
ಭಾವಿಸೆ ಸಿಂಗದ ಕೆಳೆಸುಖ ಕುಲಟೆಯೊ
ಳೋವಿ ಬಾಳ್ವ ಬಲ್ಲಿದನಾರೊ"(೧೮/೮೪)

ಹಾವಿನ ಸಹಸವಾಸವಾದರು ಲೇಸು, ಸಿಂಹದ ಗೆಳೆತನವಾದರೂ ಸರಿಯೆ ಆದರೆ ಕುತಂತ್ರ ಹೂಡುವವಳ ಸೊಕ್ಕು ಗರ್ವದಿಂದ ಕೂಡಿರವವಳ ಜೊತೆಯಲ್ಲಿ ಯಾರು ತಾನೆ ಪ್ರೀತಿಯಿಂದ ಬಾಳುವರು ಯಾರಿದ್ದಾರೆ ಎಂದಿದ್ದಾನೆ.

"ಉರಿವಗ್ನಿಯ ಪುಲಿಬಿಲಬಶರಭ ಗಂ
ಹ್ವರ ಬಿಸದ ಕಮ್ಮಡುವೊಕ್ಕು
ಇರಲಕ್ಕು ಪುಂಶ್ಚರಿಯಿಹ ಮನೆಯೊಳು ಬಾಳ
ಲರಿದರೆ ಘಳಿಗೆಯಂತಪ್ಪಗೆ"೧೮/೮೫)

ಗಂಡು ಬೀರಿಯಂತ ಹಾದರಗಿತ್ತಿಯಂತವಳೊಂದಿಗೆ ಬಾಳಲು ಇಚ್ಚಿಸಿದರೆ ಒಂದು ಘಳಿಗೆಯೂ ಇರಲು ಸಾಧ್ಯವಿಲ್ಲ. ಆದರೆ ಹುಲಿ, ಶರಭ, ಉರಿವ ಬೆಂಕಿಯ, ಗವಿಗವ್ವರಗಳಲ್ಲಿ ವಿಷದ ಮಡುವಿನಲ್ಲಿ ಸ್ವಲ್ಪ ಹೊತ್ತು ಇರಬಹುದು. ಮತ್ತೆ ವೇಶ್ಯೆಯೊಂದಿಗಿನ ಬಾಳು ಒಳ್ಳೆಯದಲ್ಲ ಎಂಬುದನ್ನು ಈ ಪದ್ಯದಲ್ಲಿ ತಿಳಿಸಿದ್ದಾನೆ.

"ಪಗೆಯೊಳು ಕೆಳೆ ಬಾಳ್ದವರುಂಟೆ ಚೇಳಿನ
ಪಗದೊಳು ಬಿದ್ದು ಸುಖಿಪರುಂಟೆ
ಪೊಗೆಗೊಂಡ ಮಾಳಿಗೆಯೊಳು ಮಲಗಿದರುಂಟೆ
ಸೊಗಸುಂಟೆ ಜಾರೆಯೊಳ್ದನ ಬಾಳು"(೧೮/೮೬)

ವೈರತ್ವದಿಂದ ಜೊತೆಗಿರಲು ಸಾಧ್ಯವಿಲ್ಲ. ಅದು ಚೇಳಿನೊಂದಿಗೆ ಇದ್ದ ಹಗೆತನದಂತೆ, ಹೊಗೆ ತುಂಬಿದ ಮಾಳಿಗೆ ಮನೆಯಲ್ಲಿ ನಿದ್ರಿಸಿದವರಿದ್ದಾರೆಯೇ ಎಂದು ಪ್ರಶ್ನಿಸುತ್ತ ಕವಿ ವೇಶ್ಯೆಯನ್ನು ಕಟ್ಟಿಕೊಂಡು ಸುಖಿಸಲು ಸಾಧ್ಯವಿಲ್ಲ ಎಂದಿದ್ದಾನೆ.

"ಹೆಂಗಳ ಕುಟಿಲಕೃತ್ಯದ ಚಿತ್ರವಿಸ್ತರ
ದಂಗವನಾವಂಗೆ ಗೆಲಲಕ್ಕು
ಪಿಂಗದೆ ಮಗ್ಗುಲೊಳ್ಕೆಳೆಬಾಳ್ವ ಪೆಣ್ಮಾರಿ
ನುಂಗುವದೇಗೆಂದಜಿವನಾರೊ"(೨೦/೬೦)

ಹೆಣ್ಣಿನ ಕುಟಿಲ ಕೃತ್ಯವನ್ನು ಗೆಲ್ಲುವುದು ಯಾರಿಂದ ತಾನೆ ಸಾಧ್ಯ ಜೊತೆಯಲ್ಲೆ ಬಾಳುವ ನಾರಿ ಮಾರಿಯಾಗಿ ಅವನನ್ನೇ ಮುಳುಗಿಸಿದರೆ ಏನೆಂದು ತಿಳಿಯವುದು ಎಂಬ ಭಾವನೆಯು ಮನೆಯ ನಾರಿ ಕಳುವೊಡೆ ತಾಯಿಯ ಹಾಲು ನಂಜಾದರೆ ಇನ್ನಾರಿಗೆ ದೂರುವೆ ಎಂಬ ಬಸವಣ್ಣನವರ ಉಕ್ತಿಯನ್ನು ಅನುಸರಿಸಿದಂತಿದೆ.

"ಅಜಿವಡವುದುವಂಜನದಿಂದ ನಿಧಿ ಬಿಲ
ವಜೆಯಿಹ ವಸ್ತು ದೀವಿಗೆಯಿಂದ
ಸಜೆಯೆದೆಯಹ ಹೆಂಗಳಂತಸ್ತವಾವನಿಂ
ದಜಿವಡಬಲ್ಲುದಂಗಜರೂಪ"(೨೦/೬೨)

ಅಂಜನದಿಂದ ತಿಳಿವನ್ನು ದೀವಿಗೆಯಿಂದ ಬೆಳಕನ್ನು ಪಡೆಯುತ್ತೇವೆ. ಆದರೆ ಸ್ತ್ರೀಯ ಹೃದಯಂತರಂಗವನ್ನು ಯಾರಿಂದ ತಾನೆ ತಿಳಿಯಲು ಸಾಧ್ಯ ಎಂಬ ಮಾತುಗಳು ಕವಿಯ ಅನುಭವದ ನುಡಿಗಳಾಗಿವೆ ಎನ್ನಿಸುತ್ತದೆ.

ಸಮಾಜದಲ್ಲಿ ಕಳ್ಳರು, ಸುಳ್ಳುಗಾರರು, ಚಾಡಿಕೋರರು, ವಂಚಕರು, ಕಡುಮೂರ್ಖರು, ಅವಿವೇಕಿಗಳು, ನಿರಾಸಕ್ತರು, ನಿರ್ದಯಿಗಳು, ದುಷ್ಟರು, ದುರ್ವ್ಯಸನಿಗಳು, ದುರಾಚಾರಿಗಳು, ಪಾಪಿಗಳು, ಹಾದರಗಿತ್ತಿಯರು, ವೇಶ್ಯೆಯರು ಇರುತ್ತಾರೆ. ಹೀಗಾಗಿ ಇಂತವರ ಸಹವಾಸದಿಂದ ದೂರ ಇರಬೇಕೆಂದು ಹೆಂಡತಿ, ಮಕ್ಕಳು, ಶಿಷ್ಯರು, ನಂಟರು, ಸೈನಿಕರು ಇವರೆಲ್ಲರೂ ಗುರುಹಿರಿಯರ ಮಾರ್ಗದರ್ಶನದಲ್ಲಿ ಉತ್ತಮರಾಗಿರಬೇಕೆಂಬುದು ಒತ್ತಾಸೆಯಾಗಿದೆ. ನೀತಿವಂತರಾಗಿ ಬಾಳಿದರೆ ವ್ಯಕ್ತಿ ಸ್ವರ್ಗ ಸುಖವನ್ನು ಕಾಣುತ್ತಾರೆ. ಅನೀತಿವಂತರಾಗಿ ಬಾಳಿದರೆ ನರಕದಂತಹ ದುಃಖ ಪಡಬೇಕಾಗುತ್ತದೆ ಎಂದು ಕವಿ ಮಾರ್ಮಿಕವಾಗಿ ನೀತಿಯನ್ನು ಹೇಳಿದ್ದಾನೆ.

ವಿಜಯನಗರ ಅರಸರ ಕಾಲದಲ್ಲಿ ಹಂಪಿಯ ಸುತ್ತ ಊರುಗಳು ಪ್ರಕೃತಿ ಸಂಪತ್ತಿನಿಂದ ಕೂಡಿದ್ದವು. ಅಲ್ಲಿ ಕೆರೆ, ತೊರೆ, ಕಾಲುವೆ, ಉದ್ಯಾನವನಗಳಿಂದ ಕಣ್ಮನಗಳಿಗೆ ಆನಂದವನ್ನು ಉಂಟುಮಾಡುವಂತಿದ್ದವು. ಅಲ್ಲಿ ನಾನಾ ಜಾತಿ, ವೃತ್ತಿಗಳಿಗೆ ಸಂಬಂಧಿಸಿದ ಕೇರಿಗಳಿದ್ದವು. ಅಲ್ಲಿ ಬೇಡರ ಕೇರಿಗಳು ಪ್ರತ್ಯೇಕವಾಗಿದ್ದವು. ಸೂಳೆಗೇರಿಗಳು ಶೃಂಗಾರದ ಪೇಟೆಯಂತಿದ್ದವು. ಪಟ್ಟಣಗಳ ಸುತ್ತ ಕಬ್ಬಿನ ತೋಟ, ತುಂಬಿದ ಕೆರೆ, ಕೊಳ, ಮಡು, ತೆಂಗು, ಅಡಿಕೆ, ಫಲಭರಿತ ಮರಗಳು ಇನ್ನು ಮುಂತಾದವುಗಳಿದ್ದು, ವ್ಯಾಪಾರ ವಹಿವಾಟಿಗೆ ಪಟ್ಟಣ ಕೇಂದ್ರವಾಗಿದ್ದವು. ಗಂಡು ಮಗುವನ್ನು ಹೆತ್ತ ತಾಯಿಯರನ್ನು ವಿಶೇಷವಾಗಿ ಆದರಿಸುತ್ತಿದ್ದರು. ಹಾಗೆಯೇ ಆ ಮಕ್ಕಳನ್ನು ಉತ್ತಮರನ್ನಾಗಿ ಮಾಡಲು ಪ್ರಾಮುಖ್ಯತೆ ನೀಡಿದ್ದರು. ಸ್ತ್ರೀಯನ್ನು ಹಲವು ಉಪಮೆಗಳೊಂದಿಗೆ ವರ್ಣಿಸಿ ಅವಳ ಚೆಲುವು, ಸೊಗಸನ್ನು ಕವಿ ವ್ಯಕ್ತಪಡಿಸಿರುವುದನ್ನು ಕಂಡುಕೊಳ್ಳಲಾಗಿದೆ. ವೇಶ್ಯಾವಾಟಿಕೆ ಪ್ರಚಲಿತವಿದ್ದು ಇದರಿಂದ ಪುರುಷರು ಮೋಸಕ್ಕೊಳಗಾಗದೆ

ಎಚ್ಚರಿಕೆಯಿಂದಿರಲು ಸೂಚಿಸಿರುವುದು ಕವಿಯ ವಿಶೇಷ ಕಾಳಜಿ ಎನ್ನಬಹುದು. ಬೇಡರು ತಮ್ಮ ವೃತ್ತಿಯನ್ನು ಬೇಟೆಯನ್ನಾಗಿ ಮಾಡಿಕೊಂಡು ಪ್ರಾಣಿ, ಪಕ್ಷಿ, ವನ, ಸಂಪನ್ಮೂಲಗಳನ್ನು ಸಂಗ್ರಹಿಸಿ ವ್ಯವಹಾರಿಕ ಬದುಕನ್ನು ಸಾಗಿಸುತ್ತಿದ್ದರು. ಜೂಜು ಕಟ್ಟೆಗಳಿದ್ದು ಅಲ್ಲಿ ರಾಜಕುಮಾರರು ಪಾಲ್ಗೊಂಡು ಆನೆ ಕುದುರೆಗಳನ್ನು ಗೆಲ್ಲುತ್ತಿದ್ದರು. ಸಮಾಜದಲ್ಲಿ ಕಳ್ಳರು, ಸುಳ್ಳುಗಾರರು, ಚಾಡಿಕೋರರು, ವಂಚಕರು, ಕಡುಮೂರ್ಖರು, ಅವಿವೇಕಿಗಳು, ನಿರಾಸಕ್ತರು, ನಿರ್ದಯಿಗಳು, ದುಷ್ಟರು, ದುರ್ವ್ಯಸನಿಗಳು, ಮುಂತಾದ ದುಷ್ಟರು ಇರುತ್ತಿದ್ದು ಇಂತವರ ಸಹವಾಸದಿಂದ ದೂರವಿರಬೇಕೆಂದು ಹೇಳುತ್ತಾ ವಿಶೇಷವಾಗಿ ಹೆಂಡತಿ, ಮಕ್ಕಳು, ನೆಂಟರು, ಸೈನಿಕರು, ಶಿಷ್ಯರನ್ನು ಸುರಕ್ಷಿತವಾಗಿರಬೇಕೆಂದು ನೀತಿಯನ್ನು ಹೇಳಿದ್ದಾನೆ.

## ೭.೫. ನಂಬಿಕೆ/ಆಚರಣೆ/ಸಂಪ್ರದಾಯಗಳು

'ನಂಬಿ ಕೆಟ್ಟವರಿಲ್ಲವೆಂಬಂತೆ' ಮಾನವ ತನ್ನ ಬದುಕಿನಲ್ಲಿ ಎದುರಾಗುವ ಹಲವಾರು ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ತನ್ನ ಒಡನಾಟದಲ್ಲಿರುವ ಅಥವಾ ಇತರೆ ವ್ಯಕ್ತಿಗಳೊಂದಿಗೆ ವಿಶ್ವಾಸವಿಡುತ್ತಾನೆ. ವಿಶ್ವಾಸವು ವ್ಯಕ್ತಿಯನ್ನು ಅವಲಂಬಿಸಿರುವುದಾಗಿದೆ. ಅಂದರೆ ಒಬ್ಬ ವ್ಯಕ್ತಿ ಇನ್ನೊಬ್ಬ ವ್ಯಕ್ತಿಯ ಬಗ್ಗೆ ಹೊಂದಿರುವ ಖಚಿತವಾದ ನಿಲುವು, ದೃಢ ಧೋರಣೆ. ಪ್ರತಿಯೊಂದು ಹಂತದಲ್ಲಿ ಮನುಷ್ಯನಿಗೆ ನಂಬಿಕೆಯೇ ಮೂಲ ಬಂಡವಾಳವಾಗಿರುತ್ತದೆ. ಯಾವುದೇ ಒಂದು ವಸ್ತು, ವಿಷಯ, ವ್ಯಕ್ತಿಯ ಬಗ್ಗೆ ಇರುವ ಅಚಲ ಅಥವಾ ದೃಢವಾದ ಚಿತ್ತ, ಇದನ್ನೇ ನಂಬಿಕೆ ಎನ್ನುತ್ತಾರೆ. ಜನಪದರು ನೆಂಬುಗೆ, ನೆಮ್ಮುಗೆ ಎಂಬ ಪರ್ಯಾಯ ಪದಗಳನ್ನು ಬಳಸುತ್ತಾರೆ. ನಂಬಿಕೆ, ದೃಢವಿಶ್ವಾಸ, ಭರವಸೆ, ಆತ್ಮವಿಶ್ವಾಸ, ನಂಬಿಗೆ, ಭಕ್ತಿ, ನಿಷ್ಠೆ, ಶ್ರದ್ಧೆ, ಅಭಿಮತ, ಅವಲಂಬನೆ, ಸ್ವಾಮಿಭಕ್ತಿ ಇತ್ಯಾದಿ ಅರ್ಥಗಳನ್ನು ಹೊಂದಿರುವ ನಂಬಿಕೆ, ಆಚರಣೆ ಮತ್ತು ಸಂಪ್ರದಾಯ ಪದಗಳು ಏಕರೀತಿಯಲ್ಲಿ ಬಳಕೆಯಾಗುತ್ತವೆ.

ನಂಬಿಕೆಯನ್ನು ಕಾರ್ಯರೂಪಕ್ಕೆ ತರುವುದು, ಕಾರ್ಯಗತಗೊಳಿಸುವುದು ಕ್ರಿಯಾತ್ಮಕಗೊಳಿಸುವುದು ಆಚರಣೆ ಎನಿಸುತ್ತದೆ. ಯಾವುದೇ ಕಾರ್ಯವನ್ನು ಅನುಸರಿಸುವುದು, ಆಚರಿಸುವುದು, ನಡೆಯುವುದು, ಅಂದರೆ ಒಂದು ಕಾರ್ಯವನ್ನು ಸರಾಗವಾಗಿ ನಡೆಯುವಂತೆ ಮಾಡುವುದೇ ಆಚರಣೆಯಾಗಿದೆ. ನಂಬಿಕೆ ಮತ್ತು ಆಚರಣೆಗಳ ಮೊತ್ತವೆ ಸಂಪ್ರದಾಯವೆನಿಸುತ್ತದೆ. ವ್ಯಕ್ತಿಯ ಮತ, ಜಾತಿ, ಧರ್ಮ, ವೃತ್ತಿ, ಕಾಲ, ಪ್ರದೇಶ, ಸಂದರ್ಭಗಳಿಗೆ ಅನುಗುಣವಾಗಿ ಅವನ ನಂಬಿಕೆಗಳು ಬದಲಾಗುತ್ತವೆ. ಹೀಗೆ ನಂಬಿಕೆಗಳು ಬದಲಾದಂತೆ ಆಚರಣೆಗಳಲ್ಲೂ ಬದಲಾವಣೆಯನ್ನು ಕಾಣುತ್ತೇವೆ. ಆದರೆ ಸಂಪ್ರದಾಯ ಬದಲಾಗದೇ ಮುಂದುವರಿದುಕೊಂಡು ಬರುತ್ತದೆ. ಹಿಂದಿನಿಂದ ನಡೆದುಕೊಂಡು ಬಂದ ರೀತಿಯಲ್ಲಿ ಪ್ರಸ್ತುತದಲ್ಲೂ ಆಚರಣೆ ನಡೆದುಕೊಂಡು ಬರುವುದು ಸಂಪ್ರದಾಯವೆನ್ನಿಸುತ್ತದೆ.

ಸಂಪ್ರದಾಯವು ಪೂರ್ವೀಕರಿಂದ ಪರಂಪರೆಯಾಗಿ ಬಂದಿರುವ ಆಚಾರ-ವ್ಯವಹಾರ, ಪರಂಪರಾಗತವಾಗಿ ಬಂದ ರೂಢಿ, ಪದ್ಧತಿ, ಗುರುಪರಂಪರೆಯಿಂದ ಬಂದ ಉಪದೇಶ, ಬೋಧನೆಯ ಸ್ವರೂಪದಲ್ಲಿರುತ್ತದೆ. ಅಂದರೆ ತಲತಲಾಂತರದಿಂದ ಅನುಸರಿಸಿಕೊಂಡುಬಂದ

ಆಚರಣೆ, ರೂಢಿ, ಪದ್ಧತಿ ಎಂಬುದಾಗಿ ಹೇಳಬಹುದು. ಈ ಸಂಪ್ರದಾಯಗಳು ಕಾಲಾನಂತರದಲ್ಲಿ ಕಾನೂನುಗಳಾಗಿ ಅನುಷ್ಠಾನಕ್ಕೆ ಬರುತ್ತವೆ. ಹಾಗಾಗಿ ಈ ಸಂಪ್ರದಾಯಗಳು ಮೂಲಸ್ವರೂಪದಲ್ಲಿ ಆಚರಣೆಗೆ ಬರುತ್ತವೆ.

ದೇಪರಾಜನ ಕಾಲದಲ್ಲಿ ವಿಜಯನಗರದ ಸಾಮಾಜಿಕ ವ್ಯವಸ್ಥೆಯ ಭಾಗವಾಗಿ ನಂಬಿಕೆ, ಆಚರಣೆ, ಸಂಪ್ರದಾಯಗಳು ಹೇಗೆ ನಡೆದುಕೊಂಡು ಬಂದಿದ್ದವು ಎಂಬುದನ್ನು ಗ್ರಹಿಸಬಹುದು. ಅಧ್ಯಯನದ ಅನುಕೂಲಕ್ಕಾಗಿ ನಂಬಿಕೆ, ಆಚರಣೆ ಮತ್ತು ಸಂಪ್ರದಾಯಗಳನ್ನು ಬಲಿಪದ್ಧತಿ, ಪವಾಡ, ಮದುವೆ, ಪೆಣ್ಬುಯ್ಯಲ್, ಸ್ಮಶಾನ, ಕಾಮಶಾಸ್ತ್ರ ಈ ಅಂಶಗಳಾಗಿ ವಿಭಜಿಸಿಕೊಂಡು ಅಧ್ಯಯನಕ್ಕೊಳಪಡಿಸಿದೆ.

### ೭.೫.೧. ಬಲಿಪದ್ಧತಿ

ಜನರು ದೇವರ ಮೇಲಿನ ನಂಬಿಕೆ ವಿಶ್ವಾಸದಿಂದ ತಮ್ಮ ಇಷ್ಟಾರ್ಥಗಳನ್ನು ಪೂರೈಸಲೆಂದು 'ಬಲಿ'ಯನ್ನು ನೀಡುತ್ತಾ ಬಂದಿರುತ್ತಾರೆ. ಬಲಿಗಳಲ್ಲಿ ಪ್ರಾಣಿಬಲಿ, ನರಬಲಿ, ಆತ್ಮಬಲಿಗಳೆಂದು ಮೂರು ಪ್ರಕಾರಗಳಾಗಿ ಗುರುತಿಸಬಹುದಾಗಿದೆ.

ಮನುಷ್ಯ ತನ್ನ ಹಿತಕ್ಕಾಗಿ ಮುಗ್ಧ ಪ್ರಾಣಿಗಳನ್ನು ದೇವರಿಗೆ ಬಲಿಕೊಡುತ್ತಾನೆ. ಪ್ರಾಣಿಗಳ ಬಲಿಯಿಂದ ದೇವರು ಸಂತುಷ್ಟಗೊಂಡು ಭಕ್ತರ ಇಷ್ಟಾರ್ಥಗಳನ್ನು ಪೂರೈಸುವನೆಂಬ ನಂಬಿಕೆಯಿಂದ ಇಂತಹ ಆಚರಣೆಗಳು ನಡೆದುಕೊಂಡು ಬಂದಿವೆ. ನಂತರ ಊರ ಹಿತಕ್ಕಾಗಿ ನಾಡಿನ ಹಿತಕ್ಕಾಗಿ ಸಾಮೂಹಿಕವಾಗಿ ಪ್ರಾಣಿ ಬಲಿ ಕೊಡುತ್ತ ಬಂದಿರುವುದನ್ನು ಕಾಣುತ್ತೇವೆ. ಇದೊಂದು ಮೂಢನಂಬಿಕೆಯಾಗಿದೆ. ಹಾಗಾಗಿ ಇಂದಿನ ದಿನಗಳಲ್ಲಿ ಸರಕಾರವು ಪ್ರಾಣಿಬಲಿ ನಿಷೇಧವೆಂದು ಘೋಷಿಸಿದೆ. ದೇಪರಾಜನ ಕಾಲದಲ್ಲಿ ಪ್ರಾಣಿಬಲಿ ನಡೆಯುತ್ತಿದ್ದ ಬಗ್ಗೆ ಕಾವ್ಯದಲ್ಲಿ ಪ್ರಸ್ತಾಪವಿದೆ.

ರೋಷಭಾಸ್ಕರ ಮುನಿಯ ಕೋಪದ ಪ್ರತೀಕವಾಗಿ ಸೃಷ್ಟಿಗೊಂಡ ಬಾಗೂರನೆಂಬ ರಾಕ್ಷಸ ಸೌಂದರ ರಾಜನ ಆಡಳಿತದ ಪ್ರದೇಶದಲ್ಲಿ ಜನತೆಗೆ ಅಶಾಂತಿಯನ್ನು ಉಂಟು ಮಾಡಿದ. ಆಗ ಅರಮನೆಯಲ್ಲೂ ಭಯಗ್ರಸ್ತನಾದ ಅರಸ ರಾಕ್ಷಸನಿಗೆ ಪ್ರಾಣಿಬಲಿ ಕೊಡಲು ಮುಂದಾಗುತ್ತಾನೆ.

"ತರಿಸಿದನರಸ ಕುಜೆಗಳನು ಮುಚ್ಚಾ
ಸಿರವನು ಕೋಣಗಳೇಳ್ನೂಱನು
ಹರವಿಗೂಳನು ಹದಿನಾಱುಸಾವಿರವನು..."(೬/೪೫)

ಅಸಂಖ್ಯಾತ ಪ್ರಮಾಣದ ಕುರಿ, ಕೋಣಗಳನ್ನು ರಾಕ್ಷಸಿಗೆ ಬಲಿಕೊಟ್ಟು ಶಾಂತಿಯನ್ನು ನೀಡಬೇಕೆಂದು ಬೇಡಿಕೊಳ್ಳುವ ಪ್ರಸಂಗವು ಮೂಡಿಬಂದಿದೆ. ಮತ್ತೊಂದು ಕಡೆಯಲ್ಲಿ ಮಹಾಕಾಳಿಯ ಕೃಪೆಯನ್ನು ಪಡೆಯುವುದಕ್ಕೆ ಭಕ್ತರು ಪ್ರಾಣಿಬಲಿ, ನರಬಲಿ ಕೊಡುತ್ತಿದ್ದರು.

"ನರಬಲಿಯಿಂ ಕೆದಜಿದ ಕುಜೆಕೋಣಗ
ಳರಿದಲೆಯಿಂ ಹುದಿ ಹುದಿಗಳ
ಕರುಳ ತೋರಣ ನೆತ್ತರ ಸಾರಣೆಯಿಂದ
ಹುರವೆಸದುದು ಮಹಾಕಾಳಿಯ"(೯/೩೦)

ಅರಣ್ಯದಲ್ಲಿ ಮಹಾಕಾಳಿ ದೇವಿಯ ದೇವಾಲಯವಿದ್ದು ಅಲ್ಲಿ ಹಲವಾರು ಪ್ರಾಣಿಗಳನ್ನು ಭಕ್ತರು ಬಲಿಕೊಡುವ ದೃಶ್ಯವು ಭಯಾನಕವಾಗಿತ್ತೆಂದು ಈ ಕಾವ್ಯದಿಂದ ತಿಳಿದುಬರುತ್ತದೆ.

'ನರಬಲಿ'ಯು ಮನುಷ್ಯರಿಗೆ ಸಂಬಂಧಿಸಿದ್ದಾಗಿದೆ. ಒಬ್ಬರು ಇನ್ನೊಬ್ಬರನ್ನು ತಮ್ಮ ಸ್ವಾರ್ಥಕ್ಕಾಗಿಯೋ, ಇಲ್ಲವೆ, ತಮ್ಮವರಿಗಾಗಿಯೋ ಇಲ್ಲವೆ ಸಮಾಜದ ಒಳಿತಿಗಾಗಿ ದೇವರಿಗೆ ಬಲಿಗೈಯುತ್ತಾರೆ. ಲೋಕೋದ್ಧಾರಕ್ಕಾಗಿ ಕೆರೆ, ಬಾವಿಗಳಲ್ಲಿ ನೀರು ಬರಲೆಂದು ನರಬಲಿಕೊಟ್ಟ ಸಂದರ್ಭವನ್ನು ಜನಪದ ಕತೆಗಳಲ್ಲಿ ಕಾಣುತ್ತೇವೆ. ಮಹಾಕಾಳಿಯ ಎದುರಿನಲ್ಲಿ ವಿಕ್ರಮ "ಕಂಡನು ಕಾರೊಡಲ ಜಟ್ಟಿಗ ಬೀರರ ಹಿಂಡ"(೯/೨೭) ಅಂದರೆ ಅಲ್ಲೇ ವಿವಿಧ ಆಯುಧಗಳನ್ನು ಹಿಡಿದು ಬಲಿಕೊಡುವ ವೀರರ ಗುಂಪು ಇತ್ತು.

"ಒಡ್ಡಿದ ಸಿಡಿ ಡೆಂಕಣಿ ಶೂಲ ಸೂನಂಗಿ
ಯಡ್ಡಗರಗಸ ಕತ್ತರಿಗಿಚ್ಚು
ಅಡ್ಡಾಯುಧ ತೀವಿದ ಬಾವಿ ನೆಲಹು ಕಂ
ಗೆಡ್ಡಮಾಗಿರ್ದವಾಹುರದೊಳು"(೯/೨೮)

"ವಿಷದ ಕಮ್ಮಡು, ಕೆಂಡದಕೊಂಡ ಕಮ್ಮರಿ
ದಸಿ ಕಾದುಕ್ಕುವೆಣ್ಣೆಯ ಬೆಂಚಿ
ಮಸದೊಡ್ಡಿದ ಕೂರಂಬು ಗಂಟಲಗಾಣ
ವೆಸದವು..."(೯/೨೯)

ವಿಷದ ಕೊಪ್ಪರಿಗೆ, ಕೆಂಡದ ಕೊಂಡ, ಕಾಯ್ದು ಉಕ್ಕುವ ಎಣ್ಣೆಯ ಕೊಂಡ, ಚೂಪಾದ ಬಾಣ, ಭರ್ಚಿಗಳು, ಸಿಡಿ, ಗಂಟಲಗಾಣಗಳು ಇವೆಲ್ಲವೂ ಭಯ ಮೂಡಿಸುವಂತಿದ್ದವು. ಅಲ್ಲಿ ದೇವಿಯು "ನರಬಲಿಂ ಕೆದಜಿದ"(೯/೩೧) ರೂಪದಲ್ಲಿ ಶೋಭಿಸುತ್ತಿದ್ದಳು. ಹೀಗೆ 'ಆತ್ಮಬಲಿ'ಯನ್ನು ವ್ಯಕ್ತಿಯೊಬ್ಬನು ಸ್ವ ಇಚ್ಚೆಯಿಂದ ನಂಬಿಕೊಂಡುಬಂದ ದೈವಕ್ಕೆ ಪ್ರಾಣಾರ್ಪಣೆ ಮಾಡಿಕೊಳ್ಳುತ್ತಾನೆ. ತನ್ನ ಇಷ್ಟಾರ್ಥ ಈಡೇರಿದ್ದಕ್ಕಾಗಿ ಹರಕೆ ಹೊತ್ತ ದೈವಕ್ಕೆ ಆತ್ಮಬಲಿಯಾಗುತ್ತಾನೆ. ಇಲ್ಲವೆ ಮತ್ತೊಬ್ಬರ ಒಳಿತಿಗಾಗಿ ಹರಕೆ ಹೊತ್ತು ಈ ಹರಕೆ ಕೈಗೂಡಿದಾಗ ತಾನೇ ಸ್ವತಃ ಬಲಿಗೈದುಕೊಳ್ಳುವುದು. ಇಲ್ಲವೆ ಆತ್ಮೀಯರು ಮರಣವನ್ನಪ್ಪಿದಾಗ ಅವರ ಜೊತೆಯಲ್ಲೇ ಆತ್ಮಬಲಿದಾನವಾಗುವುದು ಇವೆಲ್ಲವೂ ಆತ್ಮಬಲಿಯ ವಿವಿಧ ಸ್ವರೂಪವನ್ನು ಕುರಿತದ್ದಾಗಿವೆ.

ಈ ತೆರನಾದ ಪದ್ದತಿ ಕುರಿತು "ಪ್ರಾಚೀನ ಕರ್ನಾಟಕದಲ್ಲಿ ವ್ಯಕ್ತಿಗಳು ತಮ್ಮ ಪ್ರಾಣವನ್ನು ತಾವೇ ತೆಗೆದುಕೊಳ್ಳುವ ಕೆಲವು ಪದ್ಧತಿಗಳಿದ್ದವು. ಇವುಗಳನ್ನು ನಾವು 'ಆತ್ಮಬಲಿ' ಅಥವಾ ಧಾರ್ಮಿಕ ದೇಹತ್ಯಾಗ"[೩೧] ಎಂದು ಕರೆದಿರುವುದಾಗಿ ಎಂ. ಚಿದಾನಂದಮೂರ್ತಿಯವರು ಹೇಳಿದ್ದಾರೆ. ಮತ್ತೊಬ್ಬರ ಒಳಿತಿಗಾಗಿ ಆತ್ಮಬಲಿ ನಡೆದುಕೊಂಡು ಬಂದಿದೆ. ವಸಂತೆಯ ಸಂಕಲ್ಪ ಈಡೇರಿಕೆಗಾಗಿ ಅವಳ ಗೆಳತಿ ಲಲಿತೆ ಮಹಾಕಾಳಿಯ ಮುಂದೆ ತಪಸ್ಸು ಕುಳಿತಿದ್ದನ್ನು ವಿಚಾರಿಸಿದ ವಿಕ್ರಮಕುಮಾರ ತಾನೇ ಆ ಸಂಕಲ್ಪ ನೆರವೇರಿಸುವೆನೆಂದು ದೃಢವಾಗಿ ನಿಲ್ಲುತ್ತಾನೆ. ಜೊತೆಯಲ್ಲಿ ಮಧುರ ಎಂಬ ರಾಜಕುಮಾರನು ಬೆಂಬಲವಾಗಿ ನಿಲ್ಲುತ್ತಾನೆ. ಅವರ ಸಂಕಲ್ಪ ಈಡೇರದಿದ್ದಾಗ

ವಿಕ್ರಮ ಮತ್ತು ಮಧುರ ಇವರಿಬ್ಬರು ಆತ್ಮಬಲಿಗೈದು ವರವನ್ನು ಪಡೆದು ಮತ್ತೆ ಬದುಕಿಬರುವುದು ಆಶ್ಚರ್ಯವೆನ್ನಿಸುತ್ತದೆ. ಈ ಪ್ರಸಂಗವು ಕಾವ್ಯದ ಮತ್ತೊಂದುಕಡೆ "ಜಸಗಂಪ ಬಂದು ಸಮ್ಮಾನದಲರಿಗತ್ತರಿಗಿತ್ತ"(೯/೪೭) ನಂತರ ಇವನ ಜೊತೆಯಲ್ಲಿದ್ದ ಮಧುರ "ಸೂತ್ರದ ಗುಂಡ ಚಿಮ್ಮಿಸೆ ತಲೆಸಿಡಿದಾಲಿತಾಗಸದಲ್ಲಿ"(೯/೫೭) ಎಂಬುದಾಗಿ ವ್ಯಕ್ತಗೊಂಡಿದೆ. ಇಲ್ಲಿ ವಿಕ್ರಮ ಮತ್ತು ಮಧುರರು ವೀರಭಕ್ತರಾಗಿ ಮಹಾಕಾಳಿ ದೇವಿಗೆ ಪಾತ್ರರಾಗುತ್ತಾರೆ. ಈ ಮೇಲಿನ ಅಂಶಗಳಿಂದ ವಿಜಯನಗರ ಕಾಲದ ಜನತೆಯು ತಮ್ಮ ಕಾರ್ಯಸಾಧನೆಗಾಗಿ ಶಕ್ತಿದೇವಿಗೆ ತಮ್ಮನ್ನು ಸಮರ್ಪಣೆ ಮಾಡುತ್ತಿದ್ದರು ಎಂದು ತಿಳಿದುಬರುತ್ತದೆ. ನಂತರ ಗ್ರಾಮದೇವತೆ ಪಟ್ಟಣದ ಎಲ್ಲಮ್ಮನಿಗೆ ಕುರಿ ಕೋಳಿಗಳನ್ನು ಬಲಿ ನೀಡುತಿದ್ದ ವಿಚಾರದಲ್ಲಿ ಇಮ್ಮಡಿ ದೇವರಾಯನ ಶಾಸನದಲ್ಲಿ ಉಲ್ಲೇಖಿಸಲಾಗಿದೆ. ಇದನ್ನು ಗಮನಿಸಿದರೆ ಹಂಪಿಯಲ್ಲಿ ಗ್ರಾಮದೇವತೆಗಳಿಗೆ ಬಲಿಪದ್ಧತಿ ಒಂದು ಸಂಪ್ರದಾಯವಾಗಿ ಆ ಕಾಲದಲ್ಲಿ ನಡೆಯುತ್ತಿತ್ತೆಂದು ತಿಳಿದುಬರುತ್ತದೆ.

ಅಂದು ಜನತೆ ರಾಕ್ಷಸರ ತೊಂದರೆಗಳಿಂದ ಪಾರಾಗಲು ಅಸಂಖ್ಯಾತ ಕುರಿ ಕೋಣಗಳನ್ನು ಬಲಿಕೊಟ್ಟು ಶಾಂತಿಯನ್ನು ಕಾಪಾಡಿಕೊಳ್ಳುತ್ತಿದ್ದರು. ಮಹಾಕಾಳಿಯಂತ ಶಕ್ತಿ ದೇವತೆಗೆ ವಿವಿಧ ರಾತಿಯ ಪ್ರಾಣಿಗಳನ್ನು ಬಲಿಕೊಡುವುದರ ಜೊತೆಗೆ ಕೆಲವೊಮ್ಮೆ ನರಬಲಿಯೂ ಕೊಡುತ್ತಿದ್ದರು. ಅಪರೂಪವಾಗಿ ಕೆಲ ಭಕ್ತರು ಆತ್ಮಬಲಿಯಾಗಿ ಭಕ್ತಿಯನ್ನು ವ್ಯಕ್ತಪಡಿಸುತ್ತಿದ್ದರು.

**೭.೫.೨. ಪವಾಡ**

ಪವಾಡ ನರಮಾನವನಿಂದ ನೆರವೇರಲಾಗದ ಅಸಾಧಾರಣ ಪ್ರಕ್ರಿಯೆ. ಮನುಷ್ಯನ ಕಲ್ಪನೆಗೂ ನಿಲುಕಲಾಗದ ಅನೂಹ್ಯಕಾರ್ಯ ಮಾನವ ಅತೀತವಾದ ಕಾರ್ಯಗಳೇ ಪವಾಡ ಎನ್ನಬಹುದು. ಮನುಷ್ಯನಿಂದ ಸಾಧಿಸಲಾಗದ ಎಷ್ಟೋ ಕಾರ್ಯಗಳು ಅಸಮಾನ್ಯ ರೀತಿಯಲ್ಲಿ ಘಟಿಸುವುದನ್ನು ಪವಾಡವೆಂದು ನಂಬುತ್ತಾ ಬರಲಾಗಿದೆ. ಇಂತಹ ಅಸಾಮಾನ್ಯವಾದ ಘಟನೆಗಳಿಗೆ ದೈವವೇ ಕಾರಣವೆಂದು ತಲತಲಾಂತರಗಳಿಂದ ಮನುಷ್ಯ ನಂಬುತ್ತ ಬಂದಿದ್ದಾನೆ.

ದೇಪರಾಜ ತನ್ನ ಕಾಲದಲ್ಲಿ ಜರುಗುತ್ತಿದ್ದ ಪವಾಡಗಳನ್ನು ಸೊಬಗಿನ ಸೋನೆ ಕಾವ್ಯದಲ್ಲಿ ದಾಖಲಿಸಿದ್ದಾನೆ. ಶಿವಭಕ್ತನಾದ ವಿಕ್ರಮ ವಸಂತೆಯ ಸಂಕಲ್ಪ ಈಡೇರಿಸಲು ಮುಂದಾಗುತ್ತಾನೆ. ಮಹಾಕಾಳಿಯನ್ನು ಕುರಿತು ತಪಸ್ಸು ಮಾಡುತ್ತಾನೆ. ಈ ದೇವತೆ ಒಲಿಯದಿದ್ದಾಗ ತಾನೇ ಆತ್ಮಾಹುತಿ ಆಗಿ ಮತ್ತೆ ಮರುಜನ್ಮ ಹೊಂದುವ ಪ್ರಸಂಗ ಕಾವ್ಯದಲ್ಲಿ ವರ್ಣಿತವಾಗಿದೆ.

"ಹರಣವ ನಿನಗೆ ಕಾಣಿಕೆಯೀವೆ ನಿನ್ನ ಶ್ರೀ
ಚರಣಕೆ ಲಲಿತೆ ಕುವರಿಗೂಡಿ
ಬರಲೀಯೆಡೆಗವರರಕೆಯ ಸಲಿಸುವ
ವರವಿತ್ತುಳುಹು ನೀನೆನಗೆಂದ"(೯/೫೧)

"ಬಳಿಕ ಕೇಳಬಲೆ ಸೂತ್ರದ ಗುಂಡ ಚಿಮ್ಮಿಸೆ
ತಲೆ ಸಿಡಿದಾಲಿತಾಗಸದಲ್ಲಿ
ಲಲಿತೆ ಮೈಗರದೆಡೆಯಲ್ಲಿ ಮರನಾದಳು
ಪುಳುಕಿಸಿ ಕಂಪಿಸಿದಳು ಕಾಳಿ"(೯/೫೭)

ಈ ಮೇಲಿನ ಅಂಶಗಳಿಂದ ವಿಕ್ರಮನು ಮಹಾಕಾಳಿಯಿಂದ ವರವನ್ನು ಪಡೆದು ಮರುಜನ್ಮ ಪಡೆದು ಪವಾಡ ಪುರುಷನಾಗಿ ಕಂಡುಬರುತ್ತಾನೆ. ಈತನನ್ನು ಅನುಸರಿಸಿ ಸಹಚರ ಮಧುರನೂ ಶಿರಛೇದನ ಮಾಡಿಕೊಂಡು ಮರುಜನ್ಮ ಹೊಂದುತ್ತಾನೆ. ಈ ಪರಂಪರೆಯು ಹನ್ನೆರಡನೆಯ ಶತಮಾನದಲ್ಲಿ "ಏಕಾಂತ ರಾಮಯ್ಯ ತನ್ನ ಶಿರವನರಿದುಕೊಂಡು ಮತ್ತೆ ಶಿರವ ಪಡೆಯುವ ಪ್ರಸಂಗವಿದೆ ಇದೇ ರೀತಿ ಜಂಬೂರು ಕಾಳಯ್ಯ, ಮೊರಟದ ಬಂಕದೇವ, ಗಂಡಗತ್ತರಿಯನಾಚಯ್ಯ ಮೊದಲಾದ ಶರಣರು ತಮ್ಮ ಶಿರವನ್ನು ಕತ್ತರಿಸಿಕೊಂಡು ಮತ್ತೆ ಪಡೆದಿದ್ದಾರೆ"[೨] ಎಂಬ ಶಿರಸ್ ಪವಾಡದ ವಿವರವಿದೆ. ಇವರೆಲ್ಲರು ಶೈವಧರ್ಮ ಪ್ರಸಾರದ ಸಂದರ್ಭದಲ್ಲಿ ಅನ್ಯಧರ್ಮಗಳೊಂದಿಗೆ ಪವಾಡ ಮೆರೆದ ಧರ್ಮವೀರರಾಗಿ ಕಂಡುಬರುತ್ತಾರೆ.

ಕೈಲಾಸದಲ್ಲಿ ಶಿವಪಾರ್ವತಿಯರಿಗೆ ಹೂವನ್ನು ತರುವ ಸೇವೆಯಲ್ಲಿದ್ದ ಸುರಭಿಶೇಖರನು ತಪ್ಪೆಸಗಿದನು ಈತ ಶಾಪ ಹೊಂದಿ ಭೂಲೋಕದಲ್ಲಿ ಮಹಾಕಾಳಿಯ ವನದಲ್ಲಿ ಹಂದಿರೂಪ ತಾಳಿರುತ್ತಾನೆ. ಈ ರೂಪದ ಹಂದಿಯನ್ನು ವಿಕ್ರಮನು ಬೇಟೆಯಾಡಿ ಹಿಮ್ಮೆಟ್ಟಿಸಿದನು.

> "ಬಿರಿದುದು ಸೊಕ್ಕಿದೆಕ್ಕಲನೊಡಲ್ಬಿಂಬಾ...
> ಕರುವಿಟ್ಟೆಱದ ಪೊಂಬುತ್ತಳಿಯೆನಲೊರ್ವ
> ಪುರುಷನೊಗೆದನಾಯೆಡೆಯಿಂದ"(೧೨/೧೬)

ಹಂದಿಯ ಒಡಲಿನಿಂದ ಶಿವಭಕ್ತನು ಹೊರಬಂದನು. ಈತ ಶಾಪದಿಂದ ಮುಕ್ತಿ ಹೊಂದಿ ತನ್ನ ತಪ್ಪನ್ನು ತಿದ್ದಿಕೊಂಡು ಬಾಳಲು ಮುಂದಾಗುತ್ತಾನೆ. ಸುರಭಿಶೇಖರನ ಜನ್ಮ ಪವಾಡವೇ ಸರಿ. ಮತ್ತೊಂದೆಡೆ ಸೌಂದರ ರಾಜನ ಮಗ ರಾಕ್ಷಸಿಯ ಬಂಧನಕ್ಕೆ ಸಿಕ್ಕು ರುಂಡ ಮುಂಡಗಳು ಬೇರೆ ಬೇರೆ ಆಗಿದ್ದಾಗ ವಿಕ್ರಮನ ಸಹಾಯದಿಂದ ಮತ್ತೆ ಬದುಕುತ್ತಾನೆ. ರಾಕ್ಷಸಿಯನ್ನು ಕೊಂದು ಕಂಜರೆಯನ್ನು ರಕ್ಷಿಸುತ್ತಾನೆ. ವಿಕ್ರಮ ಬಾಲ್ಯದಲ್ಲೆ ಎಲ್ಲ ರೀತಿಯ ವಿದ್ಯೆ ಕಲಿತು ಹೋರಾಡುವುದು, ಕಂಜರೆ, ವಸಂತೆಯರಿಗೆ ಸಹಾಯ ಮಾಡುವುದು, ನಾಗರಿಕ ಪಕ್ಷಿಯು ಅಗಲಿದ ತಂದೆ-ತಾಯಿಯರನ್ನು ಸೇರಲು ನೆರವಾಗುವುದು ಈ ಎಲ್ಲ ಸಂದರ್ಭಗಳಲ್ಲಿ ವಿಕ್ರಮನ ಪಾತ್ರ ಪವಾಡ ಪುರುಷನಂತೆ ಚಿತ್ರಣಗೊಂಡಿದೆ.

ದೈವೀಪುರುಷರು ಧರ್ಮವನ್ನು ಜಗತ್ತಿಗೆ ತೋರಿಸಲು ವಿವಿಧ ತೆರನಾದ ಪವಾಡಗಳನ್ನು ಮಾಡುತ್ತ ಬಂದಿರುವುದು ಕಂಡುಬರುತ್ತದೆ. ಈ ಪವಾಡಗಳಿಂದ ಭಕ್ತರು ಅಚಲವಾದ ನಂಬಿಕೆಯಿಂದ ಧರ್ಮ ಪಾಲಿಸಿಕೊಂಡು ಬಂದಿರುತ್ತಾರೆ.

### ೭.೫.೩. ಮದುವೆ

ಸಮಾಜದ ಗುರುಹಿರಿಯರು ಸೇರಿ ಪ್ರಾಪ್ತ ವಯಸ್ಸಿನ ಗಂಡು-ಹೆಣ್ಣು ಕೂಡಿ ಬಾಳುವಂತೆ ಮಾಡುವ ಒಂದು ಒಪ್ಪಂದವೇ ಮದುವೆ ಎನ್ನಬಹುದು. ಮದುವೆ ವ್ಯಕ್ತಿಯ ಬದುಕಿನಲ್ಲಿ ಪ್ರಮುಖ ಹಂತವಾಗಿದೆ. ಸಮಾಜದ ಮುಖಂಡರು ಭವಿಷ್ಯತ್ತಿನ ಬದುಕು ಸುಗಮವಾಗಿರಲೆಂದು ಬಯಸುತ್ತಾರೆ. ಇಲ್ಲಿ ಯುವ ವಯಸ್ಸು, ಮತ್ತು ಮನಸ್ಸುಗಳ ಬೆಸುಗೆಯಾಗಿ ಸಾಮಾಜಿಕ ಒಪ್ಪಂದವನ್ನು ಪಡೆಯುವ ಉದ್ದೇಶವಿರುತ್ತದೆ. ಸಮಾಜದಲ್ಲಿ ಮದುವೆಯ ಆಚರಣೆ ಮತ್ತು

ಸಂಪ್ರದಾಯಗಳು ವಿಶಿಷ್ಟವಾಗಿ ಜರುಗುತ್ತ ಬಂದಿವೆ. ಜನಪದರ ಗೀತೆಗಳಲ್ಲಿ, ಶಿಷ್ಟಕಾವ್ಯಗಳಲ್ಲಿ ಮದುವೆ ಒಂದು ಸಂಪ್ರದಾಯವಾಗಿ ಮುಂದುವರಿದುಕೊಂಡು ಬಂದ ಬಗ್ಗೆ ವ್ಯಕ್ತವಾಗುತ್ತದೆ. ಮದುವೆ ಆಡಂಬರವಾಗಿಯೂ, ಸರಳವಾಗಿಯೂ ನೆರವೇರಿಸುವುದನ್ನು ಕಾಣುತ್ತೇವೆ. ಮಹಾಕಾವ್ಯದ ಅಷ್ಟಾದಶವರ್ಣನೆಗಳಲ್ಲಿ ಮದುವೆಯ ವರ್ಣನೆಯು ಒಂದಾಗಿದೆ.

ಈ ಕಾವ್ಯದಲ್ಲಿ ಸರಳವಾದ ರೀತಿಯಲ್ಲಿ ಮದುವೆ ನೆರವೇರುವುದನ್ನು ಉಲ್ಲೇಖಿಸಿದ್ದಾನೆ. ಆದರೆ ವಿಕ್ರಮಕುಮಾರನು ಮಾಡಿದ ವಿವಾಹ ವಿಧಿ ವಿಧಾನಗಳನ್ನು, ಸಂಪ್ರದಾಯಗಳನ್ನು ಕುರಿತು ಹೇಳಿಲ್ಲ. ಜೊತೆಯಲ್ಲಿ ವಿದ್ಯೆಯನ್ನು ಕಲಿಯಲು ಬಂದ ಮಾಳವ ಕುಮಾರನಿಗೂ ಹಾಗೂ ಕಾಶ್ಮೀರದ ರಾಜ ಸೌಂದರನ ಮಗಳು ಕಂಜರೆಗೂ ಮದುವೆ ನೆರವೇರಿಸುವ ಪ್ರಸಂಗ ಮಾತ್ರವಿದೆ.

"....ಪರಸಿ ಹರುಷದಿ ಸೇಸೆಯನಿ
ಟ್ಟನು ಮಾಳವಗೆ ಕಂಜರೆಗೆಂದು..."(೮/೫)

"...ದೇವಿಯಿದಿರೊಳಿಪ್ಪ ಬೆಳ್ಮುತ್ತು
ಗಳ ಚೌಕದ ಪಸೆವಣೆಯೊಳು
ನಳಿನಿ ಕುಹಳ ಸಹಿತೊಲಿದು ವಿಕ್ರಮ ಸೇಸೆ
ದಳಿದನಾ ಮಧುರ ಬಸಂತಗೆ"(೧೦/೬೪)

ವಿಕ್ರಮನೇ ಮಹಾಕಾಳಿ ದೇವಿಯ ಸಮ್ಮುಖದಲ್ಲಿ ವಿವಾಹ ಮಾಡಿ ಆಶೀರ್ವದಿಸುತ್ತಾನೆ. ಹೂವನ್ನು ಮುಡಿದ ಮಧುಮಕ್ಕಳು ವಿಕ್ರಮನಿಗೆ ನಮಸ್ಕರಿಸಿದರು. ವಿಕ್ರಮ ಮಧುಮಕ್ಕಳನ್ನು ಆಶೀರ್ವದಿಸಿ ಬೀಳ್ಕೊಡುತ್ತಾನೆ.

"ಮಣಿದರು ಪೂಮುಡಿಗಳ ಮದವಕ್ಕಳು
ಗುಣಮಣಿ ವಿಕ್ರಮನಡಿಗಂದು
ಪಣೆವಿಡಿದೆತ್ತಿ ಪರಸಿ ಬೀಳ್ಕೊಟ್ಟನಾ..."(೧೦/೬೬)

ದೇಪಕವಿ ವಿವಾಹದ ವಿಧಿವಿಧಾನಗಳು, ಆಚರಣೆಗಳ ಕುರಿತ ಯಾವುದೇ ವಿವರಣೆಯನ್ನು ಮಾಡದೇ ದೈವಿಕ ಹಿನ್ನೆಲೆಯಲ್ಲಿ ಮದುವೆ ನೆರವೇರಿಸುವುದನ್ನು ಈ ಕಾವ್ಯದಲ್ಲಿ ವರ್ಣಿಸಿದ್ದಾನೆ.

ಒಟ್ಟಾರೆಯಾಗಿ ಪ್ರಾಪ್ತ ವಯಸ್ಸಿನ ಹಾಗೂ ಮನಸ್ಸಿನ ಗಂಡು ಹೆಣ್ಣು ಪರಸ್ಪರ ಒಂದಾಗಲು ಗುರು ಹಿರಿಯರು ಹಾಗೂ ದೈವದ ಸಲಹೆಯಿಂದ ಸರಳ ರೀತಿಯಲ್ಲಿ ಸಾಮಾಜಿಕವಾಗಿ ನಡೆಯುವ ಒಪ್ಪಂದವೇ ಮದುವೆ ಆಗಿತ್ತೆಂದು ಸ್ಪಷ್ಟವಾಗುತ್ತದೆ.

**೭.೫.೪. ಪೆಣ್ಬುಯ್ಯಲ್**

'ಪೆಣ್ಬುಯ್ಯಲ್' ಪ್ರಾಚೀನ ಕರ್ನಾಟಕದಲ್ಲಿ ಕಂಡುಬರುವ ಹೆಣ್ಣಿನ ಅಪಹರಣದಲ್ಲಿ ಶೌರ್ಯ ಮೆರೆದ ವೀರರ ಪ್ರತೀಕವಾಗಿದೆ. ಅಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ರೂಢಿಗತವಾದ ಆಚರಣೆಯಾಗಿದೆ. ಮುಂದಿನ ತಲೆಮಾರಿಗೆ ಅದೊಂದು ಸಂಪ್ರದಾಯವಾಗಿ ಬೆಳೆದುಬಂದಿತು. ಅಬಲೆಯಾದ ಹೆಣ್ಣಿನ ಮಾನ-ಪ್ರಾಣ ರಕ್ಷಿಸುವುದು ಗಂಡಿನ ಕರ್ತವ್ಯವೆಂದು ನಂಬಿಕೊಂಡು

ಬರಲಾಗಿದೆ. ಮಾತೃಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣು ಪ್ರಮುಖ ಪಾತ್ರಳಾಗಿದ್ದಳು. ನಂತರ ಪಿತೃಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣನ್ನು ಸಂಕುಚಿತವಾಗಿ ನಡೆಸಿಕೊಳ್ಳುವ ಸ್ಥಿತಿಗೆ ಬರಲಾಯಿತು.

ಎಂ. ಚಿದಾನಂದ ಮೂರ್ತಿ ಅವರು "ಕಳ್ಳರು ತುರುಗಳನ್ನು ಕದಿಯಲು ಬಂದಾಗ ಕದಿಯುವುದರ ಜೊತೆಗೆ ಆ ಊರಿನ ಸ್ತ್ರೀಯರನ್ನು ಅವಮಾನಗೊಳಿಸುತ್ತಿದ್ದರು. ಕೆಲವು ಸಾರಿ ತುರುಗಳ ಜೊತೆಯಲ್ಲಿ ಅವರನ್ನು ಅಪಹರಿಸುತ್ತಿದ್ದರು. ಆಗ ಸ್ತ್ರೀಯರು ತಮ್ಮ ರಕ್ಷಣೆಗಾಗಿ ಪುಯ್ಯಲಿಡುತ್ತಿದ್ದರು. ಅಥವಾ ಹುಯ್ಯಲಿಡುತ್ತಿದ್ದರು. ಎಂದರೆ ಕೂಗಿಕೊಳ್ಳುತ್ತಿದ್ದರು. ಸ್ತ್ರೀಯರ ವಸ್ತ್ರಗಳನ್ನು ತೆಗೆದುಹಾಕಿ ಅವರ ಮಾನಭಂಗ ಮಾಡುತ್ತಿದ್ದರು"[೩೩] ಎಂದಿದ್ದಾರೆ. ಇದನ್ನು ಪೆಣ್ಬುಯ್ಯಲ್ ಎಂದು ಕರೆಯಲಾಗುತ್ತದೆ. ಅಂದರೆ ಅಪಹರಿಸಲ್ಪಟ್ಟ ಅಥವಾ ಮಾನಭಂಗಕ್ಕೆ ಒಳಗಾಗುತ್ತಿರುವ ಹೆಣ್ಣಿನ ಆಕ್ರಂಧನ ಅಥವಾ ಅಳಲನ್ನು ಕೇಳಿ ಅವಳ ರಕ್ಷಣೆಗಾಗಿ ವೈರಿಗಳ ವಿರುದ್ಧ ಹೋರಾಡಿ ಸತ್ತ ವೀರನ ನೆನಪಿಗಾಗಿ ಹಾಕಿಸಿದ ಸ್ಮಾರಕ ಶಾಸನ ಪೆಣ್ಬುಯ್ಯಲ್ ವೀರಗಲ್ಲು. ಇದು ದೇಪರಾಜನ ಕಾಲದಲ್ಲಿ ಒಂದು ಸಾಮಾಜಿಕ ಮೌಲ್ಯವಾಗಿತ್ತು.

ದೇಪರಾಜ ತನ್ನ ಕಾಲದ ಸಾಮಾಜಿಕ ವ್ಯವಸ್ಥೆಯಲ್ಲಿ ಪ್ರಚಲಿತವಿದ್ದ ಪೆಣ್ಬುಯ್ಯಲ್ ಸಂಸ್ಕೃತಿ ಅಥವಾ ಹೆಣ್ಣನ್ನು ಪ್ರಾಣದ ಹಂಗು ತೊರೆದು ಹೋರಾಡಿ ಅವಳ ಮಾನ-ಪ್ರಾಣ ರಕ್ಷಿಸಿದ ವೀರರ ವೀರತ್ವ ಶೌರ್ಯ-ಸಾಹಸ ಕುರಿತು ಈ ಕಾವ್ಯದಲ್ಲಿ ವರ್ಣಿಸಿರುವುದನ್ನು ಕಾಣಬಹುದು.

> "ನೆಲನೆಣ್ದೆಸೆಯೆ ನೇಸಜೆ ಬಾಲೆವೆಣ್ಣಿನ
> ತಲೆಗಾಯಿರೆ ಕಾವರಿಲ್ಲೆಂದು
> ಎಳದೊಯಿವುತಿಹನೆ ರಕ್ಕಸ ಮೋಜೆಯೊ ಎಂ
> ಬಲುಪಾದುದಾಗಸದೆಡೆಯೊಳು"(೫/೭)

ಸೌಂದರರಾಜನ ಮಗಳು ಕಂಜರೆಯನ್ನು ರಾಕ್ಷಸ ಅಪಹರಿಸಿದ ವಿಚಾರವನ್ನು ಕವಿ ಈ ಪದ್ಯದಲ್ಲಿ ಅಭಿವ್ಯಕ್ತಿಸಿದ್ದಾನೆ. ಆಕಾಶಮಾರ್ಗವಾಗಿ ರಾಕ್ಷಸ ಕಂಜರೆಯನ್ನು ಎಳೆದೊಯ್ಯುವಾಗ ಅವಳು ತನ್ನನ್ನು ರಕ್ಷಿಸುವವರು ಯಾರಿಲ್ಲೆಂದು ಈ ರಕ್ಕಸ ಎಳೆದೊಯ್ಯುತ್ತಿದ್ದಾನೆ. ನನ್ನ ತಲೆಗಾಯಿರೆ ರಕ್ಷಿಸಿರಿ ಎಂದು ಭಯದಿಂದ ಹುಯ್ಯಲಿಟ್ಟಳು. ಅವಳ ಕೂಗು ಆಕಾಶದಿಂದ ಭೂಮಿಗೆ ಕೇಳಿಸುತ್ತಿದ್ದು. ಇದನ್ನು ಕವಿ ಮುಂದುವರೆದು ತನ್ನ ಸತಿಗೆ ಹೀಗೆ ಹೇಳುತ್ತಾನೆ.

> "ಏನೆಂಬೆ ನಿಮ್ಮಿಂದವೆ ಕೇಳು ಲೋಕಕ್ಕೆ
> ಹಾನಿ ವಿಜಯ ಸುಖ ಜಸಗಳು
> ಭೂನಾಥ ಪೆಣ್ಬುಯ್ಯಲ ಕೇಳಿ ಬಳಿಕ
> ದಾನವಗತಿ ಮುಳಿದನು ಪ್ರಿಯೆ"(೫/೯)

ಲೋಕದಲ್ಲಿ ಎಲ್ಲ ಜಯ, ಅಪಜಯ, ಸುಖಃ, ದುಃಖ, ಕೀರ್ತಿ, ಅಪಕೀರ್ತಿಗಳು ಉಂಟಾಗುವುದು ಹೆಣ್ಣಿನಿಂದಲೇ ಎಂದು ತಿಳಿದು ಹೆಣ್ಣಿನ ಆಕ್ರಂದನವನ್ನು ಕೇಳಿದ ವಿಕ್ರಮನೆಂಬ ರಾಜಕುಮಾರ ಈ ಹೆಣ್ಣನ್ನು ಎಳೆದೊಯ್ಯುತ್ತಿರುವ ರಾಕ್ಷಸನಾರು ಎಂದು ಸಿಟ್ಟಿಗೆದ್ದನು. ತಕ್ಷಣನೇ ಮುಂದೆ ಆ ರಾಕ್ಷಸನ ವಿರುದ್ಧ ಹೋರಾಡಿ ಕಂಜರೆಯನ್ನು ಬಿಡಿಸಿ ಅವಳಿಂದ ಹೊಗಳಿಸಿಕೊಂಡ.

ಕವಿ ತನ್ನ ಕಾಲದ ಆಡಳಿತ ವ್ಯವಸ್ಥೆಯಲ್ಲಿದ್ದ ವೀರಯೋಧನ ಅಥವಾ ಮಹಿಳೆಯರ ಕರ್ತವ್ಯವನ್ನು ಕುರಿತು ವಿಕ್ರಮ ಮತ್ತು ಕಂಜರೆಯ ಪಾತ್ರದ ಮೂಲಕ ಚಿತ್ರಿಸಿದ್ದಾನೆ. ಅಂದರೆ ಹೆಣ್ಣಿನ ಗೋಳಾಟ ಕೇಳಿ ಅವಳ ಮಾನ ಪ್ರಾಣ ಕಾಪಾಡಲು ಹಿಂಜರಿಯಬಾರದು. ಅಂಜುವುದು ಹೆಣ್ಣು-ಗಂಡಿನ ಲಕ್ಷಣವಲ್ಲವೆಂದು ಸೂಚಿಸುತ್ತ ಇವರ ನಂಬಿಕೆ ಸಂಪ್ರದಾಯವು ಆ ಕಾಲದಲ್ಲಿ ಒಂದು ಮೌಲ್ಯವಾಗಿತ್ತೆಂದು ತಿಳಿದುಬರುತ್ತದೆ.

### ೭.೫.೫. ಕಾಮಶಾಸ್ತ್ರ (ರತಿಶಾಸ್ತ್ರ)

ಭಾರತೀಯ ಪರಂಪರೆಯಲ್ಲಿ ಕಾಮವು ಪುರಾಷಾರ್ಥಗಳಲ್ಲಿ ಮೂರನೇ ಸ್ಥಾನದಲ್ಲಿದೆ. ಕಾಮವೆಂದರೆ ಬಯಸಿದ್ದನ್ನು ಪಡೆದು ಅನುಭೋಗಿಸುವುದು ಎಂದರ್ಥ. ಇದು ಕೇವಲ ಲೈಂಗಿಕತೆ ಎಂಬರ್ಥಕ್ಕೆ ಸೀಮಿತವಾಗದೇ ಇದು ವಿಶಾಲಾರ್ಥವನ್ನು ಒಳಗೊಂಡಿದೆ. ಇದು ಮನಸ್ಸಂತೋಷ ಮತ್ತು ಸೌಂದರ್ಯ ಸುಖಗಳಿಗೂ ಅನ್ವಯಿಸುತ್ತದೆ. ಮನುಕುಲ ಹಾಗೂ ಸಮಾಜದ ನಿರಂತರತೆಗೆ ತೀರಾ ಅಗತ್ಯವೆಂದು ಪರಿಗಣಿಸಲಾಗಿದೆ.

ಕಾಮ ಸೃಷ್ಟಿಯ ನಿಯಮ ಪ್ರಪಂಚದ ಎಲ್ಲ ಜೀವಿಗಳಲ್ಲಿ ಇದು ಅಡಗಿರುತ್ತದೆ. ಕಾಮವಿಲ್ಲದೆ ಸೃಷ್ಟಿಯೇ ಇರುವುದಿಲ್ಲ. ಇದು ಪಶು, ಪಕ್ಷಿ, ಕ್ರಿಮಿ, ಕೀಟ ಮುಂತಾದವುಗಳಿಗಿಂತ ಭಿನ್ನವಾಗಿ ಮಾನವನಲ್ಲಿ ಇರುತ್ತದೆ. ಇದು ಲೋಕ ಜೀವನಕ್ಕೆ ಶಕ್ತಿಯಾಗಿದೆ. ಮಾನವನ ಜನನಕ್ಕಾಗಿ ಸಂತಾನ ಅವಶ್ಯಕ. ಈ ಸಂತಾನಕ್ಕೆ ಗಂಡು-ಹೆಣ್ಣಿನ ಕಾಮಕ್ರಿಯೆ ಅನಿವಾರ್ಯ. ಮನುಷ್ಯನಲ್ಲಿ ಕಾಮಕ್ರಿಯೆ ಕ್ರಮಬದ್ಧವಾದ ರೀತಿಯಲ್ಲಿ ವ್ಯವಹರಿಸುತ್ತದೆ. ಮನುಷ್ಯನ ಕಾಮವನ್ನು ನಿಯಮಾವಳಿಗಳಾಗಿ ರಚಿಸಿರುವುದೇ ಕಾಮಶಾಸ್ತ್ರ.

ಸೊಬಗಿನ ಸೋನೆಯು ಅಷ್ಟಾದಶವರ್ಣನೆಗಳನ್ನು ಒಳಗೊಂಡ ಕಾವ್ಯವಾಗಿರುವುದರಿಂದ ಕಾಮಶಾಸ್ತ್ರದ ಕುರಿತು ಪ್ರಾಸಂಗಿಕವಾಗಿ ವರ್ಣಿಸಲಾಗಿದೆ.

ಜಯಶೇಖರ ಮತ್ತು ಸುರಭಾವತಿಯರಿಗೆ ಅರಮನೆಯ ಹೆಣ್ಣುಮಕ್ಕಳು ಕಾಮಶಾಸ್ತ್ರವನ್ನು ವ್ಯಾಖ್ಯಾನಿಸುವ ಪ್ರಸಂಗವಿದೆ.

> "ಬಳಿಕಂಗೋಪಾಂಗದ ಚಳಕದ ಜಾಣ
> ಕಳೆಯಿಂದ ಚದುರನುಡಿಗಳಿಂದ
> ಒಲಿದಂಗಜ ಶಾಸ್ತ್ರವ ವ್ಯಾಖ್ಯಾನಿಸಿ
> ತಿಳಿಪುವೊಲೊಡಗೂಡಿದರಂದು"(೪/೧೦)

ಕಾಮಶಾಸ್ತ್ರವು ಮದನಶಾಸ್ತ್ರ, ರತಿಶಾಸ್ತ್ರ, ಅಂಗಜಶಾಸ್ತ್ರ, ಪ್ರೇಮಕಲೆ ಎಂಬ ಹೆಸರಿನಿಂದ ಕರೆಯುತ್ತಿದ್ದು ಇದು ಶರೀರಕ್ಕೆ ಸಂಬಂಧಿಸಿದ ಶಾಸ್ತ್ರವಾಗಿತ್ತು. ಇದರ ಅಂಗ ಉಪಾಂಗಗಳನ್ನು ಚೆನ್ನಾಗಿ ತಿಳಿದು ಒಲಿಸಿಕೊಂಡಂತ ಹೆಣ್ಣುಮಕ್ಕಳು ಚಾಣಾಕ್ಷತನದಿಂದ ವ್ಯಾಖ್ಯಾನಿಸಿ ತಿಳಿಸುವಂತಹ ಕಲೆಯುಳ್ಳವರಾಗಿದ್ದರು. ದಾಂಪತ್ಯ ಜೀವನಕ್ಕೆ ಕಾಮಶಾಸ್ತ್ರದ ತಿಳುವಳಿಕೆ ಅಗತ್ಯವೆಂಬುದನ್ನು ದೇಪಕವಿ ಸೂಚಿಸಿದ್ದಾನೆ.

"ಪೆದೆಯೊದೆಯಲು ಪದೆದೊದವಿ ಬಿರಹಿಯೆರ್ದೆ
ಗದವನೊದವ ಉಳಿದಲರಂಬು
ಪೆದೆ ಪೊದ್ದದ ಗಲ್ದರನಳಲಿಪ ಮದನಶಾಸ್ತ್ರ
ವಿದೆಯಳಿಪಗೆ ಸಂಪಗೆಯೆಂದೆ(೧೨/೭೯)

ವಿರಹಿಗಳಿಗೆ, ಪ್ರೀತಿ, ಪ್ರೇಮ, ಕಾಮಗಳಿಂದ ವಂಚಿತರಾದವರಿಗೆ ಮದನ ಶಾಸ್ತ್ರವು ಹೃದಯಕ್ಕೆ, ಮನಸ್ಸಿಗೆ ಆಸೆಯನ್ನು ಮೂಡಿಸುವ ಸಂಪತ್ತಾಗಿತ್ತು.

ಮಾನವರು ಅಷ್ಟೇ ಅಲ್ಲದೆ ನಾಗರಿಕ ಪಕ್ಷಿಯು ಸಹ "ಶ್ರುತಿ, ನೀತಿ, ತರ್ಕ, ಭರತ, ವೈದ್ಯ, ಜ್ಯೋತಿಷ್ಯ, ಇತಿಹಾಸ, ಚಿತ್ರ, ಚಮತ್ಕಾರ, ಮಂತ್ರ, ಮೋಹನ ಮುಂತಾದ ವಿದ್ಯೆಯನ್ನು ತಿಳಿದಿರುವುದರ ಜೊತೆಗೆ ರತಿಶಾಸ್ತ್ರವನ್ನು"(೧೬/೧೩) ತಿಳಿದಿತ್ತು. ಆ ಕಾರಣದಿಂದ "ಮುಳಿದೋಪರ ಸವಿವಾತನಿತ್ತೊಂದಿಸಬಲ್ಲೆ"(೧೬/೧೪) ಎಂದರೆ ಅದು ಮುನಿಸಿಕೊಂಡ ಪ್ರಿಯತಮೆಯರ ಮನಸ್ಸನ್ನು ಒಳ್ಳೆಯ ಮಾತುಗಳಿಂದಲೇ ಸರಿಪಡಿಸುವ ಕಲೆ ಕರಗತವಾಗಿತ್ತೆಂದು ಹೇಳುತ್ತದೆ.

ವಿಕ್ರಮಕುಮಾರ ಪತ್ರಿಣಿಯರ ಸೌಂದರ್ಯಕ್ಕೆ ಆಕರ್ಷಿತನಾಗಿ ಅವಳನ್ನು ಸೇರಬೇಕೆಂಬ ಕಾತುರದಲ್ಲಿದ್ದಾಗ ನಾಗರಿಕ ಪಕ್ಷಿಯು "ಕತೆ, ಕಾವ್ಯ, ಇತಿಹಾಸವನ್ನು ಹೇಳುತ್ತ ವಿರಹವೇದನೆಯನ್ನು ನಿವಾರಿಸಲು ರತಿಶಾಸ್ತ್ರವನ್ನು ಹೇಳುತ್ತದೆ"(೨೪/೧೮) ಅವರಿಬ್ಬರು ಹೃದಯ ಮತ್ತು ಮನಸ್ಸುಗಳಿಂದ ಒಂದಾಗಿ ಸೊಗಸಾಗಿ ಕಂಡರು.

"ರತಿಶಾಸ್ತ್ರದ ಮಂತ್ರರಹಸ್ಯದ ಮಿಥುನ ದೇ
ವತೆಯರೊ ಸ್ಮರಯಂತ್ರ ಸೂತ್ರದ
ಪ್ರತುಮೆಗಳೊ ನೋಳ್ಪಡೆ ಸಂತಸ ಮೂ
ರುತಿಗಳೊ ದಂಪತಿಗಳೊ ಮೇಣಾ"(೨೬/೬೨)

ರತಿಶಾಸ್ತ್ರದ ಸಾರವನ್ನು ರಹಸ್ಯವಾಗಿ ಬಿಂಬಿಸುವಂತೆ ವಿಕ್ರಮ ಪತ್ರಿಣಿಯರು ಶೋಭಿಸಿದ್ದರು. ಇವರ ಜೋಡಿಯು "ಇಳೆಗೆ ಅಂದು ಮದನಶಾಸ್ತ್ರವ ಬಿತ್ತರಿಪಂತೆ"(೨೬/೬೪) ಇದ್ದರು ಎಂದು ಹೇಳುತ್ತ ಕವಿ ದೇಪರಾಜ ಸ್ತ್ರೀ ಪುರುಷರಿಬ್ಬರಿಗೂ ರತಿ-ಕಾಮಶಾಸ್ತ್ರದ ಜ್ಞಾನವನ್ನು ತಿಳಿದುಕೊಳ್ಳುವುದು ಅವಶ್ಯವೆಂಬುದನ್ನು ವ್ಯಕ್ತಪಡಿಸಿದ್ದಾನೆ. ಈ ಹಿನ್ನೆಲೆಯಲ್ಲಿ ಸತಿ-ಪತಿಗಳು ಮಾನಸಿಕವಾಗಿ ನೆಮ್ಮದಿಯಾಗಿರಲು ಹಾಗೂ ಮುಂದಿನ ಜನಾಂಗ ಸುರಕ್ಷಿತವಾಗಿರಲು ಕಾಮಶಾಸ್ತ್ರದ ತಿಳುವಳಿಕೆ ಅಗತ್ಯವೆನಿಸುತ್ತದೆ.

**೭.೫.೬. ಸ್ಮಶಾನ**

ಸ್ಮಶಾನವು ಸಾಮಾನ್ಯವಾಗಿ ಮನುಷ್ಯನ ಬುದುಕು ಅಂತ್ಯಗೊಂಡ ನಂತರ ಅವನ ಅಂತ್ಯಕ್ರಿಯೆ ನಡೆಯುವ ಸ್ಥಳವಾಗಿದೆ. ಅದು ಹೂಳುವ ಅಥವಾ ಸುಡುವ ಕ್ರಿಯೆ ಆಗಿರಬಹುದು. ಈ ಎರಡು ಕ್ರಿಯೆಗಳು ಜರುಗುವುದು ಮಸಣದಲ್ಲಿ. ಮಸಣವು ಶಿವನ ವಾಸಸ್ಥಾನವೆಂದು, ಕೆಲವರು ಕೈಲಾಸವೆಂದು ಹೇಳುತ್ತಾರೆ. ಮತ್ತೆ ಕೆಲವರು ಇದು ರುದ್ರನ ಆವಾಸ ಸ್ಥಾನವೆಂದು ಭಾವಿಸುತ್ತಾರೆ. ಮಸಣವು ಪ್ರಾಚೀನಕಾಲದಿಂದ ಇಂದಿನವರೆಗೂ ಪವಿತ್ರವಾದ ಸ್ಥಳವೆಂದು ಭಾವಿಸುತ್ತಾರೆ.

'ಮಸಣ' ಎಂಬ ಪದಕ್ಕೆ ಮಶಾಣ ಮಸಾಣ, ಸ್ಮಶಾನ, ಶವಗಳ ಅಂತ್ಯ ಸಂಸ್ಕಾರವನ್ನು ನಡೆಸುವ ಸ್ಥಳ, ಸುಡುಗಾಡು, ರುದ್ರಭೂಮಿ ಎಂಬ ಹೆಸರಿನಿಂದ ಕರೆಯುತ್ತಾರೆ. ಇಲ್ಲಿ ಮನುಷ್ಯ ಸತ್ತ ನಂತರ ನಿರ್ದಿಷ್ಟವಾದ ಸ್ಥಳದಲ್ಲಿ ನಡೆಸುವ ಅಂತ್ಯ ಸಂಸ್ಕಾರದ ವಿಧಿನಿಯಮಗಳಿರುತ್ತವೆ. ಬಂಧುಬಾಂಧವರು ಸೇರಿ ಆಯಾಯ ಮತಧರ್ಮ ಪದ್ಧತಿಗನುಗುಣವಾಗಿ ಶವಸಂಸ್ಕಾರ ಕಾರ್ಯವನ್ನು ನಡೆಸಿಕೊಂಡು ಬಂದಿರುತ್ತಾರೆ. ಮರಣ ಹೊಂದಿದ ವ್ಯಕ್ತಿಯನ್ನು ಪೂಜ್ಯಭಾವನೆಯಿಂದ ಗೌರವಿಸಿ ಆತ್ಮಕ್ಕೆ ಶಾಂತಿ ದೊರಕಲೆಂಬ ಉದ್ದೇಶದಿಂದ ಬೇರೆ ಬೇರೆ ನಂಬಿಕೆ, ಆಚರಣೆ, ಸಂಪ್ರದಾಯಗಳನ್ನು ನಡೆಸಿಕೊಂಡು ಬಂದಿರುತ್ತಾರೆ. ದೇಪರಾಜ ತನ್ನ ಕಾಲದಲ್ಲಿ ಪ್ರಚಲಿತವಿದ್ದ ಮಸಣದ ಚಿತ್ರಣ ಕುರಿತು ಸೊಬಗಿನ ಸೋನೆ ಕಾವ್ಯದಲ್ಲಿ ಅಭಿವ್ಯಕ್ತಿಸಿದ್ದಾನೆ. ಅದು "ಬೇವುತಿಹ ಹೆಣನುರಿಯಿಂದ ಬಗುಳುವ ನರಿ ನಾಯಿಗಳಿಂದ, ಭೂತ ಪಿಶಾಚಿಗಳ ಹಲ್ಲು ಮಸೆಯುವ ಭೀಕರವಾದ ದೃಶ್ಯವು ಸ್ಮಶಾನಗಳಲ್ಲಿತ್ತು"(೯/೧೬) ಅಲ್ಲಿ "ಮುರಿದ ವಿಮಾನ ಕಟ್ಟಳಿದ ಸಿದ್ದಿಗೆ, ಹರಿದಿಟ್ಟ ಹೂ ಮಾಲೆಗಳು, ಬಾಗಿನಗಳು, ಮೊರ, ತಾಳೋಲೆ, ಮುಕ್ಕುಳು, ಬಲಿಪಿಂಡಗಳಿಂದ ಕೂಡಿದ ದೃಶ್ಯವಿತ್ತು."(೯/೧೭)

"ಸ್ಮಶಾನದಲ್ಲಿ ಹೆಣ್ಣು ಪಿಶಾಚಿಗಳು ಅರೆಬರೆ ಬೆಂದ ಹೆಣಗಳ ಮಾಂಸವನ್ನು ಸುಟ್ಟು ಸವಿಯುತ್ತಿದ್ದವು."(೯/೧೮) "ಶಾಕಿನಿಯರ ಸಮೂಹವು ನಗುತ್ತ ಅಳುತ್ತ ಚಪ್ಪಾಳೆಯಾಕುತ್ತ ಹಾಡುತ್ತಿದ್ದವು"(೯/೧೯) ಅಲ್ಲೇ "ಮಹಾಸತಿಯರು ಹೂ ಮುಡಿದು ತಮ್ಮ ಪತಿಗಳನ್ನು ಹರಸುತ್ತ ಹಾಡುತ್ತ ಕುಣಿದಾಡುತ್ತ ಇರುವುದರಿಂದ ಅಲ್ಲಿ ಕಳೆಯೇರಿ ಮೆರೆದಿದ್ದರು"(೯/೨೧) "ಕಾಡುಸಿದ್ದರು ಹೆಣಗಳ ಬಾಯಲ್ಲಿ ಹಲವು ರೀತಿಯಲ್ಲಿ ಹೋಮ ಮಾಡುತ್ತಿದ್ದರು." ಈ ಎಲ್ಲಾ ದೃಶ್ಯಗಳಿಂದ ಸ್ಮಶಾನವು ಭೀಕರವಾಗಿತ್ತು.

ಅಂದರೆ ಸ್ಮಶಾನದಲ್ಲಿ ಹೆಣ್ಣು ಪಿಶಾಚಿಗಳು, ಶಾಕಿಣಿಯರು, ಕಾಡುಸಿದ್ದರು ಇದ್ದು ಇವರು ಅಸಂಗತವಾದ ರೀತಿಯಲ್ಲಿ ವರ್ತಿಸುತ್ತಿದ್ದರು. ಮಹಾಸತಿಯರು ಪತಿಗಳನ್ನು ಹರಸುತ್ತಿದ್ದರು. ಅಲ್ಲಿ ಮುರಿದ ವಿಮಾನ, ಕಟ್ಟುಬಿಚ್ಚಿದ ಸಿದ್ದಿಗೆ, ಹರಿದು ಬಿಸಾಡಿದ ಹೂಮಾಲೆಗಳು, ಮೊರ, ಬಾಗಿನ, ಬಲಿಪಿಂಡಗಳು ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದವು. ಇವೆಲ್ಲವುಗಳಿಂದ ಸ್ಮಶಾನ ಭಯಾನಕವಾಗಿತ್ತು.

ವಿಜಯನಗರ ಅರಸರ ಕಾಲದಲ್ಲಿ ನಂಬಿಕೆ, ಆಚರಣೆ, ಸಂಪ್ರದಾಯಗಳು ಸಾಮಾಜಿಕ ವ್ಯವಸ್ಥೆಯ ಭಾಗವಾಗಿ ಮೂಲ ಸ್ವರೂಪದಲ್ಲೇ ಆಚರಣೆಗೆ ಬಂದಿವೆ. ಅಂದಿನ ಜನತೆ ರಾಕ್ಷಸರ ತೊಂದರೆಗಳಿಂದ ಪಾರಾಗಲು ಅಸಂಖ್ಯಾತ ಕುರಿ, ಕೋಣಗಳನ್ನು ಬಲಿಕೊಟ್ಟು ಶಾಂತಿಯನ್ನು ಕಾಪಾಡಿಕೊಳ್ಳುತ್ತಿದ್ದರು. ಮಹಾಕಾಳಿಯಂತ ದೇವಿಗೆ ವಿವಿಧ ರೀತಿಯ ಪ್ರಾಣಿಗಳನ್ನು ಬಲಿಕೊಡುವುದರ ಜೊತೆಗೆ ಕೆಲವೊಮ್ಮೆ ನರಬಲಿಯನ್ನು ಕೊಡುತ್ತಿದ್ದರು. ಅಪರೂಪವಾಗಿ ಕೆಲವೊಮ್ಮೆ ಭಕ್ತರು ತಾವೇ ಆತ್ಮಬಲಿಯಾಗುತ್ತಿದ್ದರು. ದೈವೀ ಪುರುಷರು ಧರ್ಮವನ್ನು ಜಗತ್ತಿಗೆ ತೋರಿಸಲು ವಿವಿಧ ತೆರನಾದ ಪವಾಡಗಳನ್ನು ಮಾಡುತ್ತ ಬಂದಿದ್ದು, ಇವುಗಳಿಂದ ಭಕ್ತರಲ್ಲಿ ಧರ್ಮದ ಕುರಿತು ಅಚಲವಾದ ನಂಬಿಕೆ ಇರುವುದು ಕಂಡುಬರುತ್ತದೆ. ಪ್ರಾಪ್ತ ವಯಸ್ಸು ಹಾಗೂ ಮನಸ್ಸುಳ್ಳ

ಗಂಡು ಹೆಣ್ಣು ಪರಸ್ಪರ ಒಂದಾಗಲು ಗುರುಹಿರಿಯರ ಹಾಗೂ ದೈವದ ಆಶೀರ್ವಾದದೊಂದಿಗೆ ಸಾಮಾಜಿಕವಾಗಿ ಸರಳವಾದ ರೀತಿಯಲ್ಲಿ ನಡೆಯುವ ಒಪ್ಪಂದವೇ ಮದುವೆ.

ಹೆಣ್ಣಿನ ಮಾನ, ಪ್ರಾಣ ಕಳೆಯುವ ಅಪಹರಣದಂತಹ ಕೃತ್ಯಗಳನ್ನು ತಡೆಯಲು ಮುಂದಾಗುವ ವ್ಯಕ್ತಿಗಳನ್ನು ವೀರರೆಂದು ಅಂದಿನ ಸಮಾಜ ಗೌರವಿಸುತ್ತಿತ್ತು. ಇದೊಂದು ಸಂಪ್ರದಾಯವೆಂಬಂತೆ ಪ್ರಚಲಿತವಾಗಿತ್ತು. ಕಾಮಶಾಸ್ತ್ರವು ಮದನಶಾಸ್ತ್ರ, ಅಂಗಜಶಾಸ್ತ್ರ, ರತಿಶಾಸ್ತ್ರ, ಪ್ರೇಮಕಲೆ ಎಂಬ ಹೆಸರಿನಿಂದ ಗುರುತಿಸಿಕೊಂಡಿದ್ದು ಈ ಶಾಸ್ತ್ರಕ್ಕೆ ಸಂಬಂಧಿಸಿದ ಪ್ರತಿಯೊಂದು ವಿಷಯವನ್ನು ಅಂದಿನ ಕಾಲದ ಹೆಣ್ಣುಮಕ್ಕಳು ಚಾಣಾಕ್ಷತನದಿಂದ ವ್ಯಾಖ್ಯಾನಿಸಿ ತಿಳಿಸುವಂತಹ ಕಲೆಯಲ್ಲಿ ಪರಿಣಿತರಾಗಿದ್ದರು. ಆ ಕಾಲದಲ್ಲಿ ಸ್ಮಶಾನವು ಭಯಾನಕವಾಗಿತ್ತು. ಅಲ್ಲಿ ಮುರಿದ ವಿಮಾನ, ಕಟ್ಟುಬಿಚ್ಚಿದ ಸಿದ್ದಿಗೆ, ಹರಿದು ಬಿಸಾಡಿದ ಹೂಮಾಲೆಗಳು, ಮೊರ, ಬಾಗಿನ, ಬಲಿಪಿಂಡಗಳು ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದವು. ಹೆಣ್ಣು ಪಿಶಾಚಿಗಳು, ಶಾಕಿಣಿಯರು, ಕಾಡುಸಿದ್ದರು ಇದ್ದು ಅಸಂಗತವಾಗಿ ವರ್ತಿಸುತ್ತಿದ್ದರು. ಆದರೆ ಮಹಾಸತಿಯರು ತಮ್ಮ ಪತಿಯನ್ನು ಹಾರೈಸುತ್ತಿದ್ದುದು ವಿಶೇಷವಾಗಿತ್ತು. ಈ ಎಲ್ಲ ನಂಬಿಕೆ, ಆಚರಣೆ, ಸಂಪ್ರದಾಯಗಳು ಧರ್ಮದ ಚೌಕಟ್ಟಿನಲ್ಲೇ ಅಸ್ತಿತ್ವ ಪಡೆದಿವೆ. ಇವು ಕಾಲಾನಂತರದಲ್ಲಿ ಹಲವಾರು ಬದಲಾವಣೆ ಹೊಂದುತ್ತ ಸಾಗಿಬಂದಿರುವುದನ್ನು ಪ್ರಚಲಿತ ಸಮಾಜದಲ್ಲಿಯೂ ಕಾಣಬಹುದು.

## ಅಡಿ ಟಿಪ್ಪಣಿಗಳು

೧. ಎನ್. ಬಸವರಾಧ್ಯ (ಪ್ರ.ಸಂ.) ಕ.ಸಾ.ಪ. ಕನ್ನಡ ನಿಘಂಟು, ಸಂಪುಟ–೨,ಪುಟ ೮೨೭೩.

೨. ಅದೇ ಪುಟ ೮೪೫೦

೩. ಜಿ. ವೆಂಕಟಸುಬ್ಬಯ್ಯ (ಸಂ), ಕ.ಸಾ.ಪ. ಕನ್ನಡ ನಿಘಂಟು, ಪುಟ ೮೩೨.

೪. ಶಾಂತಿನಾಥ ದಿಬ್ಬದ, ಪಂಪಭಾರತ ಒಂದು ಸಾಂಸ್ಕೃತಿಕ ಅಧ್ಯಯನ, ಪುಟ ೬೩.

೫. ಡಿ.ವಿ.ಜಿ. ಸಂಸ್ಕೃತಿ ಪುಟ ೫.

೬. ಡಿ.ವಿ.ಜಿ. ಸಂಸ್ಕೃತಿ ಪುಟ ೧೪–೧೫

೭. ಶಂಬಾ ಜೋಶಿ, ಕರ್ಣಾಟಕ ಸಂಸ್ಕೃತಿಯ ಪೂರ್ವಪೀಠಿಕೆ ಪುಟ ೧೨.

೮. ಎಚ್. ತಿಪ್ಪೇರುದ್ರಸ್ವಾಮಿ ಕರ್ಣಾಟಕ ಸಂಸ್ಕೃತಿ ಸಮೀಕ್ಷೆ ಪುಟ–೬

೯. ಅದೇ ಪುಟ–೧೨.

೧೦. ಅದೇ ಪುಟ–೧೪

೧೧. ಯಜ್ಞನಾರಾಯಣ ಉಡುಪ, ಪುರಾಣ ಭಾರತ ಕೋಶ, ಪುಟ ೬೭೪

೧೨. ಎನ್. ಬಸವಾರಾಧ್ಯ, ಕನ್ನಡ ನಿಘಂಟು ಸಂ.೭, ಪುಟ–೬೮೩೭

೧೩. ಯಳನಾಡು ಅಂಜನಪ್ಪ (ಸಂ) ಧರ್ಮ ಮತ್ತು ಮುಕ್ತವಿಚಾರ ಪುಟ–೧೪

೧೪. ಎಚ್. ಹನುಮಂತರಾಯಪ್ಪ, ಧರ್ಮ ಮತ್ತು ಕಾವ್ಯಧರ್ಮ, ಪುಟ–೧೧

೧೫. ವೆಂಕಟಸುಬ್ಬಯ್ಯ ಜಿ. (ಪ್ರ.ಸಂ.) ಕ.ಸಾ.ಪ. ಕನ್ನಡ ನಿಘಂಟು ಸಂ.೪, ಪುಟ–೪೧೮೫

೧೬. ಎಂ. ಮರಿಯಪ್ಪ ಭಟ್ಟ (ಪರಿಷ್ಕೃತ) ಕಿಟೆಲ್‌ರ ಕನ್ನಡ ಇಂಗ್ಲೀಷ್ ನಿಘಂಟು, ಸಂ. ೨, ಪುಟ– ೮೫೬

೧೭. ವೆಂಕಟಸುಬ್ಬಯ್ಯ ಜಿ. (ಪ್ರ.ಸಂ.) ಕ.ಸಾ.ಪ. ಕನ್ನಡ ನಿಘಂಟು, ಸಂ.೪, ಪುಟ–೪೦೮೭

೧೮. ಸಿ. ವೀರಣ್ಣ, ಕನ್ನಡ ಸಾಹಿತ್ಯ ಚಾರಿತ್ರಿಕ ಬೆಳವಣಿಗೆ, ೨, ಪುಟ–೧೪

೧೯. ಯಜ್ಞನಾರಾಯಣ ಉಡುಪ, ಪುರಾಣ ಭಾರತಕೋಶ, ಪುಟ–೬೨೫

೨೦. ಯಜ್ಞನಾರಾಯಣ ಉಡುಪ, ಪುರಾಣ ಭಾರತಕೋಶ, ಪುಟ–೧೧೭

೨೧. ವೆಂಕಟಸುಬ್ಬಯ್ಯ ಜಿ., (ಪ್ರ.ಸಂ.) ಕನ್ನಡ ನಿಘಂಟು, ಕ.ಸಾ.ಪ. ಸಂಪುಟ–೨, ಪುಟ–೧೭೧೨

೨೨. ಆರ್.ಸಿ.ಹಿರೇಮಠ ಮಹಾಯಾತ್ರೆ ಪುಟ–೮೬

೨೩. ಎಂ.ಚಿದಾನಂದಮೂರ್ತಿ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ ೧೬೮

೨೪. ಸಿ.ನಾಗಭೂಷಣ–ಏಕಾಂತರಾಮಯ್ಯ ಮತ್ತು ಆದಯ್ಯ ಒಂದು ತುಲನಾತ್ಮಕ ಅಧ್ಯಯನ ಪುಟ, ೯–೧೦ ಮೊದಲ ಮುದ್ರಣ ೨೦೦೫

೨೫. ಎಂ. ಮರಿಯಪ್ಪ ಭಟ್ಟ (ಪರಿಷ್ಕೃತ) ಕಿಟೆಲ್‌ರ ಕನ್ನಡ ಇಂಗ್ಲಿಷ್ ನಿಘಂಟು, ಸಂಪುಟ ೪, ಪುಟ ೧೪೦೨

೨೬. ಎನ್. ಬಸವರಾಧ್ಯ (ಪ್ರಸಂ.) ಕನ್ನಡ ನಿಘಂಟು, ಕ.ಸಾ.ಪ. ಸಂಪುಟ–೭, ಪುಟ– ೭೫೩೪–೩೫

೨೭. ಶಾಂತಿನಾಥ ದಿಬ್ಬದ, ಪಂಪಭಾರತ ಒಂದು ಸಾಂಸ್ಕೃತಿಕ ಅಧ್ಯಯನ, ಪುಟ ೯೭

೨೮. ಅದೇ ಪುಟ ೧೨೧

೨೯. ಮುಳಿಯತಿಮ್ಮಪ್ಪಯ್ಯ, ನಾಡೋಜ ಪಂಪ (ಸಂ), ಎಂ.ಕೇಶವಭಟ್ಟ, ಪುಟ ೪೧

೩೦. ವೆಂಕಟಸುಬ್ಬಯ್ಯ (ಪ್ರಸಂ) ಕನ್ನಡ ನಿಘಂಟು, ಸಂಪುಟ ೪, ಪುಟ ೪೭೯೬

೩೧. ಎಂ.ಚಿದಾನಂದಮೂರ್ತಿ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪುಟ ೩೩೨

೩೨. ನಾಗಭೂಷಣ ಸಿ., ಏಕಾಂತರಾಮಯ್ಯ ಮತ್ತು ಆದಯ್ಯ ಒಂದು ತೌಲನಿಕ ಅಧ್ಯಯನ ಪುಟ ೫೨

೩೩. ಚಿದಾಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ ೩೧೫



## ಅಧ್ಯಾಯ: ಎಂಟು

# ಸಮಾರೋಪ

ಕನ್ನಡ ಕಾವ್ಯ ಪರಂಪರೆಯಲ್ಲಿ 'ಸೊಬಗಿನ ಸೋನೆ' ಸಾಂಗತ್ಯದ ಕಾವ್ಯಗಳಲ್ಲಿಯೇ ಮೊದಲ ಕಾವ್ಯ. ಕನ್ನಡ ಸಾಹಿತ್ಯದಲ್ಲಿ ಪಂಪ ಚಂಪೂ ಕಾವ್ಯಕ್ಕೆ, ಹರಿಹರ ರಗಳೆಗೆ, ರಾಘವಾಂಕ ಷಟ್ಪದಿಗೆ, ಸರ್ವಜ್ಞ ತ್ರಿಪದಿಗೆ, ರತ್ನಾಕರವರ್ಣಿ ಸಾಂಗತ್ಯಕ್ಕೆ ಪ್ರಸಿದ್ಧರಾಗಿದ್ದಾರೆ. ರತ್ನಾಕರವರ್ಣಿ ಸಾಂಗತ್ಯಕ್ಕೆ ಪ್ರಸಿದ್ಧರಾದಂತೆ ದೇಪರಾಜ ಸಾಂಗತ್ಯ ಛಂದಸ್ಸಿಗೆ ಆದಿಕವಿಯಾಗಿ ಪ್ರಸಿದ್ಧನಾಗಿದ್ದಾನೆ. ಈತನ ಕಾವ್ಯ ಸತಿ–ಪತಿ ಸಂಭಾಷಣಾ ಶೈಲಿಯಲ್ಲಿ ಮಹಿಳೆಯರ ಸಂವೇದನೆಗಳನ್ನು ಸಾಂಗತ್ಯ ಕಾವ್ಯವಾಗಿ ರಚಿಸಿದ್ದಾನೆ. ಈ ಹಿನ್ನೆಲೆಯಲ್ಲಿ ದೇಪರಾಜ ಮತ್ತು ಆತನ ಸೊಬಗಿನ ಸೋನೆ ಕಾವ್ಯವನ್ನು ಸಮಗ್ರವಾಗಿ ಅಧ್ಯಯನ ನಡೆಸಿ ವಿವಿಧ ಫಲಿತಗಳನ್ನು ಕಂಡುಕೊಳ್ಳಲಾಗಿದೆ.

* ಕವಿ ಹೆಸರಿನ ಬಗ್ಗೆ ಹಲವು ಗೊಂದಲಗಳಿದ್ದು, ಒಂದಸೇ ದೇವರಾಯ, ಇಲ್ಲವೇ ದೇವರಾಜ ಈತನೇ ದೇಪರಾಜ ಎಂಬ ಅಭಿಪ್ರಾಯ ಇತ್ತು. ವಿದ್ವಾಂಸರ ಅಭಿಪ್ರಾಯಗಳನ್ನು ಸಂಗ್ರಹಿಸಿ ಸೊಬಗಿನ ಸೋನೆ ಕಾವ್ಯದಲ್ಲಿ ವ್ಯಕ್ತಗೊಂಡ ದೇಪುಗ, ದೇಪಭೂಪ, ದೇಪನೃಪ, ದೇಪಭೂಪಾಲ, ದೇಪಭೂವರ, ದೇಪಭೂಭುಜ, ದೇಪಮಹಿಪತಿ, ಕಂಪಸುತ, ಕಂಪಜ ಎಂಬ ನಾಮರೂಪಗಳು ಕಾವ್ಯದ ಬೇರೆ ಬೇರೆ ಸಂದರ್ಭಗಳಲ್ಲಿ ಇರುವುದನ್ನು ಅಧ್ಯಯನ ನಡೆಸಿ ದೇವರಾಯನೇ ಬೇರೆ ದೇಪರಾಜನೇ ಬೇರೆ ಎನ್ನುವ ಅಭಿಪ್ರಾಯವನ್ನು ಮಂಡಿಸಲಾಗಿದೆ.

* ಕವಿಯ ತಂದೆ ಕಂಪ ಎಂದಿದ್ದು ವಿಜಯನಗರ ಸಾಮ್ರಾಜ್ಯದ ಮೊದಲ ವಂಶ ಸಂಗಮ ವಂಶಾವಳಿಯಲ್ಲಿ ಮೂರು–ನಾಲ್ಕು ಜನ ಕಂಪಣರ ಪ್ರಸ್ತಾಪವಿದೆ. ವಿವಿಧ ವಿದ್ವಾಂಸರ ಅಭಿಪ್ರಾಯಗಳನ್ನು ಪರಾಮರ್ಶಿಸಿ ೨ನೇ ಕಂಪನೇ ಪ್ರಸ್ತುತ ದೇಪರಾಜನ ತಂದೆ ಎನ್ನುವ ಅಭಿಪ್ರಾಯಕ್ಕೆ ಬರಲಾಗಿದೆ. ಹಾಗಾದರೆ ಗಂಗಾಂಬಿಕೆ ಈತನ ತಾಯಿಯಾಗುತ್ತಾಳೆ. ಕವಿ ಚರಿತೆಕಾರರು ಕವಿಯ ಕಾಲವನ್ನು ೧೪೧೦ ಎಂದು ಸೂಚಿಸಿರುತ್ತಾರೆ. ಈ ಅಭಿಪ್ರಾಯವನ್ನು ಒಪ್ಪಿಕೊಳ್ಳಲಾಗಿದೆ. ದೇಪರಾಜ ತನ್ನ ಕಾವ್ಯದಲ್ಲಿ ಕಾಪಾಲಿಕರ ವರ್ಣನೆ ಮಾಡಿದ್ದಾನೆ. ಅಲ್ಲಿ ಶಿವ ಪಾರ್ವತಿಯರ ವರ್ಣನೆ ಪ್ರಧಾನವಾಗಿರುವುದರಿಂದ ಶೈವ ಮತಕ್ಕೆ ಸೇರಿದ್ದಾನೆಂಬ ಅಭಿಪ್ರಾಯಕ್ಕೆ ಬರಲಾಗಿದೆ. ಈ ಕವಿಯ ಮತ್ತೊಂದು ಕಾವ್ಯ 'ಅಮರುಕ' (ಅಲಭ್ಯ) ಸಂಸ್ಕೃತದಿಂದ

ಕನ್ನಡಕ್ಕೆ ಅನುವಾದಗೊಂಡ ಪರಿವರ್ಧಿನಿ ಷಟ್ಪದಿಯ ಮೊದಲ ಕಾವ್ಯವಾಗಿದೆ. ಈ ಹಿನ್ನೆಲೆಯಿಂದ ದೇಪರಾಜ ಹೊಸ ಛಂದಸ್ಸಿನ ನಿರ್ಮಾಣಕ್ಕೆ ನಾಂದಿ ಹಾಡಿದ್ದಾನೆ.

* ಹಲವು ವಿಶೇಷಗಳಿಂದ ಕೂಡಿದ ಸೊಬಗಿನ ಸೋನೆ ಕಾವ್ಯದ ರಚನೆಗೆ ಇರುವ ಪ್ರೇರಣೆಗಳೇನು ಎಂಬ ಕುತೂಹಲ ವಿದ್ವಾಂಸರ ಅಭಿಪ್ರಾಯಗಳ ಹಿನ್ನೆಲೆಯಲ್ಲಿ ಗಮನಿಸಿದಾಗ ಕನ್ನಡ ಸಾಹಿತ್ಯದ ಯಾವುದೇ ಕೃತಿಗಳು ನೇರವಾಗಿ ಪ್ರೇರಣೆ ಪಡೆಯದೇ ಅನುಸಂಧಾನದ ಮಾರ್ಗ ಅನುಸರಿಸಿವೆ. ಹಾಗೆಯೇ ಈತನೂ ಪ್ರತಿಭಾನ್ವಿತನಾಗಿರುವುದರಿಂದ ಸಮಕಾಲೀನ ಸಮಸ್ಯೆಗಳ ಅಭಿವ್ಯಕ್ತಿಗಾಗಿ ಹತ್ತಾರು ಕಾವ್ಯಗಳ ಪ್ರೇರಣೆಯನ್ನು ಪಡೆದು ಸ್ವತಃ ಕಥೆಗಳನ್ನು ಸೃಜಿಸಿ ಅನುಸಂಧಾನ ಮಾರ್ಗದ ಫಲಿತವಾಗಿ ಈ ಕಾವ್ಯ ರಚಿಸಿದ್ದಾನೆ. ನಂತರ ಈ ಕಾವ್ಯವು ವರ್ಧಮಾನಚರಿತೆ, ವಿಕ್ರಮವಿಲಾಸ, ಮದನಮೋಹಿನಿ ಕಥೆ, ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ ಎಂಬ ಕಾವ್ಯಗಳ ಮೇಲೆ ಪ್ರಭಾವ ಬೀರಿರುವುದನ್ನು ಕಂಡುಕೊಳ್ಳಲಾಗಿದೆ. ಸೊಬಗಿನ ಸೋನೆಯ ಕೆಲವೊಂದು ಪದ್ಯಗಳು ನಂತರದ ಕವಿಗಳಿಗೆ ಸ್ಫೂರ್ತಿಯಾಗಿ ರಚನೆಯಲ್ಲೂ ಹೋಲಿಕೆ ಇರುವುದನ್ನು ಗುರುತಿಸಲಾಗಿದೆ.

* ಸೊಬಗಿನ ಸೋನೆ ಕಾವ್ಯದ ವಸ್ತುವನ್ನು ಕಾವ್ಯದ ಪಾತ್ರಗಳ ಹಿನ್ನೆಲೆಯಲ್ಲಿ ವಿಶ್ಲೇಷಣೆ ಮಾಡಲಾಗಿದೆ. ಪುರುಷ ಮತ್ತು ಸ್ತ್ರೀ ಪಾತ್ರಗಳನ್ನು ಪರಿಚಯಿಸಿ ಕಾವ್ಯವನ್ನು ಸಾಂಸ್ಕೃತಿಕ ದೃಷ್ಟಿಕೋನದಿಂದ ವಿಮರ್ಶಿಸಲಾಗಿದೆ. ಈ ಕಾವ್ಯ ಯುದ್ಧದ ವರ್ಣನೆಗಳಿಲ್ಲದೆ ಮಹಿಳಾ ಪ್ರಧಾನವಾದ ಕಾವ್ಯವೆನಿಸಿದೆ. ಹೆಣ್ಣಿಗೆ ಹೆಣ್ಣೇ ಶತ್ರು ಎಂಬ ಭಾವವಿರದೆ ಪ್ರೀತಿ, ಸ್ನೇಹ, ಮಾತೃತ್ವ ಭಾವನೆಗಳನ್ನು ಇಲ್ಲಿನ ಸ್ತ್ರೀಪಾತ್ರಗಳು ವ್ಯಕ್ತಪಡಿಸುತ್ತವೆ. ವಿಜಯನಗರ ಸಾಮ್ರಾಜ್ಯದಲ್ಲಿ ಕನ್ಯ ಅಪಹರಣದಂತಹ ಘಟನೆಗಳು ರಾಜಕೀಯ ದ್ವೇಷಕ್ಕೆ ಆಗಾಗ್ಗೆ ನಡೆಯುತ್ತಿರಬಹುದೆಂಬುದನ್ನು ಕಲ್ಪಿತ ಕಥೆಯಿಂದ ತಿಳಿಸಲಾಗಿದೆ. ಅಂದಿನ ಕಾಲದ ಜನತೆ ಬರಗಾಲ, ಕ್ಷಾಮ ತಲೆದೋರಿದಾಗ ಮಾರಿದೇವತೆಗೆ ಪ್ರಾಣಿಬಲಿಯನ್ನಿತ್ತು ಪರಿಹಾರ ಸಿಗದಿದ್ದಾಗ ಋಷಿಮುನಿಗಳ ಮಾರ್ಗದರ್ಶನವನ್ನು ಪಡೆಯುತ್ತಿದ್ದರೆಂಬುದನ್ನು ರೋಷಭಾಸ್ಕರಮುನಿ ಸೌಂದರರಾಜ ಇವರ ಪ್ರಸಂಗದಿಂದ ತಿಳಿಯುತ್ತದೆ. ಅರಸನ ಮಗಳು ಪ್ರಭುತ್ವದ ವಿಚಾರಗಳನ್ನು ಪ್ರಶ್ನಿಸುವ, ಧಿಕ್ಕರಿಸುವ ನಿಲುವು ವ್ಯಕ್ತವಾಗಿರುವುದನ್ನು ಗುರುತಿಸಲಾಗಿದೆ. ಈ ಕಾವ್ಯದಲ್ಲಿ ಗುರು-ಹಿರಿಯರ, ತಂದೆ-ತಾಯಿಗಳ, ಒಡೆಯ-ಗಂಡನ, ಗೆಳೆಯರ ವಿವೇಕದ ಮಾತುಗಳನ್ನು ತಿರಸ್ಕರಿಸದೇ ತಿಳಿದು ಪಾಲಿಸಬೇಕೆಂಬ ನೀತಿಯನ್ನು ಸಾರುತ್ತದೆ. ಹಂಪಿಯ ಪರಿಸರವು ಹಲವು ಪ್ರಾಣಿ ಪಕ್ಷಿಗಳಿಂದ ಕೂಡಿದ್ದು ಅದರಲ್ಲೂ ಮುಖ್ಯವಾಗಿ ಹಂದಿ ಬೇಟೆ ವಿಶೇಷವಾಗಿ ನಡೆಯುತ್ತಿತ್ತು ಎಂಬ ವಿಚಾರ ಈ ಕಾವ್ಯದಲ್ಲಿ ವರ್ಣನೆಗೊಂಡಿದೆ. ಬೇಡರು ಬೇಟೆಯಿಂದ ತಮ್ಮ ಉಪ ಜೀವನ ಸಾಗಿಸುತ್ತಿದ್ದು ಕೆಲವೊಮ್ಮೆ ವ್ಯವಹಾರಿಕವಾಗಿ ಮಾರಾಟ ನಡೆಸಿ ವಿಚಾರಣೆಯಲ್ಲಿ ಸಿಕ್ಕಿಬಿದ್ದರೆ, ತಮ್ಮ ಬದುಕು ದುರಂತಕ್ಕೆ ಈಡಾಗುವುದೆಂಬ ವಿಚಾರವು 'ಬರಗೆ'ಯ ಚಿತ್ರಣದಲ್ಲಿ ವ್ಯಕ್ತವಾಗಿದೆ. ಕಾವ್ಯದ ನಾಯಕ ವಿಕ್ರಮ ಅತಿಮಾನುಷ, ಅಲೌಕಿಕ ವ್ಯಕ್ತಿಯಾಗಿ, ಶಿವಭಕ್ತನಾಗಿ ಕಾವ್ಯದಲ್ಲಿ ಚಿತ್ರಣಗೊಂಡಿದ್ದಾನೆ. ವಿಕ್ರಮ ಸುಂದರ ಕನ್ಯೆಯರನ್ನು ಆಸೆ ಪಡದೇ ಕನ್ಯೆಯರ ಮನದಿಚ್ಛೆಯಂತೆ ವಿವಾಹ ನೆರವೇರಿಸುವುದು ವಿಶೇಷವೆನಿಸುತ್ತದೆ.

ಸ್ತ್ರೀ-ಪಾತ್ರಗಳು ತಮ್ಮ ಸಂವೇದನೆಗಳಿಗೆ ಪರಿಹಾರವನ್ನು ಕಂಡುಕೊಳ್ಳುವಲ್ಲಿ ಸಫಲತೆಯನ್ನು ಕಂಡಿವೆ. ಕಾವ್ಯದಲ್ಲಿ ಅಂತಿಮವಾಗಿ ವಿಕ್ರಮ ಪತ್ರಿಣಿಯರ 'ಅಗಲಿಕೆಯಿಂದ ಕಾವ್ಯ ಮುಕ್ತಾಯವಾಗುತ್ತದೆ. ಇದು ಅಪೂರ್ಣವಾಗಿದೆ ಎಂಬ ನಿಲುವು ವಿದ್ವಾಂಸರಲ್ಲಿದೆ. ಆದರೆ ಕವಿ ಧಾರ್ಮಿಕ ಪುರುಷನಾದ ವಿಕ್ರಮನನ್ನು ಸಂಸಾರಿಕನನ್ನಾಗಿ ಬಿಂಬಿಸುವ ಉದ್ದೇಶವಿರುವುದಿಲ್ಲ. ಹಾಗಾಗಿ ಕಾವ್ಯ ಪೂರ್ಣಗೊಂಡಿದೆ.

ನಡುಗನ್ನಡ ಕಾಲದಲ್ಲಿ ಪ್ರಭುತ್ವವನ್ನು ಪ್ರಶ್ನಿಸುವ ಜನಪದೀಯ ಭಾವನೆಗಳನ್ನು ಶಿಷ್ಟರೂಪದಲ್ಲಿ ದೇಶೀಯ ಛಂದಸ್ಸಿನ ಹೊಸ ಪ್ರಯೋಗಕ್ಕೆ ದೇಪರಾಜ ಕೈಹಾಕಿದ್ದಾನೆ. ಕಥೆಗೆ ಹೊಸ ಶೈಲಿ, ಛಂದಸ್ಸುಗಳ ಅರಿವು ಜನಸಾಮಾನ್ಯರಲ್ಲಿ ಮೂಡಿಸಬೇಕೆಂಬ ಆಶಯ ಕವಿಗಿದೆ.

ಸೊಬಗಿನ ಸೋನೆಯ ಪದ್ಯಗಳು ಸರಳ ಹಾಗೂ ನೇರವಾಗಿವೆ. ನಿದರ್ಶನಕ್ಕೆ ಈ ಪದ್ಯ ಗಮನಿಸಬಹುದು.

ನಾರಿ ಕೇಳ್ವಳು ಕಳಾವಿದೆ ಪೇಳುವ
ನಾ ರಸಿಕನು ದೇಪನೃಪನೆನೆ
ಆರಾಲಿಸರಾರೋದರು ಕಥೆಯದ
ನಾರು ಪೊಗಳದವರಿಳೆಯೊಳು

ಕಾವ್ಯದಲ್ಲಿ ಗಾದೆ ಅಥವಾ ಸೂಕ್ತಿಗಳು ಕವಿಯ ಅನುಭವದ ಪ್ರತೀಕವಾಗಿ ವ್ಯಕ್ತವಾಗಿವೆ. ಉದಾಹರಣೆಗೆ ಈ ಕೆಳಗಿನ ಕೆಲವು ಗಾದೆಗಳನ್ನು ಗಮನಿಸಬಹುದು.

'ಸಂಸಾರದ ಸುಖಸಾರವಿಲ್ಲ ಬಾಲಕರಿಲ್ಲದವರಿಗೆ'
'ಮಾರಿಯ ಕೆಣಕಿ ಬಾಳುವನಾರೆ'
'ಪಗೆವನಾಯುಧವೆ ಪಗೆಗೆ ಪಗೆ'
'ತಲೆಯಿಲ್ಲದೊಡಲಿದು ಪ್ರಭುವಿಲ್ಲದೊಳಲೆಂದು'
'ಬಡಿದು ಭಕ್ತಿಯ ಮಾಡಿಸಬೇಡ'
'ಪಚ್ಚೆಯಿರಲು ಪರಿಕಿಸಲೇಕೆ'
'ಕಳೆಯಿಲ್ಲದವರು ಕೇಳಿದರೆ ಕಬ್ಬಕಳೆ ಪೆಚ್ಚಿ ಬೆಳವುದು'
'ಕಳೆಯುಳ್ಳವರಾಲಿಸೆ ಕಬ್ಬವದು ಕಳೆದಳೆವವು'

ಇಲ್ಲಿ ಕವಿ 'ಕಳೆ' ಎಂಬ ಪದವನ್ನು ಶ್ಲೇಷಾರ್ಥದಲ್ಲಿ ಬಳಸಿ ಹೊಸ ನುಡಿಗಟ್ಟನ್ನು ರಚಿಸಿದ್ದಾನೆ.

ನೆಲಗೆಟ್ಟರೆ ನೆಲ ಹೊಱದೆಂಬ ನಾಣ್ನುಡಿ. ಇಂತಹ ಸೂಕ್ತಿಗಳು ಕವಿಯ ಲೋಕಾನುಭವಕ್ಕೆ, ಭಾಷಾ ಪ್ರೌಢಿಮೆಗೆ ಸಾಕ್ಷೀಭೂತವಾಗಿವೆ. ಸತಿ-ಪತಿ ಸಂಭಾಷಣಾ ಶೈಲಿ ಕೇಳುಗರಲ್ಲಿ ಮತ್ತೆ ಮತ್ತೆ ಕುತೂಹಲ ಮೂಡಿಸುತ್ತದೆ. ಸತಿಯು ಮುನ್ನಱೆಯದ ಮಂಗಳವಪ್ಪೊಂದು ಕಥೆವೇಳ ಎಂದರೆ, ಪತಿ ಎಲೆಪ್ರಿಯೆ ಕೇಳು ತೊಳದ ಮುತ್ತು ಕರತಳಾಮಳಕವೀ ಕಥೆ ಸೊಬಗಿನ ಸೋನೆ ಎನ್ನುತ್ತಾಳೆ. ಹೀಗೆ ಕಾವ್ಯದುದ್ದಕ್ಕೂ ಸತಿಪತಿಯನ್ನು ಪತಿಸತಿಯನ್ನು ಸಂಭೋದಿಸುತ್ತ ಕಾವ್ಯ

ಸಾಗುತ್ತದೆ. ವಸ್ತು ಚಿಕ್ಕದಾದರೂ ಅತಿಯಾದ ವರ್ಣನೆಗಳಿಂದ ಕಾವ್ಯ ವಿಸ್ತಾರತೆಯನ್ನು ಪಡೆದುಕೊಂಡಿದೆ.

* ಸೊಬಗಿನ ಸೋನೆ ಶಬ್ದವನ್ನು ನಿಘಂಟಿನ ಹಿನ್ನೆಲೆಯಲ್ಲಿ ಗ್ರಹಿಸಿ ಇದು ಸೊಗಸಿನ ವರ್ಣನೆ, ಸೌಂದರ್ಯದ ವರ್ಣನೆ ಚೆಲುವಿನ ಸಂಪತ್ತು, ಸಮೃದ್ಧಮಳೆ, ಸೊಗಸಾದ ಮಳೆ ಎಂದು ಅರ್ಥೈಸಲಾಗಿದೆ. ಕಾವ್ಯದ ಹಿನ್ನೆಲೆಯಲ್ಲಿ ಸೊಬಗನ್ನು ಹೇಳುವ, ಕೇಳುವ ಗೇಯತೆ ಅಥವಾ ಲಯಗಾರಿಕೆ ಕುರಿತಿದೆ ಎನಿಸುತ್ತದೆ. ವಸ್ತುವಿನ ಆಯ್ಕೆ ಮತ್ತು ಅದನ್ನು ಹೇಳುವ, ಹಾಡುವ, ಕೇಳುವ ಕಲೆ ಮುಖ್ಯ ಎಂಬ ಭಾವವಿದೆ. ಛಂದಸ್ಸಿನ ಕುರಿತಂತೆ ಸೊಬಗಿನ ಸೋನೆ ಎಂಬುದೇ ಸಾಂಗತ್ಯದ ಮೊದಲ ಪ್ರಯೋಗ ಇದರ ಮುಂದುವರಿಕೆಯಾಗಿ ಶುದ್ಧಸಾಂಗತ್ಯ ರಚನೆ ಆಗಿದೆ. ಬೇರೆ ಬೇರೆ ವಿದ್ವಾಂಸರ ಅಭಿಪ್ರಾಯಗಳಿಂದ ಸೋನೆಸಾಂಗತ್ಯವೆಂಬ ಪ್ರಕಾರವಿದೆ. ಇಡಿಯಾಗಿ ಸಾಂಗತ್ಯ ಸಾಹಿತ್ಯವನ್ನು ಗಮನಿಸಿದಾಗ 'ಸೊಬಗಿನ ಸೋನೆ' ಛಂದಸ್ಸು ಸಾಂಗತ್ಯದ ಪ್ರಕಾರವೆಂದು, ಈ ಪ್ರಕಾರಕ್ಕೆ ದೇಪರಾಜ ಮೊದಲಿಗನಾಗಿದ್ದು, ಈತನ ಕಾವ್ಯ ಸೊಬಗಿನ ಸೋನೆಯೇ ಮೊದಲನೆಯದೆಂದು ಸ್ಪಷ್ಟವಾಗುತ್ತದೆ. ನಡುಗನ್ನಡ ಕಾಲದ ಕಾವ್ಯದಲ್ಲಿ ಪ್ರಸಿದ್ಧಿಗೆ ಬಂದ ದೇಸೀ ಛಂದೋ ಪ್ರಕಾರಗಳಾದ ರಗಳೆ, ಷಟ್ಪದಿ, ತ್ರಿಪದಿಯಂತೆ ಸಾಂಗತ್ಯ ಶಿಷ್ಟಸಾಹಿತ್ಯದಲ್ಲಿ ಮೊದಲಬಾರಿಗೆ ಕಾವ್ಯರೂಪದಲ್ಲಿ ಪ್ರಯೋಗಗೊಂಡಿರುವುದು ಸೊಬಗಿನ ಸೋನೆಯ ವಿಶೇಷವಾಗಿದೆ. ಈ ಕಾವ್ಯದ ಒಡಲಲ್ಲಿ ಜನಪದ ಅಂಶಗಳನ್ನು ಒಳಗೊಂಡ ಪದ್ಯಗಳಿದ್ದು 'ಹಾಡುಗಬ್ಬ'ದ ಪ್ರಯೋಗವನ್ನು ಮಾಡಿರುವುದು ಸ್ಪಷ್ಟವಾಗುತ್ತದೆ.

ಕಂದನೆ ಜೋ ಕಣ್ಣಿಗೆ ಮಧುಯುತುಮಾ
ಕಂದನೆ ಜೋ ನಾರಿ ಹೃದಯಕೆ
ಕಂದರ್ಪನೆ ಜೋ ವಂಶೋರ್ಜಿತ ತಿಲಕಾ
ನಂದ ಜೋಯೆಂದು ಪಾಡಿದರಂದು (೪-೨೯)

ಈ ತೆರನಾದ ಪದ್ಯದಲ್ಲಿ ಮಹಿಳೆಯರ ಹಾಡಿನ ಗೇಯ ಗುಣವಿರುವುದು ಕಂಡುಬರುತ್ತದೆ.

ಈ ಕಾವ್ಯದ ನಂತರ ರಚನೆಗೊಂಡ 'ಮದನಮೋಹನಿ ಕಥೆ' ಇದೇ ಛಂದಸ್ಸನ್ನು ಅನುಸರಿಸಿ ಬರೆದ ಕಾವ್ಯ. ಈ ಕೃತಿಯಲ್ಲಿ ಬಳಕೆಯಾಗಿರುವ ಛಂದಸ್ಸನ್ನು 'ಸೊಬಗಿನ ಸೋನೆ ವರ್ಣ' ಎಂದು ಕರೆದಿರುವುದು ದೇಪರಾಜನ ಹೆಚ್ಚುಗಾರಿಕೆಯೆಂದೇ ತಿಳಿಯಬೇಕು. ಹೆಣ್ಣುಮಕ್ಕಳ ಸಾಹಿತ್ಯವೆಂದು ಪ್ರಸಿದ್ಧಿಪಡೆದ ಈ ಸಾಂಗತ್ಯವನ್ನು ಹದಿಬದೆಯ ಧರ್ಮ, ಭರತೇಶವೈಭವದಂತಹ ಕಾವ್ಯಗಳು ಹಾಡುಗಬ್ಬಗಳಾಗಿ ಪ್ರಸಿದ್ಧಿಗೆ ಬಂದಿವೆ. ಇಂತಹ ಛಂದೋಪ್ರಕಾರ ಆರಂಭದಲ್ಲಿ ಲಿಂಗಬೇಧವಿಲ್ಲದೆ ಜನಸಾಮಾನ್ಯರಿಗೆ ಕಾವ್ಯರೂಪದಲ್ಲಿ ತಲುಪಬೇಕೆಂಬ ಆಶಯವನ್ನು ಹೊಂದಿರುವುದು ಗಮನಾರ್ಹವಾಗಿದೆ. ಶೈಲಿ, ಭಾಷೆಗಳ ವೈಶಿಷ್ಟ್ಯವನ್ನು ಗುರುತಿಸುವುದರ ಜೊತೆಗೆ ಸನ್ನಿವೇಶ ಸೃಷ್ಟಿ, ಪಾತ್ರ ನಿರ್ಮಾಣ ಮುಂತಾದವುಗಳಲ್ಲಿ ಕವಿ ಪ್ರತಿಭೆಯ ಹೊಳಹುಗಳನ್ನು ಎತ್ತಿತೋರಿಸಲಾಗಿದೆ. ಅಲ್ಲದೆ, ವರ್ಣನೆ, ರಸಪ್ರತಿಪಾದನೆ, ಅಲಂಕಾರ, ಛಂದಸ್ಸುಗಳಲ್ಲಿ ಕಂಡುಬರುವ ವೈಶಿಷ್ಟ್ಯತೆಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ. ಹಾಗಾಗಿ ಗಾದೆ, ಸೂಕ್ತಿ, ತಿಳುವಳಿಕೆಯ

ಮಾತು, ನುಡಿಗಟ್ಟು ಈ ಕಾವ್ಯದುದ್ದಕ್ಕೂ ಬಳಸಲಾಗಿದೆ. ಅಲಂಕಾರಗಳು ಕಾವ್ಯದ ಸೊಗಸನ್ನು ಹೆಚ್ಚು ಮಾಡಿವೆ. ಆದಿಪ್ರಾಸ ಕಡ್ಡಾಯವಾಗಿ ಅನುಸರಿಸಿದೆ. ಕೆಲವೊಂದು ಕಡೆ ಅಂತ್ಯಪ್ರಾಸವನ್ನು ಬಳಸಿದೆ. ಪ್ರಾಸದಲ್ಲಿ 'ಲ'ಕಾರ 'ಳ'ಕಾರಗಳ ಬೇಧವಿಲ್ಲದಂತೆ ಬಳಸಿರುವುದು ಕಂಡುಬರುತ್ತದೆ. ದೇಪರಾಜ ಕನ್ನಡದ ಮಹತ್ವದ ಕವಿಗಳಲ್ಲಿ ಒಬ್ಬನಾಗಿದ್ದು, ತನ್ನ ಕಾಲದ ಭಾಷೆ, ಶೈಲಿಗಳಿಗೆ ಪ್ರತಿನಿಧಿಯಾಗಿ ನಿಲ್ಲುತ್ತಾನೆ. ವಿಶಿಷ್ಟವಾದ ವರ್ಣನೆಗಳನ್ನೊಳಗೊಂಡ, ಹೊಸ ಛಂದಸ್ಸು ಒಳಗೊಂಡ ಕೃತಿಯಾಗಿರುವ ಹಿನ್ನೆಲೆಯಲ್ಲಿ ಈ ಕಾವ್ಯಕ್ಕೆ ಕವಿ ಸೊಬಗಿನ ಸೋನೆ ಎಂಬ ಹೆಸರಿಟ್ಟಿರುವುದು ಅರ್ಥಪೂರ್ಣವಾಗಿದೆ.

ಹಂಪಿಯ ಪರಿಸರದಲ್ಲಿ ಸರೋವರವು ಹೂ, ದುಂಬಿ, ಪಕ್ಷಿ ಜಲಚರಗಳಿಗೆ ನೆಲೆಯಾಗಿ ಸಿಹಿ ನೀರಿನ ತಾಣಗಳಾಗಿದ್ದವು. ಸಾಗರವು ಜಲಮೂಲವಾಗಿದ್ದು ಮುತ್ತು ರತ್ನಗಳ ಆಗರವಾಗಿತ್ತು. ಇದು ವಿಶಾಲ, ಆಳ, ಅಗಲ, ಗಾಂಭೀರ್ಯದಿಂದ ಕೂಡಿದ್ದು, ದೈವದಂತೆ ಪೂಜಿತಗೊಂಡಿದೆ. ಇದರಂತೆ ಪರ್ವತವೂ ಸಹ ಸಂಪತ್ತಿನ ನೆಲೆಯಾಗಿದ್ದು ಪ್ರಾಣಿ, ಪಕ್ಷಿ, ಗಿಡ ಮರಗಳಿಂದ ಆವರಿಸಿದ್ದು ಋಷಿ, ದೈವಗಳಿಗೆ ಆಶ್ರಯ ನೀಡಿ ಪೂಜ್ಯನೀಯವೆನಿಸಿವೆ. ವನಗಳಲ್ಲಿ ಸಿಂಹ, ಆನೆ, ಕರಡಿ, ಜಿಂಕೆ, ಕಾಡು ಕೋಣ, ಕಾಡು ಹಂದಿ, ಕಾಡು ಬೆಕ್ಕು, ಮುಂಗಸಿ, ಸಿಂಗಲೀಕ, ತೋಳ, ಸೀಳ್ನಾಯಿ ಮುಂತಾದ ಪ್ರಾಣಿಗಳಿದ್ದವು. ಹಾಗೆಯೇ ಗಿಳಿ, ಹಂಸ, ನವಿಲು, ಕೋಗಿಲೆ, ಕೊಕ್ಕರೆ, ಗೀಜುಗ, ಕೌಜುಗ, ಚಕ್ರವಾಕ, ಕಾಡುಕೋಳಿ ಮುಂತಾದ ಪಕ್ಷಿಗಳಿದ್ದು ಅವುಗಳನ್ನು ಬೇಡರು ಬೇಟೆಯಿಂದ ಸಂಗ್ರಹಿಸಿ ಮಾರಾಟ ಮಾಡುತ್ತಿದ್ದರು. ಅರಣ್ಯಗಳಲ್ಲಿ ಸಂಪಿಗೆ, ಸೇವಂತಿಗೆ, ಜಾಜಿ ವಿವಿಧ ಕಮಲ, ಮರುಗ, ದವನ, ಕೇದಗೆ ಮುಂತಾದ ಹೂಗಳು ಪ್ರಕೃತಿ ಸೌಂದರ್ಯವನ್ನು ಹೆಚ್ಚಿಸಿದ್ದವು. ಅಲ್ಲದೆ ಕಪಿಗಳ ಸಮೂಹ ಜನರನ್ನು ಬೆರಗುಗೊಳಿಸಿ ರಂಜಿಸುತ್ತಿದ್ದವು. ಈ ಎಲ್ಲಾ ಅಂಶಗಳಿಂದ ವಿಜಯನಗರ ಕಾಲದಲ್ಲಿ ಪ್ರಾಕೃತಿಕ ಪರಿಸರವು ಸಂಪತ್ತಿನಿಂದ ಕೂಡಿತ್ತೆಂದು ಈ ಕಾವ್ಯದಿಂದ ತಿಳಿದುಬರುತ್ತದೆ.

ಒಟ್ಟಾರೆಯಾಗಿ ಕವಿಯು ತನ್ನ ಕಾಲದ ಧರ್ಮ ಹಾಗೂ ದೈವಗಳನ್ನು ಪ್ರಧಾನವಾಗಿ ಸಮನ್ವಯಗೊಳಿಸಿದ್ದಾನೆ. ಏಕೆಂದರೆ ಶಿವ ತನ್ನ ಭಕ್ತರ ಅಪೇಕ್ಷೆಗಳನ್ನು ಈಡೇರಿಸುವ ದೈವವಾಗಿ ಕಂಡುಬರುತ್ತಾನೆ. ಪ್ರಮುಖವಾಗಿ ಮಹಾಕಾಳಿಯಂತಹ ಶಕ್ತಿ ದೇವತೆಯನ್ನು ಒಲಿಸಿಕೊಳ್ಳಲು ಭಕ್ತರು ತಮ್ಮನ್ನು ಉಗ್ರ ಪರೀಕ್ಷೆಗಳಿಗೆ ಒಡ್ಡಿಕೊಂಡು, ಕೆಲವೊಮ್ಮೆ ಬಲಿಯನ್ನು ಕೊಟ್ಟು ಇಷ್ಟಾರ್ಥಗಳನ್ನು ಪಡೆಯುತ್ತಿದ್ದರು. ಇಂತಹ ಸಂದರ್ಭಗಳಲ್ಲಿ ಇವರುಗಳಿಗೆ ಮುನಿ ಇಲ್ಲವೆ ತಪಸ್ವಿಗಳು ಮಾರ್ಗದರ್ಶನ ಮಾಡುತ್ತಿದ್ದರು. ಹಾಗೆಯೇ ಕೆಲವೊಮ್ಮೆ ಶಾಪಕೊಟ್ಟು ಎಚ್ಚರಿಸುತ್ತಿದ್ದರು, ಹಾಗಾಗಿ ತಪಸ್ವಿಗಳು ಧಾರ್ಮಿಕ ನಾಯಕತ್ವದ ಶ್ರೇಷ್ಠ ಮಾದರಿಗಳಾಗಿದ್ದರು. ಅಂದು ಕಾಪಾಲಿಕರು ವಾಮಾಚಾರದಿಂದ ಕೂಡಿದ್ದು ಭೈರವನ ಆರಾಧಕರಾಗಿದ್ದರೆಂದು ಕಂಡುಬರುತ್ತದೆ. ಅಲ್ಲದೆ ಅರವತ್ನಾಲ್ಕು ಯೋಗಿಣಿಯರು ಇದ್ದರೆಂದು ಗ್ರಹಿಸಬಹುದು. ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಅಂದು ಶೈವ ಧರ್ಮ ಪ್ರಸಾರದಲ್ಲಿದ್ದು ಜನರ ಜೀವನದಲ್ಲಿ ಹಾಸುಹೊಕ್ಕಾಗಿತ್ತೆಂದು ಸ್ಪಷ್ಟವಾಗುತ್ತದೆ. ದೈವಗಳ ಆರಾಧನೆಯಿಂದ ಜನ ತಮಗೊದಗಿದ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವುದೂ

ಅಲ್ಲದೇ ನಿಷ್ಠೆ, ಶ್ರದ್ಧೆ, ಏಕಾಗ್ರತೆ, ಅಚಲಭಾವಗಳು ಪ್ರಾಪ್ತವಾಗಿ ಎಂತಹ ಕಷ್ಟಗಳು ಎದುರಾದರೂ ಸಾಧಿಸಿ ಗೆಲ್ಲಬಹುದು ಎಂಬ ಆತ್ಮವಿಶ್ವಾಸವನ್ನು ತಂದುಕೊಂಡು ಸುಮಧುರ ಜೀವನ ಕಂಡುಕೊಳ್ಳುತ್ತಿದ್ದರೆಂಬುದನ್ನು ಗಮನಿಸಬಹುದು. ಸೊಬಗಿನ ಸೋನೆಯು ಕನ್ನಡ ಕಾವ್ಯ ಪರಂಪರೆಯಲ್ಲಿ ಪರಮತ ನಿಂದನೆಗಳಿಲ್ಲದೆ ಶೈವಧರ್ಮವನ್ನು ಜೀವನ ಧರ್ಮದೊಂದಿಗೆ ಸಾಕಾರಗೊಳಿಸಿದೆ.

ಅರಸರು ಸಕಲಕಲಾವಲ್ಲಭರಾಗಿದ್ದು ಜನಪರ ಕಾರ್ಯಗಳನ್ನು ಮಾಡುವ ಮೂಲಕ ಆದರ್ಶ ನಾಯಕರಾಗಿದ್ದರು. ಇವರು ನಡೆ ನುಡಿಗಳಲ್ಲಿ ಶುದ್ಧರಾಗಿದ್ದು ಕೆಲವೊಮ್ಮೆ ನಿರಂಕುಶ ಆಡಳಿತವನ್ನು ನಡೆಸುತ್ತಿದ್ದರು. ಆದರೆ ಕೆಲವು ಅರಸರು ಅತಿ ಮೂರ್ಖರು, ಚಪಲರು, ಜಡರು, ದಯಾಹೀನರು, ಸಂಪತ್ತು ಹಾಗೂ ಅಧಿಕಾರ ಮತದಿಂದ ಉಪದೇಶಗೈಯುತ್ತ ಹೇಯಕರವಾದ ಕೃತ್ಯವನ್ನು ಎಸಗುತ್ತಿದ್ದರು. ಅದಕ್ಕಾಗಿ ಇಂತವರಿಗೆ ಬಾಲ್ಯದಲ್ಲೇ ಕೌಶಲ್ಯ ತರಬೇತಿ, ಚಾರಿತ್ರ್ಯನಿರ್ಮಾಣ, ನೀತಿಪಾಲನೆ, ಧರ್ಮರಕ್ಷಣೆ ಮಾಡುವ ವಿದ್ಯಾಭ್ಯಾಸವನ್ನು ನೀಡಲಾಗುತ್ತಿತ್ತು. ಆಡಳಿತದಲ್ಲಿ ತಳವಾರರು ಬೇಹುಗಾರಿಕೆ, ರಕ್ಷಣೆ, ಆಜ್ಞೆಗಳನ್ನು ಕಾರ್ಯರೂಪಕ್ಕೆ ತರುವಲ್ಲಿ ಪ್ರಮುಖ ಪಾತ್ರವಾಗಿತ್ತು. ಅಂದು ಆಯುಧಗಳು ವಿವಿಧ ತೆರನಾಗಿದ್ದು ಇವುಗಳನ್ನು ಬೇಟೆಯಾಡಲು ಮತ್ತು ಯುದ್ಧದಲ್ಲಿ ಹೋರಾಡಲು ಹಾಗೂ ದೇವರಿಗೆ ಭಕ್ತಿಯನ್ನು ಸಮರ್ಪಿಸಲು ಬಳಸುತ್ತಿದ್ದರು.

ವಿಜಯನಗರ ಅರಸರ ಕಾಲದಲ್ಲಿ ಹಂಪಿಯ ಸುತ್ತ ಊರುಗಳು ಪ್ರಕೃತಿ ಸಂಪತ್ತಿನಿಂದ ಕೂಡಿದ್ದವು. ಅಲ್ಲಿ ಕೆರೆ, ತೊರೆ, ಕಾಲುವೆ, ಉದ್ಯಾನವನಗಳಿಂದ ಕಣ್ಮನಗಳಿಗೆ ಆನಂದವನ್ನು ಉಂಟುಮಾಡುವಂತಿದ್ದವು. ಅಲ್ಲಿ ನಾನಾ ಜಾತಿ, ವೃತ್ತಿಗಳಿಗೆ ಸಂಬಂಧಿಸಿದ ಕೇರಿಗಳಿದ್ದವು. ಅಲ್ಲಿ ಬೇಡರ ಕೇರಿಗಳು ಪ್ರತ್ಯೇಕವಾಗಿದ್ದವು. ಸೂಳೆಗೇರಿಗಳು ಶೃಂಗಾರದ ಪೇಟೆಯಂತಿದ್ದವು. ಪಟ್ಟಣಗಳ ಸುತ್ತ ಕಬ್ಬಿನ ತೋಟ, ತುಂಬಿದ ಕೆರೆ, ಕೊಳ, ಮಡು, ತೆಂಗು, ಅಡಿಕೆ, ಫಲಭರಿತ ಮರಗಳು ಇನ್ನು ಮುಂತಾದವುಗಳಿದ್ದು, ವ್ಯಾಪಾರ ವಹಿವಾಟಿಗೆ ಪಟ್ಟಣ ಕೇಂದ್ರವಾಗಿದ್ದವು. ಗಂಡು ಮಗುವನ್ನು ಹೆತ್ತ ತಾಯಿಯರನ್ನು ವಿಶೇಷವಾಗಿ ಆದರಿಸುತ್ತಿದ್ದರು. ಹಾಗೆಯೇ ಆ ಮಕ್ಕಳನ್ನು ಉತ್ತಮರನ್ನಾಗಿ ಮಾಡಲು ಪ್ರಾಮುಖ್ಯತೆ ನೀಡಿದ್ದರು. ಸ್ತ್ರೀಯನ್ನು ಹಲವು ಉಪಮೆಗಳೊಂದಿಗೆ ವರ್ಣಿಸಿ ಅವಳ ಚೆಲುವು, ಸೊಗಸನ್ನು ಕವಿ ವ್ಯಕ್ತಪಡಿಸಿರುವುದನ್ನು ಕಂಡುಕೊಳ್ಳಲಾಗಿದೆ. ವೇಶ್ಯಾವಾಟಿಕೆ ಪ್ರಚಲಿತವಿದ್ದು ಇದರಿಂದ ಪುರುಷರು ಮೋಸಕ್ಕೊಳಗಾಗದೆ ಎಚ್ಚರಿಕೆಯಿಂದಿರಲು ಸೂಚಿಸಿರುವುದು ಕವಿಯ ವಿಶೇಷ ಕಾಳಜಿ ಎನ್ನಬಹುದು. ಬೇಡರು ತಮ್ಮ ವೃತ್ತಿಯನ್ನು ಬೇಟೆಯನ್ನಾಗಿ ಮಾಡಿಕೊಂಡು ಪ್ರಾಣಿ, ಪಕ್ಷಿ, ವನ, ಸಂಪನ್ಮೂಲಗಳನ್ನು ಸಂಗ್ರಹಿಸಿ ವ್ಯವಹಾರಿಕ ಬದುಕನ್ನು ಸಾಗಿಸುತ್ತಿದ್ದರು. ಜೂಜು ಕಟ್ಟೆಗಳಿದ್ದು ಅಲ್ಲಿ ರಾಜಕುಮಾರರು ಪಾಲ್ಗೊಂಡು ಆನೆ ಕುದುರೆಗಳನ್ನು ಗೆಲ್ಲುತ್ತಿದ್ದರು. ಸಮಾಜದಲ್ಲಿ ಕಳ್ಳರು, ಸುಳ್ಳುಗಾರರು, ಚಾಡಿಕೋರರು, ವಂಚಕರು, ಕಡುಮೂರ್ಖರು, ಅವಿವೇಕಿಗಳು, ನಿರಾಸಕ್ತರು, ನಿರ್ದಯಿಗಳು, ದುಷ್ಟರು, ದುರ್ವ್ಯಸನಿಗಳು, ಮುಂತಾದ ದುಷ್ಟರು ಇರುತ್ತಿದ್ದು ಇಂತವರ ಸಹವಾಸದಿಂದ ದೂರವಿರಬೇಕೆಂದು ಹೇಳುತ್ತಾ ವಿಶೇಷವಾಗಿ ಹೆಂಡತಿ, ಮಕ್ಕಳು, ನೆಂಟರು, ಸೈನಿಕರು, ಶಿಷ್ಯರನ್ನು ಸುರಕ್ಷಿತವಾಗಿರಬೇಕೆಂದು ನೀತಿಯನ್ನು ಹೇಳಿದ್ದಾನೆ.

ವಿಜಯನಗರ ಅರಸರ ಕಾಲದಲ್ಲಿ ನಂಬಿಕೆ, ಆಚರಣೆ, ಸಂಪ್ರದಾಯಗಳು ಸಾಮಾಜಿಕ ವ್ಯವಸ್ಥೆಯ ಭಾಗವಾಗಿ ಮೂಲ ಸ್ವರೂಪದಲ್ಲೇ ಆಚರಣೆಗೆ ಬಂದಿವೆ. ಅಂದಿನ ಜನತೆ ರಾಕ್ಷಸರ ತೊಂದರೆಗಳಿಂದ ಪಾರಾಗಲು ಅಸಂಖ್ಯಾತ ಕುರಿ, ಕೋಣಗಳನ್ನು ಬಲಿಕೊಟ್ಟು ಶಾಂತಿಯನ್ನು ಕಾಪಾಡಿಕೊಳ್ಳುತ್ತಿದ್ದರು. ಮಹಾಕಾಳಿಯಂತ ದೇವಿಗೆ ವಿವಿಧ ರೀತಿಯ ಪ್ರಾಣಿಗಳನ್ನು ಬಲಿಕೊಡುವುದರ ಜೊತೆಗೆ ಕೆಲವೊಮ್ಮೆ ನರಬಲಿಯನ್ನು ಕೊಡುತ್ತಿದ್ದರು. ಅಪರೂಪವಾಗಿ ಕೆಲವೊಮ್ಮೆ ಭಕ್ತರು ತಾವೇ ಆತ್ಮಬಲಿಯಾಗುತ್ತಿದ್ದರು. ದೈವೀ ಪುರುಷರು ಧರ್ಮವನ್ನು ಜಗತ್ತಿಗೆ ತೋರಿಸಲು ವಿವಿಧ ತೆರನಾದ ಪವಾಡಗಳನ್ನು ಮಾಡುತ್ತ ಬಂದಿದ್ದು, ಇವುಗಳಿಂದ ಭಕ್ತರಲ್ಲಿ ಧರ್ಮದ ಕುರಿತು ಅಚಲವಾದ ನಂಬಿಕೆ ಇರುವುದು ಕಂಡುಬರುತ್ತದೆ. ಪ್ರಾಪ್ತ ವಯಸ್ಸು ಹಾಗೂ ಮನಸ್ಸುಳ್ಳ ಗಂಡು ಹೆಣ್ಣು ಪರಸ್ಪರ ಒಂದಾಗಲು ಗುರುಹಿರಿಯರ ಹಾಗೂ ದೈವದ ಆಶೀರ್ವಾದದೊಂದಿಗೆ ಸಾಮಾಜಿಕವಾಗಿ ಸರಳವಾದ ರೀತಿಯಲ್ಲಿ ನಡೆಯುವ ಒಪ್ಪಂದವೇ ಮದುವೆ.

ಹೆಣ್ಣಿನ ಮಾನ, ಪ್ರಾಣ ಕಳೆಯುವ ಅಪಹರಣದಂತಹ ಕೃತ್ಯಗಳನ್ನು ತಡೆಯಲು ಮುಂದಾಗುವ ವ್ಯಕ್ತಿಗಳನ್ನು ವೀರರೆಂದು ಅಂದಿನ ಸಮಾಜ ಗೌರವಿಸುತ್ತಿತ್ತು. ಇದೊಂದು ಸಂಪ್ರದಾಯವೆಂಬಂತೆ ಪ್ರಚಲಿತವಾಗಿತ್ತು. ಕಾಮಶಾಸ್ತ್ರವು ಮದನಶಾಸ್ತ್ರ, ಅಂಗಜಶಾಸ್ತ್ರ, ರತಿಶಾಸ್ತ್ರ, ಪ್ರೇಮಕಲೆ ಎಂಬ ಹೆಸರಿನಿಂದ ಗುರುತಿಸಿಕೊಂಡಿದ್ದು ಈ ಶಾಸ್ತ್ರಕ್ಕೆ ಸಂಬಂಧಿಸಿದ ಪ್ರತಿಯೊಂದು ವಿಷಯವನ್ನು ಅಂದಿನ ಕಾಲದ ಹೆಣ್ಣುಮಕ್ಕಳು ಚಾಣಾಕ್ಷತನದಿಂದ ವ್ಯಾಖ್ಯಾನಿಸಿ ತಿಳಿಸುವಂತಹ ಕಲೆಯಲ್ಲಿ ಪರಿಣಿತರಾಗಿದ್ದರು. ಆ ಕಾಲದಲ್ಲಿ ಸ್ಮಶಾನವು ಭಯಾನಕವಾಗಿತ್ತು. ಅಲ್ಲಿ ಮುರಿದ ವಿಮಾನ, ಕಟ್ಟುಬಿಚ್ಚಿದ ಸಿದ್ದಿಗೆ, ಹರಿದು ಬಿಸಾಡಿದ ಹೂಮಾಲೆಗಳು, ಮೊರ, ಬಾಗಿನ, ಬಲಿಪಿಂಡಗಳು ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದವು. ಹೆಣ್ಣು ಪಿಶಾಚಿಗಳು, ಶಾಕಿಣಿಯರು, ಕಾಡುಸಿದ್ಧರು ಇದ್ದು ಅಸಂಗತವಾಗಿ ವರ್ತಿಸುತ್ತಿದ್ದರು. ಆದರೆ ಮಹಾಸತಿಯರು ತಮ್ಮ ಪತಿಯನ್ನು ಹಾರೈಸುತ್ತಿದ್ದುದು ವಿಶೇಷವಾಗಿತ್ತು. ಈ ಎಲ್ಲ ನಂಬಿಕೆ, ಆಚರಣೆ, ಸಂಪ್ರದಾಯಗಳು ಧರ್ಮದ ಚೌಕಟ್ಟಿನಲ್ಲೇ ಅಸ್ತಿತ್ವ ಪಡೆದಿವೆ. ಇವು ಕಾಲಾನಂತರದಲ್ಲಿ ಹಲವಾರು ಬದಲಾವಣೆ ಹೊಂದುತ್ತ ಸಾಗಿಬಂದಿರುವುದನ್ನು ಪ್ರಚಲಿತ ಸಮಾಜದಲ್ಲಿಯೂ ಕಾಣಬಹುದು.

ಈ ಕಾವ್ಯದ ಅಧ್ಯಯನ ಭಾಷೆ ಮತ್ತು ಛಂದಸ್ಸು ಒಂದು ಅಧ್ಯಯನ, ಸಾಮಾಜಿಕ ಅಂಶಗಳ ಒಂದು ಅಧ್ಯಯನ, ಕಾವ್ಯಮೀಮಾಂಸೆಯ ಒಂದು ಅಧ್ಯಯನ, ಸಾಮಾಜಿಕ ಮತ್ತು ರಾಜಕೀಯ ಪ್ರಜ್ಞೆ ಒಂದು ಅಧ್ಯಯನ ಧರ್ಮ ಮತ್ತು ಸಾಂಸ್ಕೃತಿಕ ಅಧ್ಯಯನ, ತೌಲನಿಕ ಅಧ್ಯಯನ, ಸಮಾಜ ವಿಜ್ಞಾನಗಳಲ್ಲಿ ಕೂಡ ಆ ಕಾಲಘಟ್ಟದಲ್ಲಿ ಸಮಕಾಲೀನ ಸಾಹಿತ್ಯದ ಸಾಮಾಜಿಕ, ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ, ಆರ್ಥಿಕ ಮುಂತಾದ ಅಂಶಗಳನ್ನು ಒಳಗೊಂಡ ಅಂತರ್‌ಶಿಸ್ತೀಯ ಅಧ್ಯಯನ ಮಾಡುವ ಸಂಶೋಧಕರಿಗೆ ಅನುಷಂಗಿಕ ಆಕರವಾಗಿಯೂ ಹಾಗೂ ಮಹಿಳಾ ಸಂವೇದನೆ ಮುಂತಾದ ಹತ್ತು ಹಲವು ರೀತಿಯಲ್ಲಿ ಈ ಕಾವ್ಯ ಅಧ್ಯಯನ ಕೈಗೊಳ್ಳಬಹುದಾಗಿದೆ.



# ಪರಾಮರ್ಶನ ಗ್ರಂಥಗಳು

## ಪ್ರಾಚೀನ ಕಾವ್ಯಗಳು


ಕುಶಾಲಪ್ಪಗೌಡ. ಕೆ. (ಅನು), ಮಧುರಾವಿಜಯಂ ಅಥವಾ ವೀರಕಂಪರಾಯ ಚರಿತಂ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧.

ನಗುವಿನಹಳ್ಳಿ ಪಿ. ರತ್ನ (ಸಂ), ವೀರಜನಪತಿ ವಿರಚಿತ ವಿಕ್ರಮವಿಲಾಸ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೯೮.

ಬಸವರಾಜ ಚ. ಜವಳಿ, ದೇವೇಂದ್ರಕುಮಾರ ಸಿ. ಹಕಾರಿ (ಸಂ), ಬಸವರಾಜದೇವರ ರಗಳೆ, ಜಗದ್ಗುರು ಕೊಟ್ಟೂರು ಸ್ವಾಮಿ ಮಠ, ಗ್ರಂಥಮಾಲೆ ಹಂಪಿ, ೧೯೮೦.

ಬಸವರಾಧ್ಯ ಎನ್ (ಸಂ), ತ್ರಿಪುರದಹನ ಸಾಂಗತ್ಯ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೦.

ಮಂಜುನಾಥ ಜಿ.ಜಿ. (ಸಂ), ಮೋಹನ ತಂರಗಿಣಿ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೯

ಶಂಕರ್ ಡಿ.ಎ. (ಸಂ), ಶ್ರೀಶುಕ ಸಪ್ತತಿ ಶ್ರೀ ಚಿಕ್ಕುಪಾಧ್ಯಾಯ, ಮೈಸೂರು ವಿಶ್ವವಿದ್ಯಾಲಯ, ಪ್ರಸಾರಾಂಗ, ೨೦೧೧.

ಸಣ್ಣಯ್ಯ ಬಿ.ಎಸ್. (ಸಂ), ದೇಪರಾಜ ವಿರಚಿತ ಸೊಬಗಿನ ಸೋನೆ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೭೦.

ಸಣ್ಣಯ್ಯ ಬಿ.ಎಸ್. (ಸಂ), ಲಕ್ಷ್ಮಯ್ಯ ಕವಿ ವಿರಚಿತ ಮದನಮೋಹನಿಯ ಕಥೆ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೭೨.

ಸಣ್ಣಯ್ಯ ಬಿ.ಎಸ್. (ಸಂ), ಪದ್ಮಕವಿ ವಿರಚಿತ ವರ್ಧಮಾನ ಚರಿತಂ, ಭಾರತೀಯ ಜ್ಞಾನಪೀಠ ಪ್ರಕಾಶನ, ದೆಹಲಿ, ೧೯೭೫.

ಸಣ್ಣಯ್ಯ ಬಿ.ಎಸ್. (ಸಂ), ಸೊಬಗಿನ ಸೋನೆ ಸಂಗ್ರಹ, ಪ್ರಬುದ್ಧ ಪ್ರಕಾಶನ ಮೈಸೂರು, ೧೯೭೧

ಸತ್ಯನಾಥ ಟಿ.ಎಸ್. (ಸಂ), ಕಪೋತಚರಿತೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೭.

**ಶಾಸನ ಸಂಪುಟಗಳು**

ದೇವರಕೊಂಡಾರೆಡ್ಡಿ ಮತ್ತಿತರರು,(ಸಂ), ಹಂಪಿ ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂ-೩, ೨೦೦೦.

ಬಾ.ರಾ.ಗೋಪಾಲ (ಸಂ), ಎಫಿಗ್ರಾಫಿಯ ಕರ್ನಾಟಕ, ಹಾಸನ ಜಿಲ್ಲೆ ಸಂಪುಟ-೯, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ೧೯೯೦.

ಎಫಿಗ್ರಾಪಿಯ ಕರ್ನಾಟಕ, ಬೌರಿಂಗ್ ಪೇಟೆ ಮತ್ತು ಚಿಂತಾಮಣಿ.

Mysore and Coorg from Inscriptions, First edition, 1908, second edition Asian Educational Service, 1986.

**ನಿಘಂಟುಗಳು/ಗೆಜೆಟಿಯರ್**

ಬಸವರಾಧ್ಯ ಎನ್. (ಪ್ರಸಂ.), ಕನ್ನಡ ನಿಘಂಟು, ಸಂಪುಟ-೭, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೧೦.

ಬಸವರಾಧ್ಯ ಎನ್. (ಪ್ರಸಂ.), ಕನ್ನಡ ನಿಘಂಟು, ಸಂಪುಟ-೮, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೧೦.

ಮರಿಯಪ್ಪಭಟ್ಟ ಎಂ. (ಪ್ರಸಂ.), ಕಿಟೆಲ್‌ರ ಕನ್ನಡ ಇಂಗ್ಲಿಷ್ ನಿಘಂಟು, ಸಂಪುಟ-೪, ೧೯೭೧.

ಮರಿಯಪ್ಪಭಟ್ಟ ಎಂ. (ಪ್ರಸಂ.), ಕಿಟೆಲ್‌ರ ಕನ್ನಡ ಇಂಗ್ಲಿಷ್ ನಿಘಂಟು, ಸಂಪುಟ-೨, ೧೯೭೭.

ಯಜ್ಞನಾರಾಯಣ ಉಡುಪ, ಪುರಾಣ ಭಾರತ ಕೋಶ, ಕನ್ನಡ ಪುಸ್ತಕ ಪ್ರಾಧಿಕಾರ, ೨೦೦೮.

ವೆಂಕಟಸುಬ್ಬಯ್ಯ ಜಿ. (ಪ್ರಸಂ.), ಕನ್ನಡ ನಿಘಂಟು, ಸಂಪುಟ-೨, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೧೦.

ವೆಂಕಟಸುಬ್ಬಯ್ಯ ಜಿ. (ಪ್ರಸಂ.), ಕನ್ನಡ ನಿಘಂಟು, ಸಂಪುಟ-೪, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೧೦.

ವೆಂಕಟಸುಬ್ಬಯ್ಯ ಜಿ. (ಪ್ರಸಂ.), ಕನ್ನಡ ನಿಘಂಟು, ಸಂಪುಟ-೫, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೧೦.

ವೆಂಕಟಸುಬ್ಬಯ್ಯ ಜಿ. (ಪ್ರಸಂ.), ಕನ್ನಡ ನಿಘಂಟು, ಸಂಪುಟ-೬, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

ಹಂಪ ನಾಗರಾಜಯ್ಯ (ಪ್ರ.ಸಂ.), ದ್ರಾವಿಡ ಭಾಷಾ ಜ್ಞಾತಿ ಪದಕೋಶ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೧೪.

ಹಯವದನರಾವ್ ಸಿ., ಮೈಸೂರು ಗೆಜೆಟಿಯರ್, ಭಾಗ-೨.

**ಸಂಶೋಧನಾ ಪ್ರಬಂಧಗಳು**

ಕರ್ಕಿ ಡಿ.ಎಸ್., ಕನ್ನಡ ಛಂದೋವಿಕಾಸ, ಭಾರತ ಬುಕ್ ಡಿಪೋ, ಧಾರವಾಡ, ೧೯೭೩.

ಚಿದಾನಂದ ಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ

ನಾಗಭೂಷಣ ಸಿ., ಏಕಾಂತರಾಮಯ್ಯ ಮತ್ತು ಆದಯ್ಯ ಒಂದು ತುಲನಾತ್ಮಕ ಅಧ್ಯಯನ, ಬಸವಸಮಿತಿ, ಬೆಂಗಳೂರು, ೨೦೦೫.

ಪುಟ್ಟಸ್ವಾಮಿ ವೈ.ಎಸ್., ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಶೃಂಗಾರ ನಿರೂಪಣೆ, ಅಪ್ರಕಟಿತ ಪಿಎಚ್.ಡಿ. ಪ್ರಬಂಧ, ಮೈಸೂರು ವಿಶ್ವವಿದ್ಯಾನಿಲಯ, ೨೦೧೨.

ಮದನಕುಮಾರ್ ಎ.ಆರ್., ಬಿ.ಎಸ್. ಸಣ್ಣಯ್ಯ ವ್ಯಕ್ತಿ ಮತ್ತು ಸಾಹಿತ್ಯ ಅಪ್ರಕಟಿತ ಪಿಎಚ್.ಡಿ. ಪ್ರಬಂಧ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೨೦೦೬.

ವರದರಾಜ್ ರಾವ್, ಕುಮಾರರಾಮನ ಸಾಂಗತ್ಯಗಳು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೬೬.

ವಿಜಯಲಕ್ಷ್ಮಿ ಆರ್.ಎನ್., ಕನ್ನಡ ಸಾಂಗತ್ಯ ಪ್ರಕಾರ ಒಂದು ಸಂಕ್ಷಿಪ್ತ ಪರಿಚಯ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ೧೯೮೨.

ವೀರಣ್ಣ ರಾಜೂರ, ಕನ್ನಡ ಸಾಂಗತ್ಯ ಸಾಹಿತ್ಯ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೫.

ಶಾಂತಿನಾಥ ದಿಬ್ಬದ, ಪಂಪಭಾರತ ಒಂದು ಸಾಂಸ್ಕೃತಿಕ ಅಧ್ಯಯನ, ಶ್ರೀ ಸಿದ್ಧಲಿಂಗೇಶ್ವರ ಬುಕ್‌ಡಿಪೊ ಮತ್ತು ಪ್ರಕಾಶನ, ಗುಲ್ಬರ್ಗಾ, ೨೦೧೧.

ಹನುಮಂತರಾಯಪ್ಪ ಎಚ್., ಧರ್ಮ ಮತ್ತು ಕಾವ್ಯ ಧರ್ಮ, ಸುಮುಖ ಪ್ರಕಾಶನ, ಬೆಂಗಳೂರು, ೨೦೦೬.

**ಪರಾಮರ್ಶನ ಗ್ರಂಥಗಳು**

ಅಂಜನಪ್ಪ ಯಳನಾಡು (ಸಂ), ಧರ್ಮ ಮತ್ತು ಮುಕ್ತ ವಿಚಾರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕಲಬುರ್ಗಿ ಎಂ.ಎಂ., ಮಾರ್ಗ-೩, ಕರ್ನಾಟಕ ಬುಕ್ ಏಜೆನ್ಸಿ, ೧೯೯೮.

ಕೃಷ್ಣಶಾಸ್ತ್ರೀ ಎ.ಆರ್., ಕಥಾಮೃತ, ಗೀತಾ ಬುಕ್‌ಹೌಸ್, ಮೈಸೂರು, ೨೦೦೯.

ಕೃಷ್ಣಕುಮಾರ ಸಿ.ಪಿ. (ಸಂ), ಕನ್ನಡ ಛಂದಸ್ಸಿನ ಚರಿತ್ರೆ, ಸಂಪುಟ-೨, ಮೈಸೂರು ವಿಶ್ವವಿದ್ಯಾಲಯ, ೧೯೮೦.

ಗುಂಡಪ್ಪ ಡಿ.ವಿ., ಸಂಸ್ಕೃತಿ, ೧೯೬೯, ಕಾವ್ಯಾಲಯ, ಮೈಸೂರು

ಚಿದಾನಂದಮೂರ್ತಿ ಎಂ. ಛಂದೋತರಂಗ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೩.

ತಿಪ್ಪೇರುದ್ರಸ್ವಾಮಿ ಎಚ್. ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಿ.ವಿ.ಕೆ. ಮೂರ್ತಿ, ೨೦೦೩.

ದಿವಾಕರ ಆರ್.ಆರ್., (ಪ್ರಸಂ.), ಕರ್ನಾಟಕ ಪರಂಪರೆ, ಸಂಪುಟ-೨, ೧೯೭೦, ಮೈಸೂರು ರಾಜ್ಯ ಸರ್ಕಾರ, ಬೆಂಗಳೂರು.

ದೀಕ್ಷಿತ್ ಜಿ.ಎಸ್. ವಿಶ್ವೇಶ್ವರಯ್ಯ ಎಂ.ಎ. (ಸಂ) ಸಂಗಮರ ಕಾಲದ ವಿಜಯನಗರ ಅದರ ಇತಿಹಾಸ ಮತ್ತು ಸಂಸ್ಕೃತಿಗಳ ಅಧ್ಯಯನ, ೧೯೯೧, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಬೆಂಗಳೂರು.

ನರಸಿಂಹಾಚಾರ್ಯ ಆರ್., ಕರ್ಣಾಟಕ ಕವಿಚರಿತೆ, ಸಂಪುಟ-೨ ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೧೯೭೩.

ನಾಗೇಂದ್ರಪ್ಪ ಕೆ. ಹದಿನೈದನೆಯ ಶತಮಾನದ ಕನ್ನಡ ಸಾಹಿತ್ಯ ಚರಿತ್ರೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೬.

ನಾಗರತ್ನಮ್ಮ, ಸಾಂಗತ್ಯ ಸಾಹಿತ್ಯ, ಚೇತನ ಬುಕ್‌ಹೌಸ್, ಮೈಸೂರು, ೨೦೧೧.

ಭಾನುಮತಿ ವೈ.ಸಿ. (ಸಂ), ಬತ್ತೀಸ ಪುತ್ಥಳಿ ಕಥೆಗಳು, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೯.

ಮರಿಯಪ್ಪ ಭಟ್ಟ, ಕನ್ನಡ ಸಂಸ್ಕೃತಿ, ೧೯೬೭.

ಮಾಳವಾಡ ಸ.ಸ. ಸಾಹಿತ್ಯ ಸಂಗಮ, ಜಯಪ್ರಕಾಶನ, ಧಾರವಾಡ, ೧೯೭೦.

ಮುಗಳಿ ರಂ.ಶ್ರೀ, ಕನ್ನಡ ಸಾಹಿತ್ಯ ಚರಿತ್ರೆ, ೧೯೭೧.

ಮುಗಳಿ ರಂ.ಶ್ರೀ, ಪ್ರಾಚೀನ ಕನ್ನಡ ಸಾಹಿತ್ಯ ರೂಪಗಳು, ಸಮಾಜ ಪುಸ್ತಕಾಲಯ, ಧಾರವಾಡ, ೧೯೯೭.

ರಮೇಶ ಕೆ.ವಿ., ಕರ್ನಾಟಕ ಶಾಸನ ಸಮೀಕ್ಷೆ, ಬೆಂಗಳೂರು ವಿಶ್ವವಿದ್ಯಾಲಯ, ೧೯೭೧.

ರಂಗಣ್ಣ ಎಸ್.ವಿ. ಶೈಲಿ, ಕಾವ್ಯಾಲಯ ಪ್ರಕಾಶನ, ಮೈಸೂರು, ೧೯೪೪.

ವಿದ್ಯಾಶಂಕರ್ ಎಸ್. ವೀರಶೈವ ಸಾಹಿತ್ಯ ಚರಿತ್ರೆ, ಸಂಪುಟ-೩, ಭಾಗ-೧, ಪ್ರಿಯದರ್ಶಿನಿ ಪ್ರಕಾಶನ, ಹಂಪಿನಗರ, ಬೆಂಗಳೂರು, ೨೦೧೪

ವೀರಣ್ಣ ಸಿ., ಕನ್ನಡ ಸಾಹಿತ್ಯ ಚಾರಿತ್ರಿಕ ಬೆಳವಣಿಗೆ

ವೆಂಕಟಾಚಲಶಾಸ್ತ್ರಿ .ಟಿವಿ., ಕನ್ನಡ ಛಂದಸ್ಸು, ಡಿ.ವಿ.ಕೆ. ಮೂರ್ತಿ, ಮೈಸೂರು, ೧೯೭೬.

ಶಿವರುದ್ರಪ್ಪ ಜಿ.ಎಸ್. (ಪ್ರ.ಸಂ.), ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೭, ಸಂಪುಟ-೪, ಭಾಗ-೧.

ಶಿವರುದ್ರಪ್ಪ ಜಿ.ಎಸ್., ವಿಮರ್ಶೆಯ ಪೂರ್ವ-ಪಶ್ಚಿಮ.

ಶಿವರುದ್ರಪ್ಪ ಜಿ.ಎಸ್., ಕನ್ನಡ ಸಾಹಿತ್ಯ ಸಮೀಕ್ಷೆ.

ಶಿವರುದ್ರಪ್ಪ ಜಿ.ಎಸ್., ನಾರಾಯಣ ಕೆ.ವಿ., ಕಾವ್ಯಾರ್ಥ ಪದಕೋಶ.

ಶಿವಲಿಂಗಯ್ಯ ಜಿ.ಎ. (ಸಂ), ದಶಕುಮಾರ ಚರಿತೆ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೨೦೧೧

ಶ್ರೀಕಂಠಯ್ಯ ಬಿ.ಎಂ., ಕನ್ನಡ ಕೈಪಿಡಿ, ಸಂಪುಟ-೨.

ಸದಾನಂದ ಕನವಳ್ಳಿ, ಕೆರಿಮನಿ ಸಿ.ವಿ., (ಸಂ), ವೀರಶೈವ ಸಾಹಿತ್ಯ ಸಮೀಕ್ಷೆ, ಕನ್ನಡ ಪುಸ್ತಕ ಪ್ರಾಧಿಕಾರ, ೨೦೧೦.

ಸೀತಾರಾಮಯ್ಯ ಎಂ.ವಿ., ಕಾವ್ಯಮೀಮಾಂಸೆ, ಸಂಪುಟ-೪, ಭಾಗ-೧, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೧೦.

ಹಂಪನಾಗರಾಜಯ್ಯ, ಸಾಂಗತ್ಯ ಕವಿಗಳು, ಸ್ವಪ್ನ ಬುಕ್‌ಹೌಸ್, ಬೆಂಗಳೂರು, ೨೦೧೨.

ಹಾ.ಮಾ.ನಾಯಕ (ಪ್ರ.ಸಂ.), ಕನ್ನಡ ಸಾಹಿತ್ಯ ಚರಿತ್ರೆ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಸಂಪುಟ-೫.

ಹಿರೇಮಠ ಆರ್.ಸಿ., ಮಹಾಯಾತ್ರೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮.

ಹಿರೇಮಠ ಆರ್.ಸಿ., ಸುಂಕಾಪುರ ಎಂ.ಎಸ್. (ಸಂ), ಶಾಂತಲಿಂಗ ದೇಶೀಕಕೃತ, ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರ ಭಾಗ-೨, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೮.

### ಲೇಖನಗಳು

ತಾರಾನಾಥ ಎನ್.ಎಸ್., ದೇಪರಾಜನ ಅಮರುಕ, ಪರಿಶೋಧನ ಭಾರತೀ ಪ್ರಕಾಶನ, ಮೈಸೂರು, ೧೯೮೧.

ರಾಚಪ್ಪ ಆರ್., ಸೊಬಗಿನ ಸೋನೆಯ ಛಂದಸ್ಸು, ಕರ್ನಾಟಕ ಭಾರತಿ, ಸಂಪುಟ-೩, ಸಂಚಿಕೆ-೪, ಏಪ್ರಿಲ್, ೧೯೭೧.

ಸಣ್ಣಯ್ಯ ಬಿ.ಎಸ್., ಸಾಂಗತ್ಯದ ಆದಿಕವಿ ದೇಪರಾಜ, ಇಕ್ಷುಗಂಗಾ, ಕನ್ನಡ ಸಾಹಿತ್ಯ ಪರಿಷತ್ತು, ಮಂಡ್ಯ, ೧೯೭೦.

ಹಂಪ ನಾಗರಾಜಯ್ಯ, ಸಾಂಗತ್ಯದ ಕೆಲವು ಸಂಗತಿಗಳು, ಪ್ರಬುದ್ಧ ಕರ್ನಾಟಕ, ೧೯೬೦-೬೧, ಸಂಪುಟ-೪೨, ಸಂಚಿಕೆ-೧.

### ಇಂಗ್ಲಿಷ್ ಕೃತಿಗಳು

Desai P.B., History of Karnataka, 1970.

Nilakanta sastri K.A., A history of South India, first pub.1955.

Nilakanta sastri K.A., A history of South India, 3rd edition, 1966.




